ಸಂಪುಟ ೨ ಸಂಚಿಕೆ ೨ ಜುಲೈ ೨೦೦೦

# ಮಹಿಳಾ ಅಧ್ಯಯನ

## ದಕ್ಷಿಣಾಯನ ಸಂಚಿಕೆ






ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

# ಮಹಿಳಾ ಅಧ್ಯಯನ
(ದಕ್ಷಿಣಾಯನ ಸಂಚಿಕೆ)

ಸಂಪಾದಕರು
ಡಾ. ಎಚ್. ಎಸ್. ಶ್ರೀಮತಿ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

**MAHILA ADHYAYANA** (Half Yearly) Vol 2-2 (July - Dec. 2000)
Ed.by Dr. H. S. Sreemathi
Published by The Director, Prasaranga
Kannada University, Hampi, Vidyaranya 583 276

ಪುಟ : VIII + 150





ಪ್ರಕಾಶಕರು
ಪ್ರೊ. ಎ. ವಿ. ನಾವಡ
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಬಿಡಿ ಪತ್ರಿಕೆ : ರೂ. ೧೫.೦೦
ವಾರ್ಷಿಕ ಚಂದಾ : ರೂ. ೩೦.೦೦

ಮುಖಪುಟ ವಿನ್ಯಾಸ
ಕೆ.ಕೆ.ಮಕಾಳಿ

ಅಕ್ಷರ ಸಂಯೋಜನೆ
ಸಾವಳಗಿ ಶಿವಲಿಂಗೇಶ್ವರ ಗ್ರಾಫಿಕ್ಸ್, ಕಮಲಾಪುರ

ಮುದ್ರಣ
ತ್ವರಿತ ಮುದ್ರಣ ಆಫ್‌ಸೆಟ್ ಪ್ರಿಂಟರ್ಸ್
ಗದಗ

# ಹೀಗೊಂದು ಪ್ರಕರಣ

ಸಮಕಾಲೀನ ಕನ್ನಡ ಲೇಖಕಿಯರಲ್ಲಿ ಬಾನು ಮುಷ್ತಾಕ್ ಅವರು ಹಲವು ಕಾರಣಗಳಿಂದಾಗಿ ಖ್ಯಾತರಾಗಿದ್ದಾರೆ. ಅಲ್ಪಸಂಖ್ಯಾತ ಸಮುದಾಯದವರಾಗಿ, ಅದರಲ್ಲೂ ಮಹಿಳೆಯರ ಅನುಭವ ಲೋಕದ ದನಿಯಾಗಿ ಕ್ರಿಯಾಶೀಲರಾಗಲು ಅವರು ಎರಡೆರಡು ಕ್ಷೇತ್ರಗಳನ್ನು ಆರಿಸಿಕೊಂಡಿದ್ದಾರೆ. ಸಾಹಿತಿಯಾಗಿ ಸೃಜನಶೀಲ ಅಭಿವ್ಯಕ್ತಿಯಲ್ಲಿ ತೊಡಗಿದ್ದಾರಾದರೆ, ವಕೀಲರಾಗಿ ಲೌಕಿಕ ಕ್ರಿಯಾಶೀಲತೆಯಲ್ಲೂ ತೊಡಗಿದ್ದಾರೆ. ಯಾವುದೇ ಕಾರ್ಯಕ್ಷೇತ್ರದಲ್ಲಿಯೂ ಮಹಿಳೆಯ ಸ್ವತಂತ್ರ ಪ್ರವೃತ್ತಿಯನ್ನು ಈ ಸಮಾಜ ಇಷ್ಟಪಡುವುದಿಲ್ಲ. ಕೆಲವೊಮ್ಮೆ ಏನೂ ಮಾಡಲಾಗದ್ದಕ್ಕೆ ಸುಮ್ಮನಾಗಬಹುದು. ಆದರೂ ಸಾಧ್ಯವಾದೆಡೆಗಳಲ್ಲೆಲ್ಲಾ ಕಿರಿಕಿರಿಯನ್ನಾದರೂ ಸೃಷ್ಟಿಸುವ ಪ್ರಯತ್ನಗಳು ನಡೆಯುತ್ತವೆ. ಬಾನು ಮುಷ್ತಾಕ್ ಅವರಿಗೆ ಧರ್ಮದ ಹೆಸರಿನಲ್ಲಿ ಹಾಕಿರುವ ಬಹಿಷ್ಕಾರ ಕೂಡ ಇಂತಹ ಪುರುಷ ಅಹಂಕಾರದ ಒಂದು ಪ್ರದರ್ಶನವೇ ಆಗಿದೆ. ನಮ್ಮ ಸಂವಿಧಾನ ಪ್ರಜೆಗಳನ್ನು ನಿಯಂತ್ರಿಸುವ ಪಾರುಪತ್ಯವನ್ನು ಧರ್ಮಕ್ಕೆ ಕೊಟ್ಟಿದೆ. ದುರ್ಬಲರನ್ನು, ಮಹಿಳೆಯರನ್ನು ಬೆದರಿಸಿ ಮೂಲೆಗೊತ್ತರಿಸಿ ಬಿಡಲು ಮೂಲಭೂತವಾದಿ ಧರ್ಮಗಳಿಗೆ ಚಾವಟಿಯೊಂದು ಸಿಕ್ಕಂತಾಗಿದೆ. ಬಾನು ಮುಷ್ತಾಕ್ ವಿದ್ಯಾವಂತೆ, ಹೆಸರು ಮಾಡಿದ ಸಾಹಿತಿ, ಕಾನೂನು ಕ್ಷೇತ್ರದಲ್ಲೇ ನೆಲೆಗೊಂಡಿರುವ ನ್ಯಾಯವಾದಿ. ಇಷ್ಟೊಂದು ಪ್ರಬಲ ಹಿನ್ನೆಲೆಯುಳ್ಳ ಮಹಿಳೆಗೆ ಕಾರಣವೇ ಅಲ್ಲದ ಕಾರಣಕ್ಕೆ ಬಹಿಷ್ಕಾರದ ಶಿಕ್ಷೆ. ಆಕೆ ಮಾಡಿದ ತಪ್ಪಾದರೂ ಏನು? ಮಸೀದಿಗೆ ಹೋಗಿ ಪ್ರಾರ್ಥನೆ ಸಲ್ಲಿಸಲು ಮಹಿಳೆಗೂ ಧರ್ಮಾನುಸಾರವಾಗಿಯೇ ಅವಕಾಶವಿದೆ. ಮಹಿಳೆಯರಿಗೆ ಮಸೀದಿಯ ಪ್ರವೇಶ ನಿಷಿದ್ಧ ಎಂದು ಕುರಾನಿನಲ್ಲಿ ಹೇಳಿಲ್ಲ' ಎಂದು ತಮ್ಮ ಭಾಷಣದಲ್ಲಿ ಹೇಳಿದರಂತೆ. ಇದರಲ್ಲಿ ಅಭಿಪ್ರಾಯ ಭೇದದ ಮಾತು ಇರುವುದು ಸಾಧ್ಯ. ಅಪರಾಧ, ಶಿಕ್ಷೆ ಎಂಬ ಮಾತುಗಳಿಗೆ ಅವಕಾಶವೆಲ್ಲಿದೆ? ಅತ್ಯಂತ ಖಂಡನಾರ್ಹವಾದ ಈ ಪ್ರಸಂಗ ಇನ್ನಾವ ಹಂತಗಳಿಗೆ ಬೆಳೆಯಬಹುದೆಂಬುದು ಬೇರೆ ಮಾತು. ಆದರೆ ಕಾನೂನು, ಧರ್ಮ, ನ್ಯಾಯ, ಶಿಕ್ಷೆ ಎಂಬುವು ಎಲ್ಲೆಲ್ಲಿಯವರೆಗೆ ಕೈಗಳನ್ನು ಚಾಚುತ್ತಾ, ಪ್ರಜಾರಕ್ಷಣೆಯ ತಮ್ಮ ಮೂಲ ಉದ್ದೇಶಗಳನ್ನೇ ಮರೆಯಬಹುದು ಎಂಬುದು ಆತಂಕದ ವಿಷಯ. ಹೀಗೆ ಸಾತ್ವಿಕ ಉದ್ದೇಶಗಳನ್ನು ಮರೆತು ಅಹಂಕಾರವನ್ನು ಮೆರೆಯುವ ಅವಕಾಶಗಳನ್ನು ಮಠ, ಮಸೀದಿಗಳು ಬಳಸುತ್ತಾ ದುರ್ಬಲರ ಮೇಲೆ

ಮಹಿಳೆಯರ ಮೇಲೆ ಚಾವಟಿ ಬೀಸಿದರೆ ಸಾಮಾಜಿಕರಿಗೆ ರಕ್ಷಣೆ ಎಲ್ಲಿ ಸಿಗಬೇಕು? ಯಾವ ಅರ್ಥದಲ್ಲೂ ಬಾನು ಮುಷ್ತಾಕ್ ದುರ್ಬಲ ವರ್ಗದವರಲ್ಲ. ಆಕೆ ಒಂದು ಹೆಣ್ಣಾಗಿದ್ದಾರೆ ಎಂಬುದೊಂದನ್ನು ಹೊರತುಪಡಿಸಿ. ಅಂಥವರ ಮೇಲೆ ಧಾಳಿ ಮಾಡುವುದೂ ಇಷ್ಟೊಂದು ಸುಲಭ ಎಂದ ಮೇಲೆ ಶಿಕ್ಷಣ, ಆರ್ಥಿಕತೆ, ಮೊದಲಾದ ಹಲವು ಹತ್ತು ಸಾಮಾಜಿಕ ಸ್ತರಗಳಲ್ಲಿ ತೀರಾ ಅಂಚಿಗೆ ಒತ್ತರಿಸಿ ಹೋಗಿರುವ ದುರ್ಬಲರ ಪಾಡು ಊಹೆಗೂ ನಿಲುಕಲಾರದ್ದು.

'ಮಹಿಳಾ ಅಧ್ಯಯನ'ದ ಸಂಚಿಕೆಗಳಲ್ಲಿ ಮಹಿಳೆಯರ ಬದುಕಿನ ಇಂಥಾ ಏಳುಬೀಳುಗಳನ್ನು ಕುರಿತು ಚಿಂತನೆಗಳನ್ನು ಪ್ರಸ್ತಾಪ ಮಾಡಲು ಪ್ರಯತ್ನಗಳು ನಡೆದಿವೆ. ಈ ದಿಸೆಯಲ್ಲಿ ಸೂಕ್ಷ್ಮ ಸಂವೇದನೆಯ ವಿದ್ವಾಂಸರು ನೆರವಾಗುತ್ತಿದ್ದಾರೆ. ಇನ್ನಷ್ಟು ವ್ಯಾಪ್ತಿಯಲ್ಲಿ ಈ ನೆರವು ದೊರೆಯಲೆಂದು ಪತ್ರಿಕೆ ನಿರಂತರವಾಗಿ ಹಾರೈಸುತ್ತದೆ.

ಕಷ್ಟಸಾಧ್ಯವಾದ ಈ ಪ್ರಯತ್ನದಲ್ಲಿ ನಮ್ಮ ಕುಲಪತಿಯವರು ದೊಡ್ಡ ಬೆಂಬಲವಾಗಿದ್ದಾರೆ. ಅವರಿಗೆ ಗೌರವ ಪೂರ್ವಕ ವಂದನೆಗಳು. ವಿಭಾಗದ ಸಹೋದ್ಯೋಗಿಗಳ ನೆರವು ಸ್ಮರಣೀಯ. ಪತ್ರಿಕೆಯ ಡಿ.ಟಿ.ಪಿ. ಮುದ್ರಣ, ಪ್ರಕಾಶನಗಳ ಹೊಣೆ ಹೊತ್ತಿರುವ ನಮ್ಮ ಪ್ರಸಾರಾಂಗದ ನಿರ್ದೇಶಕರಿಗೂ, ಸಿಬ್ಬಂದಿ ವರ್ಗಕ್ಕೂ ಅನಂತ ವಂದನೆಗಳು.

**ಎಚ್. ಎಸ್. ಶ್ರೀಮತಿ**
ಮಹಿಳಾ ಅಧ್ಯಯನ ವಿಭಾಗ

# ಪರಿವಿಡಿ

ಮಾತುಕತೆ

# ಅಥಣಿ ದೇವದಾಸಿ ವಿಮೋಚನಾ ಸಂಸ್ಥೆ

*ಶೈಲಜಾ ಹಿರೇಮಠ*

ಜೋಗತಿ, ಬಸವಿ, ಲೇಸಿ, ಮುರುಳಿ, ಪಾತರದವರು ಇವರೆಲ್ಲರ ಸಂಪ್ರದಾಯ ಆಚರಣೆಗಳನ್ನು ಅವರ ಸಾಂಸ್ಕೃತಿಕ ಅನನ್ಯತೆಯೆಂದು ಗುರುತಿಸಲಾಗದು. ಅವುಗಳಿಗೆ ಸಾಮಾಜಿಕ ಗೌರವವಿಲ್ಲ. ಇದೇ ರೀತಿಯಲ್ಲಿ ಆಫ್ರಿಕದಲ್ಲಿ ಕಂಕುಬೈನ್ಸ್ ಇದ್ದಾರೆ. ಅಲ್ಲಿಯ ಪುರುಷರು ಕಂಕುಬೈನ್ಸ್ ಬೇಕಾಗಿದ್ದಾರೆ ಎಂದು ಬಹಿರಂಗವಾಗಿ ಜಾಹಿರಾತನ್ನು ನೀಡುವರು. ಹಾಸಿಗೆಯಿಂದ ಹಿಡಿದು ಅವನ ಎಲ್ಲ ಬೇಕುಬೇಡಗಳನ್ನು ನೋಡಿಕೊಳ್ಳುವ ಜವಾಬ್ದಾರಿ ಅವಳ ಮೇಲಿರುತ್ತದೆ. ಆಧುನಿಕ ಜಗತ್ತಿನ ಕಪ್ಪು ಮಹಿಳೆಯರು ಈ ಸಾಂಸ್ಕೃತಿಕ ಅನನ್ಯತೆಯನ್ನು ಪ್ರಶ್ನಿಸಿದ್ದಾರೆ. ಪುರುಷಾಕೃತಿ ವ್ಯವಸ್ಥೆಯನ್ನು ಛಿದ್ರಗೊಳಿಸಲು ಅನೇಕರು ಈ ಬಗೆಯ ಪ್ರಶ್ನೆಗಳನ್ನು ಕೇಳಿದ್ದಾರೆ. ತೀವ್ರವಾಗಿ ಹೋರಾಡುತ್ತಿದ್ದಾರೆ. ಭಾರತೀಯ ಸಂದರ್ಭದಲ್ಲಿಯೂ ಇಪ್ಪತ್ತನೆಯ ಶತಮಾನವು ಸಾಂಸ್ಕೃತಿಕ ಅನನ್ಯತೆಯನ್ನು ವಿಭಿನ್ನ ನೆಲೆಯಲ್ಲಿ ವ್ಯಾಖ್ಯಾನಿಸಿದೆ. ವೈಯಕ್ತಿಕ ಹಾಗೂ ಸಾಮಾಜಿಕ ಜೀವನದಲ್ಲಿ ಮುಜುಗರ ತರುವ ಇಂತಹ ಸಂಗತಿಗಳು ಸಾಂಸ್ಕೃತಿಕ ಅನನ್ಯತೆ ಹೇಗಾದಾವು? ಧರ್ಮಕೇಂದ್ರಿತ ಲೈಂಗಿಕ ದಾಸಿಯರು ಇವೊತ್ತಿಗೂ ಮೇಲ್ವರ್ಗದವರು ಆರೋಪಿಸಿದ ಸಾಂಸ್ಕೃತಿಕ ವಿಶಿಷ್ಟತೆಯನ್ನು ತಮ್ಮದೆಂದೇ ಮುಗ್ಧವಾಗಿ ನಂಬಿಕೊಂಡು ಬಂದಿರುವರು. ಶತಮಾನಗಳಿಂದಲೂ ನಂಬಿಕೊಂಡು ಬಂದ ಇಂತಹ ಧಾರ್ಮಿಕ ಅಂಧತ್ವವನ್ನು ಅಳಿಸುವುದು ಅಷ್ಟು ಸುಲಭವಲ್ಲ.

ಧರ್ಮಕೇಂದ್ರಿತ ಲೈಂಗಿಕ ದಾಸಿಯರಲ್ಲಿ ಪ್ರಧಾನವಾಗಿ ಎರಡು ಬಗೆಗಳು ಕಾಣಸಿಕೊಳ್ಳುತ್ತವೆ. ೧.ದೇವಾಲಯದ ಸೂಳೆಯರು, ೨. ದೇವರ ಸೂಳೆಯರು. ಪಾತರದವರು ದೇವಾಲಯದ ಸೂಳೆಯರಾದರೆ, ಬಸವಿ, ಲೇಸಿ, ಮುರುಳಿ ಇವರೆಲ್ಲರೂ ದೇವರ ಸೂಳೆಯರು. ಎರಡನೆಯ ಬಗೆಯಲ್ಲಿ ಕಾಣಿಸಿಕೊಳ್ಳುವ ಈ ಮೂವರನ್ನು ಒಟ್ಟಂದದಲ್ಲಿ 'ಬಸವಿಯರು'ಎಂದು ಕರೆಯುವುದು ಹೆಚ್ಚು ಸೂಕ್ತವೆನಿಸುತ್ತದೆ. ಬಸವ ಎಂದರೆ ದೇವರಿಗೆ ಬಿಟ್ಟ ಗೂಳಿ. ಅದರ ಸ್ತ್ರೀಲಿಂಗರೂಪವೇ ಬಸವಿ. ದೇವರ ಹೆಸರಿನಲ್ಲಿ ಬಿಟ್ಟ ಅವಳಿಗೆ ಯಾವ ಸಾಮಾಜಿಕ ನಿರ್ಬಂಧಗಳೂ ಇರುವುದಿಲ್ಲ. ಇಂದು ಸಮಾಜಕೇಂದ್ರಿತ ಹಾಗೂ ಧರ್ಮಕೇಂದ್ರಿತ ಲೈಂಗಿಕದಾಸಿಯರೆಲ್ಲರನ್ನು ಒಟ್ಟಾರೆ ಸೇರಿಸಿ ದೇವದಾಸಿಯರೆಂದೇ ಗುರುತಿಸುತ್ತಿದ್ದಾರೆ. ಬಿ.ಎಲ್.ಪಾಟೀಲರ ಸಂಸ್ಥೆಯ ಹೆಸರು 'ದೇವದಾಸಿ ವಿಮೋಚನಾ

ಕೇಂದ್ರ' ಎಂದು ಇದ್ದುದರಿಂದ ಆ ಪದದೊಂದಿಗೆ ನನ್ನ ತಗಾದೆ ಇದ್ದರೂ ಅದರ ಬಳಕೆ ಇಲ್ಲಿ ಅನಿವಾರ್ಯವಾಗಿದೆ.

ದೇವದಾಸಿ ವ್ಯವಸ್ಥೆ ಸಮಾಜದಲ್ಲಿ ಇಂದಿಗೂ ದಟ್ಟವಾಗಿದೆ. ಆದ್ದರಿಂದ ಅಂತಹ ವಿಷಯಕ್ಕೆ ಕೈಹಾಕುವುದು, ಅವರ ಸುಧಾರಣೆಗಾಗಿ ಪ್ರಯತ್ನಿಸುವುದು ಅಷ್ಟು ಸುಲಭವಲ್ಲ. ಇದೇ ಕೆಲಸವನ್ನು ವಿದೇಶಿಯರು, ಹೊರ ರಾಜ್ಯದವರು ಮಾಡಿದರೆ, ನಮ್ಮ ಜನ ಅದನ್ನು ಬಹಳ ಕೊಂಡಾಡುತ್ತಾರೆ. ಕನ್ನಡದವರಾಗಿದ್ದು ಮೇಲ್ಜಾತಿಗೆ ಸೇರಿದ್ದರೆ ಅವರನ್ನು, ಅವರ ಸಾಮಾಜಿಕ ಕೆಲಸವನ್ನು ಸಂಶಯದಿಂದಲೇ ನೋಡಲಾಗುತ್ತದೆ ಹಾಗೂ ಅಪಮಾನಿಸಲಾಗುತ್ತದೆ. ಇಂತಹ ಸಾಮಾಜಿಕ ಇಕ್ಕಟ್ಟಿನಲ್ಲಿ ಬಿ.ಎಲ್.ಪಾಟೀಲರು, ಶೋಷಿತ ಸಮುದಾಯಕ್ಕೆ ಸೇರಿದ ದೇವದಾಸಿಯರನ್ನೇ ಕೇಂದ್ರವಾಗಿಟ್ಟುಕೊಂಡು ಕೆಲಸ ನಿರ್ವಹಿಸುತ್ತಿರುವುದು ಸಣ್ಣ ವಿಷಯವೇನಲ್ಲ. ಪಾಟೀಲರ ಸ್ಥಾನದಲ್ಲಿ ಹೆಣ್ಣೊಬ್ಬಳಿದ್ದರೆ ಎಂದು ಕಲ್ಪನೆ ಮಾಡಿಕೊಳ್ಳಲು ಕೂಡ ಭಯವಾಗುತ್ತದೆ. ಸಾಮಾಜಿಕ ಕೆಟ್ಟ ಕಣ್ಣುಗಳು ಅವಳನ್ನು ಹುರಿದು ಮುಕ್ಕಿಬಿಡುತ್ತಿದ್ದವು. ಪಾಟೀಲರು ಗಂಡಾಗಿದ್ದರಿಂದಲೇ ಅವರಿಂದ ಇಂಥ ಕೆಲಸ ಸಾಧ್ಯವಾಗಿದೆ. ಅದರರ್ಥ ನಾನು ಅವರ ಪರಿಶ್ರಮವನ್ನು ಸರಳೀಕರಣ ಗೊಳಿಸುತ್ತಿಲ್ಲ. ವಸ್ತುಸ್ಥಿತಿಯನ್ನು ಹೇಳುತ್ತಿದ್ದೇನೆ ಅಷ್ಟೇ. ಅವರು ದೇವದಾಸಿಯರ ಕುರಿತಂತೆ ಯೋಜನೆಯನ್ನು ಕೈಗೆತ್ತಿಕೊಂಡ ಆರಂಭದ ದಿನಗಳಲ್ಲಿ ಅನೇಕ ಸಾಮಾಜಿಕ ಅಪಮಾನಗಳನ್ನು, ನೋವುಗಳನ್ನು ಉಂಡಿದ್ದಾರೆ. ಅವರು ಗಂಡಾಗಿದ್ದರಿಂದಲೇ ಇವೆಲ್ಲವನ್ನು ನುಂಗಿಕೊಂಡು ಈ ಕ್ಷೇತ್ರದಲ್ಲಿ ಮುಂದುವರೆಯಲು ಸಾಧ್ಯವಾಯಿತು.

ಬಿ.ಎಲ್. ಪಾಟೀಲರ ಪೂರ್ಣ ಹೆಸರು ಬಸವಪ್ರಭು ಲಕಮಗೌಡ ಪಾಟೀಲ ಎಂದು. ೧೯೪೬ ಡಿಸೆಂಬರ್ ೨೨ರಲ್ಲಿ ಬೆಳಗಾಂವ ಜಿಲ್ಲೆಯ ಮಲ್ಲಾಬಾದ್‌ನ ಶ್ರೀಮಂತ ಕುಟುಂಬದಲ್ಲಿ ಏಕೈಕ ಪುತ್ರನಾಗಿ ಜನಿಸಿದರು. ಮಗ ಆಸ್ತಿಯನ್ನು ನೋಡಿಕೊಂಡರೆ ಸಾಕು ಎನ್ನುವ ಸಾಧರಣ ನಿಲುವು ಅವರ ತಂದೆಯವರದಾಗಿತ್ತು. ಆದರೆ ಸಂಪ್ರದಾಯಸ್ಥ ಕುಟುಂಬದಲ್ಲಿ ಜನಿಸಿದ ಬಸವಪ್ರಭು ಅವರ ನಿಲುವು ಹಾಗೂ ಬದುಕಿನ ಕ್ರಮ ಭಿನ್ನ ವಾಗಿತ್ತು. ಹನ್ನೊಂದನೆಯ ವಯಸ್ಸಿನಲ್ಲಿಯೇ ತಂದೆಯನ್ನು ಕಳೆದುಕೊಂಡು ಅವರು ಶ್ರೀಮಂತ ಮನೆತನದ ದೊಡ್ಡ ಜವಾಬ್ದಾರಿಯನ್ನು ಹೊತ್ತುಕೊಂಡರು. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿಯೇ ಅವರು ಬಿ.ಎ., ಎಲ್.ಎಲ್. ಬಿಯನ್ನು ಧಾರವಾಡದಲ್ಲಿ ಪೂರೈಸಿದರು. ಬಸವ, ರಾಮಕೃಷ್ಣ ಪರಮಹಂಸ ಹಾಗೂ ವಿವೇಕಾನಂದರ ವಿಚಾರಧಾರೆಗಳು ಪಾಟೀಲರ ಮೇಲೆ ಗಾಢವಾದ ಪ್ರಭಾವವನ್ನು ಬೀರಿದವು.

ಜೋಗನ್ ಶಂಕರ ಅವರ ಸಲಹೆ ಬಿ.ಎಲ್. ಪಾಟೀಲರ ಜೀವನಕ್ಕೆ ಮಹತ್ವದ ತಿರುವನ್ನು ತಂದುಕೊಟ್ಟಿತು. ೧೯೮೫ರಲ್ಲಿ ದೇವದಾಸಿ ವಿಮೋಚನಾ ಪುನರ್ವಸತಿ ಸಂಘವನ್ನು ಸ್ಥಾಪಿಸಿ, ಶೋಷಿತ ವರ್ಗದ ಸೇವೆಗೆ ನಾಂದಿಯನ್ನು ಹಾಡಿದರು. ಆರಂಭದ ದಿನಗಳಲ್ಲಿ ವಿಪರೀತ ಮಾನಸಿಕ ಹಿಂಸೆಯನ್ನು ಅನುಭವಿಸಿದರು. ಆದರೂ ವಿಚಲಿತರಾಗಲಿಲ್ಲ.

ಅವರ ಮಕ್ಕಳಿಗಾಗಿ ಆಧುನಿಕ ಶಿಕ್ಷಣ ನೀಡುವ ಪ್ರಯತ್ನವನ್ನು ಮಾಡಿದರು. ಅದರ ಮೂಲ ಉದ್ದೇಶ ಶೋಷಿತರನ್ನು ವೈಚಾರಿಕತೆಗೆ ಮುಖಮಾಡಿಸಿ, ಅವರಲ್ಲಿ ವಿಶೇಷ ಬಗೆಯ ಜಾಗ್ರತೆಯನ್ನು ಮೂಡಿಸುವುದೇ ಆಗಿದೆ. ಇವೊತ್ತಿಗೂ ಕರ್ನಾಟಕದ ಬಹುಭಾಗಗಳಲ್ಲಿ ದಲಿತ ಸಮುದಾಯಗಳು ಅಕ್ಷರ ಲೋಕಕ್ಕೆ ಅಪರಿಚಿತವಾಗಿ ಉಳಿದಿವೆ. ಇದನ್ನು ಮನಗಂಡೇ ಪಾಟೀಲರು ವಿಮೋಚನಾ ಶಾಲೆಯನ್ನು ತೆರೆಯಲು ಪ್ರಯತ್ನಿಸಿದರು. ಶಾಲೆಗಾಗಿ ಜಾಗವನ್ನು ದಾನ ನೀಡಿದ ದಾನಿ, ಜನರ ಟೀಕೆಗೆ ಹೆದರಿ ಅದನ್ನು ಮತ್ತೆ ಹಿಂತೆಗೆದುಕೊಂಡರು. ಪಾಟೀಲರು ಕಂಗೆಟ್ಟರು. ಈ ಸಂದಿಗ್ಧ ಪರಿಸ್ಥಿತಿಯಲ್ಲಿ ಆಸರೆಯಾಗಿ ನಿಂತವರೆಂದರೆ ಪಾಟೀಲರ ಧರ್ಮಪತ್ನಿ ಶಾಂತಮ್ಮನವರು. ಅವರು ತಮ್ಮ ಹೆಸರಿನಲ್ಲಿದ್ದ ಎಂಟು ಎಕರೆ ಜಮೀನನ್ನು ಪತಿಯು ಕೈಗೊಂಡ ಕೆಲಸಕ್ಕೆ ದಾನವಾಗಿ ನೀಡಿದರು. ಇಂದು ಅದು ಬಹುದೊಡ್ಡ ಶಾಲೆಯಾಗಿ ಬೆಳೆದು ನಿಂತಿದೆ. ನಮ್ಮ ದೇಶದಲ್ಲಿ ದೇವದಾಸಿಯರ ಮಕ್ಕಳ ಶಿಕ್ಷಣದ ಕಾಳಜಿಯನ್ನು ಕೇಂದ್ರವಾಗಿಟ್ಟು ಹುಟ್ಟಿದ ಏಕೈಕ ಶಿಕ್ಷಣ ಸಂಸ್ಥೆ ಇದಾಗಿದೆ. ಅದು ವಿಮೋಚನಾ ಗ್ರಂಥಾಲಯ, ವಿಮೋಚನಾ ಪ್ರಕಾಶನವನ್ನು ಹೊಂದಿದೆ.

ಈ ದೇಶದಲ್ಲಿ ಮೊಟ್ಟಮೊದಲ ಬಾರಿಗೆ ಪಾಟೀಲರೇ 'ವಿಮೋಚನಾ ಸಹಕಾರ ಸಂಘವನ್ನು' ೧೯೯೨ರಲ್ಲಿ ಸ್ಥಾಪಿಸಿದರು. ಮಹಿಳೆಯರೇ ಇದರ ಸಂಚಾಲಕರಾಗಿರುವುದು ಈ ಸಂಸ್ಥೆಯ ಹೆಗ್ಗಳಿಕೆಯಾಗಿದೆ. ಸತತ ಹದಿನೈದು ವರ್ಷಗಳ ಸಾಮಾಜಿಕ ಸೇವೆಯ ಅನುಭವದ ಹಿನ್ನೆಲೆಯಲ್ಲಿ ದೇವದಾಸಿಯರ ದೈಹಿಕ ಹಾಗೂ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸುವುದು ಅಷ್ಟು ಸುಲಭವಲ್ಲ. ಅದಕ್ಕಾಗಿ ಅವರಲ್ಲಿ ನೈತಿಕತೆಯನ್ನು ತುಂಬುವ ಜವಾಬ್ದಾರಿ ಈ ಸಮಾಜದ ಪ್ರತಿಯೊಬ್ಬ ಪ್ರಜ್ಞಾವಂತ ಪ್ರಜೆಯ ಮೇಲಿದೆ ಎನ್ನುವುದು ಅವರ ಖಚಿತ ನಿಲುವು. ದೇವದಾಸಿಯರಿಗೆ ಆರ್ಥಿಕ ಸಬಲೀಕರಣವನ್ನು ನೀಡಲು ಅನೇಕ ಯೋಜನೆಗಳನ್ನು ಪಾಟೀಲರು ರೂಪಿಸಿದರು. ಆದರೆ ಅವುಗಳಾವುವೂ ಸಫಲವಾಗಲಿಲ್ಲ. ಇದು ಅವರಿಗೆ ಬಹುದೊಡ್ಡ ಕೊರಗು.

ತುಳಿತಕ್ಕೊಳಗಾದ ಅಲಕ್ಷಿತ ಮಹಿಳಾ ಸಮುದಾಯಗಳನ್ನು ಜಾಗತಿಕ ಅನುಸಂಧಾನಕ್ಕೆ ಒಯ್ಯುವ ಅಗತ್ಯವಿದೆ. ಕೇಂದ್ರ ಹಾಗೂ ರಾಜ್ಯ ಸರಕಾರಗಳು ದೇವದಾಸಿಯರಿಗಾಗಿ ಅನೇಕ ಅಭಿವೃದ್ಧಿ ಯೋಜನೆಗಳನ್ನು ರೂಪಿಸಿಕೊಂಡಿದೆಯಾದರೂ, ಅವುಗಳು ತಲುಪಬೇಕಾದಲ್ಲಿ ತಲುಪಿಲ್ಲ. 'ಅಭಿವೃದ್ಧಿ' ಪರಿಕಲ್ಪನೆಯನ್ನು ಪುನರ್ ವ್ಯಾಖ್ಯಾನಿಸಬೇಕಿದೆ. ಕೆಳವರ್ಗದ ಜನರ ಅಭಿವೃದ್ಧಿಗಾಗಿ ಪರಿಶ್ರಮಿಸುತ್ತಿರುವವರು - ಅದು ಸರಕಾರವಿರಬಹುದು, ಸಂಘಸಂಸ್ಥೆಯಾಗಿರಬಹುದು - ಅವರಿಗೆ ವಿಶೇಷ ಉಪಕಾರ ಮಾಡುತ್ತಿರುವಂತೆ ವರ್ತಿಸುತ್ತವೆ. ಅವರಿಂದ ಕಿತ್ತುಕೊಂಡ ಹಕ್ಕುಗಳನ್ನು ಅವರಿಗೆ ಮರಳಿ ನೀಡುವುದೇ ಅಭಿವೃದ್ಧಿ. ಈ ನಿಟ್ಟಿನಲ್ಲಿ ಬಿ.ಎಲ್. ಪಾಟೀಲರ ದೇವದಾಸಿ ವಿಮೋಚನಾ ಸಂಸ್ಥೆಯ ಸ್ತುತ್ಯಾರ್ಹ ಕೆಲಸಗಳನ್ನು ಮಾಡಿದೆ. ದಿನಾಂಕ ೨೭-೦೫-೨೦೦೦ರಲ್ಲಿ ಅವರೊಂದಿಗೆ ನಡೆಸಿದ ಸಂದರ್ಶನದ ಆಯ್ದ ಭಾಗಗಳನ್ನು ನಿಮ್ಮೊಂದಿಗೆ ಹಂಚಿಕೊಂಡಿದ್ದೇನೆ.



**ಜಾತಿ ಸಂಬಂಧಿ ಸಮಾಜದ ಕುರಿತು ನಿಮ್ಮ ಅಭಿಪ್ರಾಯವೇನು?**

ಜಾತಿ, ಧರ್ಮಗಳು ಮಾನವ ನಿರ್ಮಿತವಾದವುಗಳು. ಪ್ರಬಲರು ತಮ್ಮ ಜಾತಿ ಶ್ರೇಷ್ಠ ಎಂಬ ಪರಿಕಲ್ಪನೆಯನ್ನು ಹುಟ್ಟುಹಾಕಿ, ಅದನ್ನು ಈ ಸಮಾಜ ಒಪ್ಪುವಂತೆ ಮಾಡಿದರು. ಉಳಿದವರನ್ನು ಅಂದರೆ ದುರ್ಬಲರನ್ನು ಕೆಳಜಾತಿಗೆ ಸೇರಿಸಿ ಅವರನ್ನು ಬಳಸಿಕೊಂಡರು. ಅದನ್ನು ಕೂಡ ನ್ಯಾಯಯುತಗೊಳಿಸಿದರು. ಹೀಗೆ ಶೋಷಣೆಗೆ ಒಳದಾರಿಗಳನ್ನು ಕಂಡುಕೊಂಡರು. ಯಾವುದೇ ಜಾತಿ-ಮತ-ಪಂಥಗಳಿಗೆ ಪಾವಿತ್ರ್ಯ ಎನ್ನುವುದೇ ಇಲ್ಲ. ಆದರೆ ಬುದ್ಧಿವಂತರು, ಪ್ರಬಲರು ಅದಕ್ಕೆ ಪಾವಿತ್ರ್ಯತೆ, ಅಪಾವಿತ್ರ್ಯತೆಯನ್ನು ಆರೋಪಿಸಿದರು.

**ಹಿಂದೂ ವರ್ಣಾಶ್ರಮ ಧರ್ಮದಲ್ಲಿ ಜಾತಿಯ ಜೊತೆಜೊತೆಯಲ್ಲಿಯೇ ಬೆಳೆದು ಬಂದ ಲಿಂಗಸಂಬಂಧಿ ಆಯಾಮಗಳ ಬಗ್ಗೆ ನಿಮಗೇನಿಸುತ್ತೆ?**

ಜಾತಿಯಂತೆ ಲಿಂಗಭೇದವನ್ನು ಹುಟ್ಟುಹಾಕಿದವರೂ ನಾವುಗಳೇ. ಮಹಿಳೆಯರಲ್ಲಿ ಇಲ್ಲದ ದೌರ್ಬಲ್ಯವನ್ನು ಇದೆ ಎಂದು ಶತಮಾನಗಳಿಂದ ನಂಬಿಸಿ ವಂಚಿಸಲಾಯಿತು. ಇತ್ತೀಚಿನ ದಿನಮಾನಗಳಲ್ಲಿ ನಾನು ಕಂಡುಕೊಂಡಂತೆ ಹೊಸಬಗೆಯ ಎಚ್ಚರ ಅವರನ್ನು ಆವರಿಸಿದೆ. ಅದೊಂದು ನವೀನ ಆಶಾದಾಯಕ ವಾತಾವರಣವನ್ನು ನಿರ್ಮಿಸುತ್ತಿದೆ. ಇದರಿಂದಾಗಿ ಪುರುಷ ನಿರ್ಮಿತ ಎಷ್ಟೋ ಮೌಲ್ಯಗಳು ಅರ್ಥಹೀನವಾಗುತ್ತಿವೆ. ಅದು ಹಾಗಾಗಬೇಕಾಗಿದೆ ಕೂಡ. ಆಯಾ ಜಾತಿಯ ಹಿನ್ನೆಲೆಯಲ್ಲಿ ಬೆಳೆದು ಬಂದ ಮಹಿಳೆಯರ ಶೋಷಣೆಗಳು, ಸಮಸ್ಯೆಗಳು ಭಿನ್ನ-ಭಿನ್ನವಾಗಿವೆ. ಮೇಲ್ವರ್ಗದ ಮತ್ತು ಮಧ್ಯಮ ವರ್ಗದ ಮಹಿಳೆಯರ ಸಮಸ್ಯೆಗಳಿಗಿಂತಲೂ ಕೆಳವರ್ಗದ, ಕೆಳಜಾತಿಯ ಮಹಿಳೆಯರ ಸಮಸ್ಯೆಗಳು ಭೀಕರವಾಗಿವೆ. ಜಾತಿ, ಲಿಂಗ ಹಾಗೂ ಆರ್ಥಿಕ ಮೂಲದ ಕಾರಣಗಳಿಂದ ಅವಳ ಬದುಕನ್ನು ವ್ಯವಸ್ಥಿತವಾಗಿ ದುರ್ಗಮ ಮಾರ್ಗಕ್ಕೆ ತಳ್ಳಲಾಗಿದೆ. ಇಲ್ಲಿ ನಾನು ಮೇಲ್ವರ್ಗ, ಮೇಲ್ಜಾತಿಯ ಜನರನ್ನು ದೂಷಿಸಲು ಇಷ್ಟಪಡುವುದಿಲ್ಲ. ಅದೇ ಸಮಾಜದ ಪುರುಷರೇ ಅವಳ ಮೇಲಿನ ಲೈಂಗಿಕ ಶೋಷಣೆಗೆ ಮೂಲಕಾರಣರಾಗಿದ್ದಾರೆ. ಈ ಸಂಗತಿಯನ್ನು ನಾನು ಬಹಳ ಬಾರಿ ಕಂಡುಕೊಂಡ ನಂತರವೇ ಹೇಳುತ್ತಿದ್ದೇನೆ. ಹೆತ್ತ ತಾಯಿ, ಒಡಹುಟ್ಟಿದ ಅಣ್ಣತಮ್ಮಂದಿರೇ ಅವಳನ್ನು ದೇವದಾಸಿ ವ್ಯವಸ್ಥೆಗೆ ತಳ್ಳಿ, ಅವಳಿಂದ ಹೊಟ್ಟೆ ಹೊರೆಯುತ್ತಿದ್ದಾರೆ. ಕೆಳಜಾತಿಯ ಜನರಲ್ಲಿಯೇ ಬಡತನದ ಜಾಸ್ತಿ. ಬಡತನವಿದ್ದಲ್ಲಿ ಶಿಕ್ಷಣದ ಪರಿಕಲ್ಪನೆ ಇರುವುದಿಲ್ಲ. ಎಲ್ಲಿ ಶಿಕ್ಷಣವಿರುವುದಿಲ್ಲವೋ ಅಲ್ಲಿ ಮೂಢನಂಬಿಕೆಗಳು, ಅಂಧಶ್ರದ್ಧೆಗಳು ಮನೆಮಾಡಿಕೊಂಡಿರುತ್ತವೆ. ಈ ಹಿನ್ನೆಲೆಯಲ್ಲಿ ಕೆಳಜಾತಿಯ 'ಮಹಿಳೆ' ಹೆಚ್ಚಿನ ಪ್ರಮಾಣದ ಶೋಷಣೆಗೆ ಒಳಗಾಗಿದ್ದಾಳೆ.

**ಇಂತಹ ಆರೋಗ್ಯಹೀನ ಸಾಮಾಜಿಕ ಪರಿಸರದಲ್ಲಿ ಆಧುನಿಕ ಪ್ರಜ್ಞೆಯ ಸಮಾಜವನ್ನು ಹೇಗೆ ಕಟ್ಟಬಹುದು?**

ನನ್ನ ಜೀವನದಲ್ಲಿ ನಡೆದ ಘಟನೆಯನ್ನು ಹೇಳುವ ಮೂಲಕವೇ ನಿಮ್ಮ ಪ್ರಶ್ನೆಗೆ ಉತ್ತರಿಲಸು ಪ್ರಯತ್ನಿಸುತ್ತೇನೆ. ನನ್ನ ತಂದೆಯವರು ಬಡವರ ಬಗ್ಗೆ ಅತ್ಯಂತ ಅನುಕಂಪವುಳ್ಳವರು. ಬಡವರ ದುಃಖವನ್ನು ಕಂಡರೆ ಅವರು ಅತ್ತುಬಿಡುತ್ತಿದ್ದರು. But at the same time, ನಾನು ಶಾಲೆಗೆ ಹೋಗಿ ಮನೆಗೆ ಬಂದರೆ, ನನ್ನನ್ನು ಸ್ನಾನ ಮಾಡಿಸಿಯೇ ಒಳಗಡೆ ಕರೆದುಕೊಳ್ಳುತ್ತಿದ್ದರು. ನನಗಿನ್ನೂ ಆ ಘಟನೆ ಚೆನ್ನಾಗಿ ನೆನಪಿದೆ. ಹಳ್ಳಿಯಲ್ಲಿ ಕಟ್ಟಿಗೆ ಒಡೆಯುವ ಹಾಗೂ ಅಂಗಳ ಕಸಗೂಡಿಸುವ ಕೆಲಸವನ್ನು ಸಾಮಾನ್ಯವಾಗಿ ದಲಿತರೇ ಮಾಡುತ್ತಾರೆ. ಮಾರುತಿ ಎನ್ನುವ ದಲಿತ ನಮ್ಮನೆಯ ಕಟ್ಟಿಗೆ ಒಡೆಯುವ ಕೆಲಸವನ್ನು ಮಾಡುತ್ತಿದ್ದನು. ಶಾಲೆಯಿಂದ ಬಂದ ನಾನು. ಕಟ್ಟಿಗೆ ಒಡೆಯುತ್ತಿದ್ದ ಅವನ ಬೆನ್ನನ್ನು ತಟ್ಟಿ ಮಾತನಾಡಿಸಿದೆ. ನಮ್ಮ ತಂದೆ ವಾಕಿಂಗ್ ಸ್ಟಿಕ್ ಹಿಡಿದುಕೊಂಡು ಅಲ್ಲಿಯೇ ಕುಳಿತುಕೊಂಡಿದ್ದರು. ಆ ಸ್ಟಿಕ್ ಮುರಿಯುವವರೆಗೆ ನನಗೆ ಚೆನ್ನಾಗಿ ಬಾರಿಸಿದರು. ಅಂತಹ ತಂದೆಯ ಮಗನಾಗಿ ಹುಟ್ಟಿದ ನಾನು, ಮುಂದಿನ ಜನ್ಮ ಎನ್ನುವುದು ಏನಾದರೂ ಇದ್ದರೆ ದೇವದಾಸಿಯ ಮಗನಾಗಿ ಹುಟ್ಟಿಸು ಎಂದು ಬೇಡಿಕೊಳ್ಳುವ ದಾಷ್ಟ್ಯ್ಯವನ್ನು ನಾನಿಂದು ಬೆಳೆಸಿಕೊಂಡಿದ್ದೇನೆ. ಬಸವಣ್ಣ, ಗಾಂಧಿ, ವಿವೇಕಾನಂದ ಇವರಾರಿಗೂ ಜಾತಿಯಲ್ಲಿ ನಂಬಿಕೆಯಿರಲಿಲ್ಲ. ಇವರ ಹೇಳಿಕೆಗಳನ್ನು ತಿರುಚಿಕೊಂಡು ಮಧ್ಯಮವರ್ಗದ ಜನ ಭಿನ್ನ ರೀತಿಯಲ್ಲಿ ಬದುಕಲು ಯತ್ನಿಸುತ್ತಿದೆ. ಇವತ್ತು ಜಾತಿರಹಿತವಾದ ಸಮಾಜ ಅಗತ್ಯವಾಗಿದೆ. ಇಂದು ನಮ್ಮ ದೇಶವೇನಾದರೂ ಹಿಂದುಳಿದಿದ್ದರೆ, ಅದು ಜಾತಿಕಾರಣದಿಂದಲೇ. ಜಾತಿರಹಿತವಾದ ಸಮಾಜದಂತೆ ಲಿಂಗತಾರತಮ್ಯವಿಲ್ಲದ ಸಮಾಜವು ಅಗತ್ಯವಾದುದಾಗಿದೆ. ಈ ಹಿನ್ನೆಲೆಯಲ್ಲಿ ಮಾತ್ರ ಆಧುನಿಕ ಪ್ರಜ್ಞೆಯ ಸಮಾಜವನ್ನು ಕಟ್ಟಲು ಸಾಧ್ಯ. ಆದರೆ ಇದು ನಾವಂದು ಕೊಂಡಷ್ಟು ಸರಳವಾಗಿಲ್ಲ. ಇವೊತ್ತಿಗೂ ಇಂಗ್ಲೆಂಡ್, ಅಮೇರಿಕಾದಂತಹ ದೇಶಗಳಲ್ಲಿ ಲಿಂಗ ತಾರತಮ್ಯವನ್ನು ಮಾಡಲಾಗುತ್ತಿದೆ. ಇತ್ತೀಚಿಗೆ ಇಂಗ್ಲೆಂಡ್ ರಾಯಭಾರಿಯೊಬ್ಬರು ನಮ್ಮಲ್ಲಿಗೆ ಬಂದಿದ್ದರು. ಅವರು ಹೇಳಿದ ಪ್ರಕಾರ ಭಾರತದಲ್ಲಿ ಲಿಂಗತಾರತಮ್ಯದ ಕುರಿತು ಚರ್ಚೆ ಮಾಡುತ್ತಿದ್ದಾಗ, ಇಂಗ್ಲೆಂಡಿನಲ್ಲಿ ಅದರ ಸುಳಿವೇ ಇರಲಿಲ್ಲ. ವೈಚಾರಿಕವಾಗಿ ಮುಂದಿರುವ ನಾವು, ಆಚರಣೆಯ ದೃಷ್ಟಿಯಿಂದ ಹಿಂದುಳಿದಿದ್ದೇವೆ.

**ಅತ್ಯಂತ ಸಾಂಪ್ರದಾಯಿಕ ಕುಟುಂಬದಿಂದ ಬಂದಂತಹ ನೀವು ಸಮಾಜದಿಂದ ಸಂಪೂರ್ಣ ನಿರ್ಲಕ್ಷ್ಯಕ್ಕೆ ಒಳಗಾದ ದೇವದಾಸಿಯರನ್ನು ಕೇಂದ್ರವಾಗಿಟ್ಟುಕೊಂಡು ಕೆಲಸ ನಿರ್ವಹಿಸಲು ಕಾರಣವೇನು? ಅದಕ್ಕಾವ ಪ್ರೇರಣೆ ದೊರೆಯಿತು?**

ಅಲಕ್ಷಿತ ಸಮುದಾಯಗಳ ಕುರಿತು ಕಾಳಜಿ ನನ್ನಲ್ಲಿ ಹುಟ್ಟಿನಿಂದಲೇ ಬೆಳೆದುಬಂದದ್ದು. ಅದಕ್ಕೆ ಕಾರಣ ಗೊತ್ತಿಲ್ಲ. ನನ್ನ ಪ್ರಾಥಮಿಕ ಶಾಲಾಗುರುಗಳಲ್ಲಿ ಚಮ್ಮಾರ ಜಾತಿಗೆ ಸೇರಿದವರೊಬ್ಬರಿದ್ದರು. ಶಾಲೆಯಲ್ಲಿ ಆಟದ ಮೈದಾನವಿರಲಿಲ್ಲ. ಶಾಲೆ ಮುಗಿದ ತಕ್ಷಣ ಆಡಲಿಕ್ಕೆಂದು ಊರ ಹೊರಗಡೆ ಹೋಗುತ್ತಿದ್ದೆ. ಅಲ್ಲಿ ಈ ನಮ್ಮ ಗುರುಗಳ ಮನೆಯಿತ್ತು.

ಬೇಕಂತಲೇ ಅವರಿಂದ ಕಾಡಿಬೇಡಿ ನೀರು ಕುಡಿದು ಮನೆಗೆ ಮರಳುತ್ತಿದ್ದೆನು. ಈ ರೀತಿಯ ಮನೋಭಾವನೆಯನ್ನು ಚಿಕ್ಕಂದಿನಿಂದಲೇ ಯಾಕೋ ಏನೋ ನಾನು ಬೆಳೆಯಿಸಿಕೊಂಡು ಬಂದಿದ್ದೇನೆ.

ದೇವದಾಸಿಯರನ್ನು ಕೇಂದ್ರವಾಗಿರಿಸಿಕೊಂಡ ಯೋಜನೆ ನನ್ನ ಸ್ವಂತಿಕೆಯಿಂದ ರೂಪ ಪಡೆದುಕೊಂಡದ್ದಲ್ಲ. ಅಥಣಿಯಲ್ಲಿ K.L.E.Society ಸಂಘದ ಒಂದು ಕಾಲೇಜಿದೆ. ಅಲ್ಲಿ ಡಾ.ಜೋಗನ್ ಶಂಕರ ಎನ್ನುವವರು ಕೆಲಸ ಮಾಡುತ್ತಿದ್ದರು. ಆ ಹೊತ್ತಿನಲ್ಲಿ ನಾನು K.L.E.,Societyಯ Vice President ಆಗಿ ಕೆಲಸ ನಿರ್ವಹಿಸುತ್ತಿದ್ದೆ. ನಾವು ಪ್ರತಿವಾರ ಒಬ್ಬೊಬ್ಬ ಪ್ರೊಫೆಸರ ಮನೆಯಲ್ಲಿ ಒಂದೊಂದು ಬಗೆಯ ಚರ್ಚೆಯನ್ನು ಇಟ್ಟುಕೊಳ್ಳುತ್ತಿದ್ದೆವು. ಚರ್ಚೆಯ ಕೇಂದ್ರವಸ್ತು ಕಾಲೇಜು ಮಕ್ಕಳ ಭವಿಷ್ಯದ ಕುರಿತಂತೆ ಇರುತ್ತಿತ್ತು. ಇದರ ಅನ್ವಯ ಒಂದು ವಾರ ಜೋಗನ್ ಶಂಕರ ಅವರ ಮನೆಗೆ ಹೋದೆನು. ಚರ್ಚೆ, ಊಟ ಮುಗಿಸಿ ಹೊರಗೆ ಬಂದ ನಂತರ ಜೋಗನ್ ಅವರು ಒಂದು ಮಾತನ್ನು ಹೇಳಿದರು. ಆ ಮಾತು ನನ್ನ ಜೀವನದ ದಿಕ್ಕನ್ನು ಬದಲಿಸಿತು. ''ಪಾಟೀಲರೆ, ನೀವು ಅನೇಕ ಸಾಮಾಜಿಕ ಕಾರ್ಯಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದೀರಿ ನಿಜ. ನೀವು K.L.E.Societyಯ Vice President ಎಂದು ನಾನು ನಿಮಗೆ ಬಹಳ ದೊಡ್ಡ ಕಿಮ್ಮತ್ತನ್ನು ಕೊಡುವುದಿಲ್ಲ. ರಾಜಕೀಯದಲ್ಲಿ ನಿಮ್ಮದೇ ಆದ ವರ್ಚಸ್ಸನ್ನು ಬೆಳೆಸಿಕೊಂಡಿದ್ದೀರಿ. ಅದರ ಬಗ್ಗೆಯೂ ನಾನೇನು ಗೌರವ ನೀಡುವುದಿಲ್ಲ. ಅನೇಕ ಸಾಮಾಜಿಕ ಸೇವೆಗಳನ್ನು ಮಾಡಿದ್ದೀರಿ. ಅದರ ಬಗ್ಗೆಯೂ ನಾನೇನು ಕಿಮ್ಮತ್ತು ನೀಡುವುದಿಲ್ಲ''ಎಂದು ಅತ್ಯಂತ ಸೂಕ್ಷ್ಮಸಂವೇದನೆಯುಳ್ಳ ದಲಿತನಂತೆ ಮಾತನಾಡಿದರು. ನಾನು ಹಾಸ್ಯ ಮಾಡುತ್ತಾ ಕೇಳಿದೆ-''ನನಗೆ ನೀವು ಕಿಮ್ಮತ್ತು ಕೊಡಬೇಕಿದ್ದರೆ ನಾನೇನು ಮಾಡಬೇಕು ಹೇಳಿ?''. ಆವಾಗ ಅವರು ಒಂದು ಮಾತನ್ನು ಹೇಳಿದರು: ''ಯಾರೂ ಯಾವ ಕೆಲಸವನ್ನು ಮಾಡುವುದಿಲ್ಲವೋ ಅದನ್ನು ನೀವು ಮಾಡಿ ತೋರಿಸಿ. ಅಂದರೆ ನಿಮ್ಮ ಸಾಮಾಜಿಕ ಕೆಲಸಕ್ಕೆ ಬೆಲೆಯಿರುತ್ತದೆ. ನೀವು ನಿಮ್ಮ ತಾಲೂಕಿಗೆ ಅಗತ್ಯವಾದ ಸಾಮಾಜಿಕ ಕೆಲಸ ಮಾಡಲಾರದೆ ಬೇರೆ ಏನನ್ನೋ ಮಾಡುತ್ತಿದ್ದರೆ ನೂರಾ ಒಂದರಲ್ಲಿ ನೂರಾ ಎರಡು ಆಗಿ ಹೋಗುವಿರಿ''ಎಂದರು. 'ಹಾಗಾದರೆ ಏನು ಮಾಡಬೇಕು?' ಎಂದು ಮತ್ತೆ ಅವರನ್ನೇ ಪ್ರಶ್ನಿಸಿದೆ. ಮೊಟ್ಟಮೊದಲು ಬಾರಿಗೆ ಅತ್ಯಂತ ಕಟುಸತ್ಯದ ಅರಿವನ್ನು ಅವರು ಮೂಡಿಸಿದರು. 'ಕರ್ನಾಟಕದಲ್ಲಿ ನಿಮ್ಮ ತಾಲೂಕಿನಲ್ಲಿಯೇ ಹೆಚ್ಚಿನ ಸಂಖ್ಯೆಯಲ್ಲಿ ದೇವದಾಸಿಯರಿದ್ದಾರೆ. ಮುಂಬಯಿಯ ಕೆಂಪುದ್ವೀಪಗಳಲ್ಲಿ ನಾಲ್ಕನೆಯ ಮನೆ ಬಿಟ್ಟರೆ ಐದನೆಯ ಮನೆಯವಳು ಅಥಣಿಯವಳಾಗಿರುತ್ತಾಳೆ. ಈ ವಿಷಯದಲ್ಲಿ ನಿಮಗೆ ನಾಚಿಕೆ ಅನಿಸುವುದಿಲ್ಲವೇನು?''ಎಂದು ಚುಚ್ಚು ಮಾತನಾಡಿ ನನ್ನನ್ನು ಎಚ್ಚರಿಸಿದರು. ಪ್ರಥಮ ಬಾರಿ ಇಂತಹ ವಿಷಯದ ಕುರಿತಂತೆ ಚಿಂತನೆ ಮಾಡಲು ಹಚ್ಚಿದರು. ಈ ವಿಚಾರವನ್ನು ಕೊಟ್ಟು, ಇಂಥ ಕ್ಷೇತ್ರದಲ್ಲಿ ಕೆಲಸ ಮಾಡಲು ನನಗೆ ದೀಕ್ಷೆ ನೀಡಿದವರೇ

ಜೋಗನ್ ಶಂಕರ ಅವರು.

**ಅಸ್ಪೃಶ್ಯತೆಯ ಅವಹೇಳನಕ್ಕೆ ಗುರಿಯಾದ ಇಂಥ ಕೆಲಸಕ್ಕೆ ಕೈಹಾಕಿದ ಆರಂಭದ ದಿನಗಳಲ್ಲಿ ನಿಮ್ಮ ಕುಟುಂಬ ಹಾಗೂ ಸಮಾಜದಿಂದ ಬಂದ ಪ್ರತಿಕ್ರಿಯೆ ಏನು? ಹೊಸ ಬಗೆಯ ಸಮಸ್ಯೆಗಳನ್ನೇನಾದರೂ ಎದುರಿಸಬೇಕಾಯಿತಾ?**

ಈ ಕೆಲಸವನ್ನು ಆರಂಭಿಸುವಾಗ ನಾನೊಬ್ಬ Leading Advocate ಆಗಿದ್ದೆ. ಜನರಿಂದ ವಿಚಿತ್ರ ರೀತಿಯ ಪ್ರತಿಕ್ರಿಯೆಯನ್ನು ಎದುರಿಸಿದೆ. ಇಷ್ಟು ದಿವಸ ದೊಡ್ಡ ವಕೀಲರು ಎನಿಸಿಕೊಂಡ ಪಾಟೀಲರು ಈಗ ಸೂಳೇರ ವಕೀಲರಾದರು ಎಂದು ಟೀಕೆ ಮಾಡಿದರು. ನಾನು ದೇವದಾಸಿಯರ ಕುರಿತಂತೆ ಯೋಜನೆಯನ್ನು ಹಾಕಿಕೊಂಡ ಆರಂಭ ಹಂತದಲ್ಲಿಯೇ ನೇರವಾಗಿ ಕೇರಿಗೆ ಹೋಗಿ ಅವರ ಮನವೊಲಿಸಿ ಈ ಅನಿಷ್ಟ ಸಂಪ್ರದಾಯವನ್ನು ನಿಲ್ಲಿಸಲು ಕೇಳಿಕೊಂಡೆ. ಹೊಸದಾಗಿ ದೇವದಾಸಿ ಸಂಪ್ರದಾಯಕ್ಕೆ ಒಳಪಟ್ಟ ಹೆಣ್ಣುಮಕ್ಕಳನ್ನು ಅದರಿಂದ ಮುಕ್ತಗೊಳಿಸಿ ಮದುವೆ ಮಾಡಿಸಲು ಪ್ರಯತ್ನಿಸಿದೆ. ಇದನ್ನೆಲ್ಲಾ ಪ್ರಾರಂಭಿಸಿದಾಗ ನಾನು ಪ್ರಬಲವಾದ ವಿರೋಧವನ್ನೆದುರಿಸಿದುದು ಅವರ ಸಮಾಜದವರಿಂದಲೇ. ಅವರು ವಿರೋಧಿಸಿದ ಬಗೆಯನ್ನು ಕೇಳಿದರೆ ನಿಮಗೆ ಆಶ್ಚರ್ಯವೆನಿಸಬಹುದು. ಅಥಣಿ ತಾಲೂಕಿನ ಕೋಹಳ್ಳಿಯಿಂದಲೇ ಸಾಮಾಜಿಕ ಸುಧಾರಣಾ ಕಾರ್ಯಕ್ರಮವನ್ನು ಆರಂಭಿಸಿದೆ. ಕರ್ನಾಟಕದಲ್ಲಿಯೇ ದೇವದಾಸಿಯರನ್ನು ಅತಿ ಹೆಚ್ಚಿನ ಸಂಖ್ಯೆಯಲ್ಲಿ ಬಾಂಬೆಗೆ ರವಾನಿಸುವ ಊರೆಂದರೆ ಕೋಹಳ್ಳಿಯೇ. ನಾನು ಅಲ್ಲಿ ಪ್ರಥಮ ಬಾರಿಗೆ ಜನರ ಭೇಟಿಗೆ ಹೋದಾಗ ಹೂವಿನ ಹಾರ ಹಾಕಿ, ಆರತಿ ಬೆಳಗಿ ಕೇರಿಯಲ್ಲಿ ಕರೆದುಕೊಂಡಿದ್ದರು. ದೇವದಾಸಿ ವಿಮೋಚನಾ ಕಾರ್ಯಕ್ರಮವನ್ನು ಹಮ್ಮಿಕೊಂಡು ಹೋದಾಗ, ಅವರು ಬಹಳ ವಿಚಿತ್ರ ರೀತಿಯಲ್ಲಿ ಪ್ರತಿಕ್ರಿಯಿಸಿದರು. ಯಾವ ಬೈಗುಳನ್ನು ಹೇಳಲು ನಮ್ಮ ನಾಲಿಗೆ ಏಳುವುದಿಲ್ಲವೊ ಅಂತಹ ಬೈಗುಳಗಳನ್ನೆಲ್ಲವನ್ನು ನಮ್ಮ ಮೇಲೆ ಅಲ್ಲಿಯ ಒಬ್ಬ ಮಹಿಳೆ ಪ್ರಯೋಗಿಸಿದಳು. 'ನಮ್ಮ ಜನಾನ, ನಮ್ಮ ಕೇರೀನ ಉದ್ಧಾರ ಮಾಡಾಕ ನೀನೇನೂ ಬರಬೇಕಾಗಿಲ್ಲ. ನಮ್ಮ ಮಕ್ಕಳನ್ನ ಉದ್ಧಾರ ಮಾಡಾಕ ನೀನೇನೂ ಬರಬೇಕಾಗಿಲ್ಲ. ನಮ್ಮನ್ನು ನಾವು ಉದ್ಧಾರ ಮಾಡಿಕೋತಿವಿ. ನೀನಾರು ನಮ್ಮನ್ನ ಉದ್ಧಾರ ಮಾಡಲಿಕ್ಕೆ?' ಎಂದು ಆರಂಭಿಸಿದ ಅವಳು ಕೇಳಬಾರದ ಅನೇಕ ಶಬ್ದಗಳನ್ನು ಪ್ರಯೋಗಿಸಿದಳು. ಆಮೇಲೆ ಈ ಘಟನೆಯ ಕುರಿತಂತೆ ಒಳಶೋಧನೆಯನ್ನು ನಡೆಸಿದೆ. ಆಗ ನನಗೆ ಒಂದು ಸತ್ಯ ಗೊತ್ತಾಯ್ತು. ಅವಳು ಬೈಯುವುದನ್ನ ಮುಗಿಸಿದ ನಂತರ ಒಬ್ಬ ವ್ಯಕ್ತಿ ನಮ್ಮನ್ನು ಚಾವಡಿಗೆ ಕರೆದುಕೊಂಡು ಹೋಗಿ ಚಹಾ ಕುಡಿಸಿ ಸಮಾಧಾನಿಸಿದ್ದನು. 'ವಕೀಲರೆ ನೀವೇನೂ ಕೆಟ್ಟ ಅನಿಸಿಕೊಳ್ಳಬ್ಯಾಡ್ರಿ. ಆಕಿ ತಿಳೀಲಾರ್ದಕ್ಕ ಏನೇನೋ ಮಾತಾಡ್ಯಾಳ, ಎಂದಿದ್ದನು. ಅವನೇ ಈ ಎಲ್ಲ ಘಟನೆಗಳಿಗೆ ಮೂಲಭೂತ ಕಾರಣವೆಂದು ನಂತರ ಗೊತ್ತಾಯಿತು. ಅವನು ಹರಿಜನ ಕೇರಿಯ ಮುಖಂಡನಾಗಿದ್ದರಿಂದ, ಅಲ್ಲಿಗೆ ಹೋಗುವ ಪೂರ್ವದಲ್ಲಿ ಅವನಿಗೆ ತಿಳಿಸಿದ್ದೆವು.

ಅವನೇ ಈ ಎಲ್ಲದಕ್ಕೂ ಪ್ರಚೋದನೆ ನೀಡಿದ್ದನು. ದೇವದಾಸಿಯರು ನಮ್ಮ ಜೊತೆ ಸಂಭಾಷಿಸಿದರೆ ಎಲ್ಲಿ ಬದಲಾಗುತ್ತಾರೋ ಎನ್ನುವ ಹೆದರಿಕೆಯಿಂದ ನಮ್ಮ ಬಗೆಗೆ ತಪ್ಪು ಕಲ್ಪನೆಯನ್ನು ಅವರಿಗೆ ನೀಡಿದ್ದನು.

ಎರಡನೆಯ ಹಂತದಲ್ಲಿ ಮುಂದುವರೆದಾಗ ಇದಕ್ಕಿಂತಲೂ ಭಯಂಕರವಾದ ಅನುಭವಗಳನ್ನು ಎದುರಿಸಬೇಕಾಯಿತು. ಆ ಸಮಾಜದಲ್ಲಿ ಅರ್ಧಮರ್ಧ ಕಲಿತ ಹುಡುಗರಿಗೆ ಕುಡಿಯಲು ತಿನ್ನಲು ದುಡ್ಡು ಕೊಡುವವರು, ಅವರ ಹೆಣ್ಣು ಮಕ್ಕಳನ್ನು ಈ ಸಂಪ್ರದಾಯದೊಳಗೆ ಬಂಧಿಸುವವರು ಬೇರಾರು ಅಲ್ಲ. ಅವರ ಜನರೇ. ಕೇರಿಯ ಜನರೇ ನನಗೆ ತೀವ್ರವಾದ ಮಾನಸಿಕ ಹಿಂಸೆಯನ್ನು ನೀಡಿದರು. ಅವರೆಲ್ಲರೂ ಸೇರಿ ಅನಾಮಧೇಯ ಪತ್ರ ಬರೆಯಲು ಪ್ರಾರಂಭಿಸಿದರು. Those days I was a President of Bar Association. Bar Associationಗೆ Open Cardನಲ್ಲಿ ಪತ್ರಗಳು ಬರಲು ಪ್ರಾರಂಭಿಸಿದವು. ಎಲ್ಲರೂ ಅದನ್ನು ಓದಲಿ ಎಂಬುದೇ ಅವರ ಉದ್ದೇಶವಾಗಿತ್ತು. ಅದರ ಮೇಲೆ ವಿಳಾಸವನ್ನು ಹೇಗೆ ಬರೆಯುತ್ತಿದ್ದರೆಂದರೆ ಬಿ.ಎಲ್. ಪಾಟೀಲ, ಸೂಳೆಯ ಮಗ, ಅಧ್ಯಕ್ಷರು, ದೇವದಾಸಿ ಸಮಾವೇಶ ಸಂಘ. ಈ ತರಹ ವಿಳಾಸವನ್ನು ನೋಡಿದವರು ಕುತೂಹಲದಿಂದ ಪತ್ರಗಳನ್ನು ಓದುತ್ತಿದ್ದರು. ಅದು ಸಹಜ. ಪತ್ರದ ತುಂಬ ಮನಸ್ಸಿಗೆ ತೋಚಿದ್ದನ್ನು ಅಂದರೆ ಅಶ್ಲೀಲವಾಗಿ, ಅಸಹ್ಯವಾಗಿ ಬರೆಯುತ್ತಿದ್ದರು. ಅದು ಎಲ್ಲಿಯವರೆಗೆ ಹೋಯಿತೆಂದರೆ ನೀನು ಈ ವಿಷಯದ ಮೇಲೆ ಕೆಲಸ ಮಾಡ್ತಾ ಇದ್ದೀಯಾ ಅಂದ ಮೇಲೆ ನಿನ್ನ ತಾಯಿ ಸೂಳೆಯಿರಬಹುದು. ನಿನ್ನ ಹೆಂಡತಿ ಸೂಳೆಯಿರಬಹುದು. ಅದಕ್ಕೆ ನೀನು ಈ ಕೆಲಸವನ್ನು ಮಾಡ್ತಾ ಇದ್ದೀಯಾ. ಅಂದರೆ ಆ ಕೆಲಸದಿಂದ ಸಂಪೂರ್ಣ ವಿಮುಖನಾಗಿ ಓಡಿ ಹೋಗ ಬೇಕೆನ್ನುವ ವಾತಾವರಣವನ್ನು ಅವರು ನಿರ್ಮಿಸಿದರು. ನಂತರ ಈ ಕೆಲಸಗಳ ಹಿಂದಿನ ಕೈಗಳನ್ನು ಹುಡುಕಿಸಲು ಪ್ರಯತ್ನಿಸಿದೆ. ಅವರಾರೂ ಬೇರೆಯಾಗಿರಲಿಲ್ಲ. ದೇವದಾಸಿಯರ ಅಣ್ಣತಮ್ಮಂದಿರು, ಏಜೆಂಟರು ಆಗಿದ್ದರು. ಇಂತಹ ಹೊತ್ತಿನಲ್ಲಿ ಮನಸ್ಸಿಗೆ ಒಂದು ಬಗೆಯ ನಂಬಿಕೆಯನ್ನು, ಚೈತನ್ಯವನ್ನು ತುಂಬಿ ನಾನು ಹಿಡಿದ ಕೆಲಸವನ್ನು ಮುಂದುವರಿಸುವಂತೆ ಮಾಡಿದವರು ಇಳಕಲ್‌ದ ಮಹಾಂತಸ್ವಾಮೀಜಿಯವರು ಮತ್ತು ಗದಗಿನ ತೋಂಟದಾರ್ಯ ಸ್ವಾಮೀಜಿಯವರು. ''ಪಾಟೀಲರೇ, ನಿಮಗೆ ಬಂದ ಪತ್ರಗಳನ್ನೆಲ್ಲ ನಮಗೆ ಕೊಟ್ಟು ಬಿಡಿರಿ. ಸಮಾಜ ಸುಧಾರಣೆ ಮಾಡ್ತೇನಿ ಅಂತ ಹೊರಟಂತಹ ಹುಚ್ಚರಿಗೆ, ಎಷ್ಟು ನೋವಾಗುತ್ತದೆ ಎನ್ನುವುದಕ್ಕೆ ಈ ಪತ್ರಗಳು ಅತ್ಯುತ್ತಮ ಡಾಕ್ಯುಮೆಂಟರಿ ಆಗುತ್ತವೆ''. ಅಂತ ಹೇಳಿದ್ರು. ಅವರು ಅಂದು ಆಡಿದ ಈ ಮಾತುಗಳು ಇಂದಿಗೂ ಮನಸ್ಸಿನಲ್ಲಿ ಅಚ್ಚಳಿಯದೇ ಉಳಿದಿದೆ.

**ಆರಂಭದಲ್ಲಿ ಎದುರಾದ ಈ ಸಮಸ್ಯೆಗಳಿಂದಾಗಿ ನಿಮ್ಮ ಕೆಲಸದ ಆಯ್ಕೆಯ ಕುರಿತಂತೆ ನಿಮ್ಮಲ್ಲಿ ಪಶ್ಚಾತ್ತಾಪ ಮೂಡಿತ್ತಾ?**

ನಾನು ತೆಗೆದುಕೊಂಡ ನಿರ್ಧಾರ, ಹಮ್ಮಿಕೊಂಡ ಯೋಜನೆಗಳ ಕುರಿತಂತೆ ನನ್ನಲ್ಲಿ ಆತ್ಮವಿಶ್ವಾಸವಿತ್ತು. ಮನೆಯಲ್ಲಿ ಒಮ್ಮೆ ಮಾತ್ರ ನನ್ನ ಕೆಲಸದ ಕುರಿತಂತೆ ತಕರಾರು ಎದ್ದಿತ್ತು. ನನಗೆ ಬರುವ ಅನಾಮಧೇಯ ಪತ್ರಗಳಲ್ಲಿ ಒಂದು ನಮ್ಮನೆಗೆ ಹೋಯಿತು. ಇದು ನನ್ನ ದುರ್ದೈವ. ಅದರಲ್ಲಿ ಮೊದಲಿನ ಪತ್ರಗಳಲ್ಲಿದ್ದ ವಿಷಯವೇ ಇತ್ತು. ನಿನ್ನ ತಾಯಿ ಹೀಗೆ, ನಿನ್ನ ಹೆಂಡತಿ ಹೀಗೆ ಎಂದು ಮುಂತಾಗಿ ಅಶ್ಲೀಲವಾಗಿ ಬರೆದಿದ್ದರು. ಅದನ್ನು ನೋಡಿದ ನನ್ನ ಕುಟುಂಬದವರು ಬಹಳ ನೊಂದುಕೊಂಡರು. "ನಿಮ್ಮ ಉದ್ಯೋಗ ಬಿಟ್ಟು ಅವರಿಗಾಗಿ ನೀವು ಹುಚ್ಚರಂತೆ ಪರದಾಡಿದರೆ ಅದಕ್ಕೆ ಅವರು ನಿಮಗೇನು ಮರಳಿ ನೀಡುತ್ತಿದ್ದಾರೆ? ಅದರಿಂದಾಗಿ ನಿಮಗೆ ದೊರೆಯುವ ಗೌರವವಾದರೂ ಎಷ್ಟು? ಇಂಥಹ ಗೌರವ ಸಿಗುವುದಾದರೆ ಈ ಕೆಲಸವನ್ನು ಇಲ್ಲಿಗೆ ನಿಲ್ಲಿಸಿ ಬಿಡಿ' ಎಂದರು. ಅದಕ್ಕೆ ನಾನು ಹೇಳಿದೆ "ಸ್ವಾಮೀಜಿಯವರ ಹತ್ತಿರ ಹೋಗೋಣ. ಅವರಿಗೆ ನನ್ನ ಕೆಲಸದ ಕುರಿತು ಗೊತ್ತಿದೆ. ಅವರಿಗೊಂದು ಶಬ್ದ ಹೇಳಿ ಬಿಟ್ಟು ಬಿಡೋಣ' ಅಂತ್ಹೇಳಿ ನಮ್ಮ ಮನೆಯವರನ್ನು ಅಲ್ಲಿಗೆ ಕರೆದುಕೊಂಡು ಹೋದೆ. ಅವರು ಸ್ವಾಂತನ ಹೇಳಿ ಕಳುಹಿಸಿದರು. ಮನೆಯವರ ಬೆಂಬಲವಿಲ್ಲದೆ ಇಂತಹ ಯಾವ ಸಾಮಾಜಿಕ ಕಾರ್ಯಗಳನ್ನು ಮಾಡಲಾಗುವುದಿಲ್ಲ. ಅದು ಕಠಿಣವಾಗಿ ನಿಲ್ಲುತ್ತದೆ. ನಮ್ಮನೆಯವರಿಗೆ ನೈತಿಕ ಬೆಂಬಲ ಮೂಡಿಸಲು ಅವರನ್ನು ನಾನು ಸ್ವಾಮೀಜಿಯವರಲ್ಲಿಗೆ ಕರೆದುಕೊಂಡು ಹೋಗಿದ್ದೆ. ನಾನೊಬ್ಬ Advocate. ಇಂತಹ ಎಲ್ಲ ಸಂಗತಿಗಳನ್ನು ಗಮನಿಸಿದ ನನಗೆ ಅವುಗಳಾವುವೂ ಹೊಸತು ಎನಿಸಲಿಲ್ಲ. ವೈಚಾರಿಕತೆ ನನ್ನ ರಕ್ತದಲ್ಲಿ ಬೆರೆತು ಹೋಗಿದೆ. ಹೀಗಾಗಿ ನನ್ನ ನಿರ್ಧಾರವನ್ನು ಸಡಿಲಗೊಳಿಸುವ ಪ್ರಶ್ನೆಯೇ ಉದ್ಭವಿಸಲಿಲ್ಲ.

೧೯೮೫-೯೦ರವರೆಗೆ ಅವರಲ್ಲಿ ಒಂದು ಬಗೆಯ ಎಚ್ಚರವನ್ನು ಮೂಡಿಸಲು ಪ್ರಯತ್ನಿಸಿದೆವು. ೯೦ರಲ್ಲಿ ದೇವದಾಸಿಯರ ಮಕ್ಕಳಿಗಾಗಿ ಶಾಲೆಯನ್ನ ತೆರೆದೆವು. ಅವರ ಮಕ್ಕಳಿಗೆಂದು ಒಳ್ಳೆಯ ವಾತಾವರಣ ನಿರ್ಮಿಸಿ ಶಿಕ್ಷಣ ಕೊಡಲು ಪ್ರಾರಂಭಿಸಿದಾಗ ನಮ್ಮ ಕುರಿತಂತೆ ಅವರಲ್ಲಿ ಒಂದು ಬಗೆಯ ವಿಶ್ವಾಸ ಮೂಡಿತು. ಈ ವೇಳೆಗಾಗಲೇ ಅವರಲ್ಲಿ ಒಂದು ಬಗೆಯ ಜಾಗೃತಿ ಆವರಿಸಿತ್ತು. ಶ್ರೀಮಂತ ಮಕ್ಕಳಿಗೆ ದೊರೆಯುವ ಎಲ್ಲಾ ಬಗೆಯ ಸವಲತ್ತುಗಳನ್ನು ಅವರ ಮಕ್ಕಳಿಗೆ ನೀಡಲು ಪ್ರಾರಂಭಿಸಿದೆವು. ಉತ್ತಮ ಉಡುಪು, ಉತ್ತಮ ಆಹಾರ, ಉತ್ತಮ ಶಿಕ್ಷಣದ ಕಡೆಗೆ ಹೆಚ್ಚು ಒತ್ತು ಕೊಟ್ಟಿರುವೆವು. ನಮ್ಮ ಬಗೆಗೆ ಈ ರೀತಿಯ ಆತ್ಮವಿಶ್ವಾಸ ನಿರ್ಮಾಣವಾದ ನಂತರ ಅವರು ನಮ್ಮನ್ನು ಗೌರವಿಸಲು ಪ್ರಾರಂಭಿಸಿದರು. ನೀವು ಒಬ್ಬ ಸಂಶೋಧಕಿ ಎಂಬುದು ಅವರ ಅರಿವಿಗೆ ಬಾರದಂತೆ ಅವರೊಂದಿಗೆ ಕುಳಿತು ಸಹಜವಾಗಿ ಚಿಟ್ ಚಾಟ್ ಮಾಡಿದರೆ ನಮ್ಮ ಸಂಸ್ಥೆಯ ಕೆಲಸ ಫಲಿತಾಂಶ ನಿಮಗೆ ದೊರೆಯುತ್ತದೆ. ಇದು ದೇವದಾಸಿ ವಿಮೋಚನಾ ಸಂಸ್ಥೆಯು ಸತತ ೧೫ ವರ್ಷಗಳವರೆಗೆ ಸಾಧಿಸಿದ ಅಖಂಡ ಫಲಶ್ರುತಿ. ಇದನ್ನು ನಾನು ಅತ್ಯಂತ ಆತ್ಮವಿಶ್ವಾಸದಿಂದ ಹೇಳುತ್ತೇನೆ. ನಾವು ಕೆಲಸ ಪ್ರಾರಂಭಿಸಿದ ಆರಂಭದ ದಿನಗಳಲ್ಲಿ

ಸವದತ್ತಿಯಲ್ಲಿ ಪ್ರತಿವರ್ಷ ಸಾವಿರಾರು ದೇವದಾಸಿಯರನ್ನು ಬಿಡಲಾಗುತ್ತಿತ್ತು. ಇವತ್ತು ಅದು ಅಷ್ಟು ಪ್ರಖರವಾಗಿಲ್ಲ. ಈ ನಿಟ್ಟಿನಲ್ಲಿ ನಮ್ಮ ಸಂಸ್ಥೆಯೊಂದೇ ಕೆಲಸ ಮಾಡಿದೆ ಎಂದು ಹೇಳಲಾರೆ. ಅನೇಕ ಸಂಘಸಂಸ್ಥೆಗಳು ನಮ್ಮಂತೆ ಕೆಲಸ ನಿರ್ವಹಿಸಿವೆ. ನಮ್ಮ ಪ್ರಯತ್ನಕ್ಕೆ ಫಲ ದೊರೆತಿದೆ ಎಂದು ಪ್ರಾಮಾಣಿಕವಾಗಿ ಹೇಳಬಲ್ಲೆ.

**ನೀವು ದೇವದಾಸಿಯರ ಮಕ್ಕಳಿಗಾಗಿ ವಿಮೋಚನಾ ಶಾಲೆಯನ್ನು ತೆಗೆದಿದ್ದೀರಿ. ಪ್ರಧಾನಧಾರೆಯ ಸಮಾಜದಿಂದ ಅವರನ್ನು ಬೇರ್ಪಡಿಸಿ ದೇವದಾಸಿ ಮೂಲದ Identificationವುಳ್ಳ ಹೆಸರಿನ ಶಾಲೆಯಲ್ಲಿ ಅವರಿಗೆ ಶಿಕ್ಷಣ ನೀಡುವುದು ಎಷ್ಟರಮಟ್ಟಿಗೆ ಉಚಿತವೆನಿಸುತ್ತದೆ? ಅವರಿಗೆ ಸಮಾನ ಶಿಕ್ಷಣದ ಅಗತ್ಯವೆನಿಸುವುದಿಲ್ಲವೆ?**

ಎಲ್ಲಿಯವರೆಗೆ ನಾವು ಅವರನ್ನು ಸಮಾಜದ ಪ್ರಧಾನ ಧಾರೆಯಲ್ಲಿ ತರುವುದಿಲ್ಲವೋ ಅಲ್ಲಿಯವರೆಗೆ ಅವರು ಅದೇ ಹೆಸರಿನಿಂದ ಗುರುತಿಸಲ್ಪಡುತ್ತಾರೆ. ಅವರ ಈ ಹಣೆಪಟ್ಟಿಯನ್ನು ಕಿತ್ತೊಗೆಯಬೇಕಾದರೆ ಅವರನ್ನು ಸಮಾಜದ ಪ್ರಧಾನ ಧಾರೆಗೆ ತರುವ ಅಗತ್ಯವಿದೆ. ಈ ಹಿನ್ನೆಲೆಯಲ್ಲಿ ನೀವು ಹೇಳಿದಂತೆ ಸಮಾನ ಶಿಕ್ಷಣ ನೀಡುವ ಅಗತ್ಯವಿದೆ. ಆದರೆ ಹತ್ತು-ಹದಿನೈದು ವರ್ಷಗಳ ಹಿಂದೆ ವಾಸ್ತವ ಪರಿಸ್ಥಿತಿ ಬೇರೆಯೇ ಆಗಿತ್ತು. ದೇವದಾಸಿಯರು ತಮ್ಮ ಮಕ್ಕಳನ್ನು ಕರೆದುಕೊಂಡು ಶಾಲೆಗೆ ಹೆಸರು ಹಚ್ಚಲು ಹೋದರೆ, ಅಲ್ಲಿ ಆ ಕೂಸಿನ ತಂದೆಯ ಹೆಸರನ್ನು ಕೇಳುತ್ತಿದ್ದರು. ತಂದೆಯ ಹೆಸರಿಲ್ಲದಿದ್ದರೆ ಅವರನ್ನು ಶಾಲೆಯೊಳಗೆ ಕರೆದುಕೊಳ್ಳುತ್ತಿರಲಿಲ್ಲ. ಇಂಥ ದಿನಗಳೊಳಗೆ ನಾವು ಶಾಲೆಯನ್ನು ಪ್ರಾರಂಭಿಸಿದೆವು. ನಾವೆಲ್ಲ NGO's ಸೇರಿಕೊಂಡು ರಾಷ್ಟ್ರಮಟ್ಟದಲ್ಲಿ ಶೈಕ್ಷಣಿಕ ವಿಭಾಗದ ಮೇಲೆ ಒತ್ತಡ ತಂದೆವು. ಅದರ ಪರಿಣಮವಾಗಿ ಇವತ್ತು ತಂದೆಯ ಹೆಸರಿಲ್ಲದೆ, ತಾಯಿಯ ಹೆಸರಿನ ಮೇಲೆ ದೇವದಾಸಿಯರ ಮಕ್ಕಳು ಶಿಕ್ಷಣವನ್ನು ಪಡೆದುಕೊಳ್ಳುತ್ತಿದ್ದಾರೆ. ದೇವದಾಸಿಯರ ಮಕ್ಕಳ ಶಿಕ್ಷಣದ ಕುರಿತಂತೆ ಆಳವಾಗಿ ಅಧ್ಯಯನ ಮಾಡಿದ್ದೇನೆ. ಸಮಾನ ಶಿಕ್ಷಣದ ಹೆಸರಿನಲ್ಲಿ ಅವರಿಗೆ ಎಲ್ಲರೊಂದಿಗೆ ಶಿಕ್ಷಣ ನೀಡಲು ಪ್ರಾರಂಭಿಸಿದಾಗ ಅನೇಕ ಸಮಸ್ಯೆಗಳು ಎದುರಾಗುತ್ತವೆ. ಅಲ್ಲಿಯ ಕುಟುಂಬಸ್ತ ಮಕ್ಕಳು ಇವರನ್ನು ನಿಕೃಷ್ಟವಾಗಿ ಕಾಣುತ್ತಾರೆ. ಅವರ ಕುರಿತು ತುಚ್ಛವಾಗಿ ಮಾತನಾಡುತ್ತಾರೆ. ಇದನ್ನು ಕೇಳಿಕೊಂಡು ಆ ಮಗು ಮೂರು ತಿಂಗಳೋ, ಆರು ತಿಂಗಳೋ ಬಹಳ ಗಟ್ಟಿಯಿದ್ದರೆ ಒಂದು ವರ್ಷದವರೆಗೆ ಶಾಲೆಗೆ ಬಂದು ನಂತರ ಬಿಟ್ಟುಬಿಡುವ ಸಾಧ್ಯತೆಗಳೇ ಹೆಚ್ಚು. ಒಮ್ಮೆ ಶಾಲೆಯನ್ನು ಬಿಟ್ಟಂತಹ ಮಕ್ಕಳನ್ನು ತಿರುಗಿ ಶಿಕ್ಷಣಕ್ಕೆ ಮುಖಾಮುಖಿಯಾಗಿಸುವುದು ತುಂಬ ಕಷ್ಟ. ಬಡತನ, ಅಜ್ಞಾನ, ಅಪಮಾನ ಇವೆಲ್ಲ ಒಂದಿಲ್ಲ ಒಂದು ಬಗೆಯಲ್ಲಿ ಆ ಮಗುವಿನ ಮೇಲೆ ಕೆಟ್ಟ ಪರಿಣಾಮವನ್ನು ಬೀರುತ್ತವೆ. ಅದಕ್ಕಾಗಿ ನಾನು ಅವರಿಗಾಗಿಯೇ 'ವಿಮೋಚನಾ ವಸತಿ ಶಾಲೆಯನ್ನು ಪ್ರಾರಂಭಿಸಿದೆನು. ಹತ್ತನೆಯ ತರಗತಿಯವರೆಗೆ ಅವರಿಗೆ ಶಿಕ್ಷಣವನ್ನು ಕಲ್ಪಿಸಿದರೆ, ಅವರಿಗೆ Basic Education ಕೊಟ್ಟ ಹಾಗಾಗುತ್ತಲ್ಲ. ಅವರಲ್ಲಿಯೇ ನಾಲ್ಕು ರತ್ನಗಳು ದೊರೆತರೆ, ಅವರಿಗೇ ಉನ್ನತ ಶಿಕ್ಷಣದ ಅನುಕೂಲ ಮಾಡಿಕೊಟ್ಟರೆ, ಅವರೆಲ್ಲರಿಗೆ

ತಮ್ಮ ತಮ್ಮ ಕಾಲ ಮೇಲೆ ಸ್ವಾಭಿಮಾನದಿಂದ ನಿಂತುಕೊಳ್ಳಲು ಸಾಧ್ಯವಾಗುತ್ತದೆ. ಈ ಶತಮಾನದ ಆದಿಯಲ್ಲಿ ವಿಜಾಪುರದಲ್ಲಿ ಕಾಕಾ ಕಾರಖಾನೀಜ್ ಅವರು ಒಂದು ಅದ್ಭುತವಾದ ಕೆಲಸವನ್ನು ಮಾಡಿದರು. ಅವರ ಕೆಲಸದ ಸರಿಸಮಕ್ಕೆ ನನ್ನ ಕೆಲಸ ನಿಲ್ಲಲಾರದು. ಅವರೆಲ್ಲಿ? ನಾವೆಲ್ಲಿ? ಇಪ್ಪತ್ತನೆಯ ಶತಮಾನದ ಆದಿಯಲ್ಲಿ ಅದೂ ಒಬ್ಬ ಬ್ರಾಹ್ಮಣ, ಮದುವೆಯಾಗದ ತನ್ನ ನಾಲ್ಕು ಜನ ಅಕ್ಕ ತಂಗಿಯರನ್ನು ಕರೆದುಕೊಂಡು ದೇವದಾಸಿಯರಿಗಾಗಿ, ಅವರ ಮಕ್ಕಳಿಗಾಗಿ ಟೊಂಕ ಕಟ್ಟಿಕೊಂಡು ನಿಂತರು. ಈ ಸಂಗತಿಯನ್ನು ಸಾಮಾನ್ಯವೆನ್ನುವಂತೆ ಪರಿಗಣಿಸಬಾರದು. ಅವರು ತಮ್ಮ ಕೊನೆಗಾಲದಲ್ಲಿ, ತಾವು ಮಾಡಿದ ಕೆಲಸವನ್ನು ಹಾಗೂ ಅದರ ಫಲಿತಾಂಶವನ್ನು ಎದುರಿಗಿಟ್ಟುಕೊಂಡು ತೂಗಿ ನೋಡಿದರು. ತಾವು ಕಟ್ಟಿಸಿದ ಕಟ್ಟಡದ ಎದುರು ಕುಳಿತುಕೊಂಡು ನಿರಾಶೆಯಿಂದ ಬಿಕ್ಕಿ ಬಿಕ್ಕಿ ಅತ್ತರು. ಇಂತಹ ಕಾಲ ನನಗೂ ಬಂದರೆ ಹೇಗೆ ಎನ್ನುವ ಅಳಕು ನನಗಿತ್ತು. ಆದರೆ ಇವತ್ತು ಹಾಗಾಗುವುದಿಲ್ಲ. ಆ ಮಕ್ಕಳಲ್ಲಿ ವಿಶೇಷ ಜಾಗೃತಿ ಮೂಡಿದೆ. ನಮ್ಮ ಒಬ್ಬ ಮಗ ಎಂಜನಿಯರಿಂಗ್ ಕಾಲೇಜಿನಲ್ಲಿ ಅಂತಿಮ ವರ್ಷದಲ್ಲಿ ಓದುತ್ತಿದ್ದಾನೆ. ನಮ್ಮ ಅನೇಕ ಮಕ್ಕಳು ಇವತ್ತು ಇಲ್ಲಿಯೇ NTTF ಕಾಲೇಜಿನಲ್ಲಿ ಓದುತ್ತಿದ್ದಾರೆ. ಇನ್ನು ಕೆಲವು ಮಕ್ಕಳು ಮೈಸೂರಿನ ಸುತ್ತೂರು ಮಠದ ಪಾಲಿಟಕ್ನಿಕಲ್ ಕಾಲೇಜಿನಲ್ಲಿ ಓದುತ್ತಿದ್ದಾರೆ. ITI ಕಾಲೇಜಿನಲ್ಲಿ ಇದ್ದಾರೆ. ಹಿಂದೆ ಅವರಿಗೆ ಅನೇಕ ಸಮಸ್ಯೆಗಳಿಂದಾಗಿ ಶಿಕ್ಷಣ ಸಿಗ್ತಾ ಇರಲಿಲ್ಲ. ಇವತ್ತು ಪರಿಸ್ಥಿತಿ ಹಾಗಿಲ್ಲ. S.S.L.C.ಯವರೆಗೆ ನಾವು ಅವರಿಗೆ ಕೊಡುವ ಶಿಕ್ಷಣ ಬಹಳ ಉಪಯೋಗವಾಗುತ್ತದೆ. ಈ ಹೊತ್ತಿನಲ್ಲಿ ಎಲ್ಲವನ್ನು ಅರ್ಥಮಾಡಿಕೊಳ್ಳುವ ತಾಕತ್ತು ಇರುತ್ತದೆ. ನಾವು ಈ ಘಟ್ಟದಲ್ಲಿ ಮಕ್ಕಳಿಗೆ ಅವರು ಬೆಳೆದು ಬಂದ ವಾತಾವರಣದ ಹಿನ್ನೆಲೆಯ ಅರಿವು ಮೂಡಿಸುತ್ತಲೇ, ಅದನ್ನು ಮೀರಿ ಬೆಳೆಯುವ ಚೈತನ್ಯವನ್ನು ನೀಡುತ್ತೇವೆ. ಎಲ್ಲ ಧರ್ಮಗಳ ಗುರುಗಳನ್ನು ಕರೆಸುತ್ತೇವೆ. ಎಲ್ಲ ತರಹದ ಸಾಮಾಜಿಕ ಕಾರ್ಯಕರ್ತರನ್ನು ಕರೆದುಕೊಂಡು ಬರುತ್ತೇವೆ. ಎಲ್ಲ ಬಗೆಯ Academi-cians ಕರೆಸುತ್ತೇವೆ. ಮಕ್ಕಳ ಬದುಕಿನ ಹಿನ್ನೆಲೆಯನ್ನು ನಾವು ಮುಚ್ಚಿಸಲು ಪ್ರಯತ್ನಿಸುವುದಿಲ್ಲ. ಅದು ಸಾಧ್ಯವೂ ಇಲ್ಲ. ನಿಮ್ಮ ಹಿನ್ನೆಲೆಯಲ್ಲಿಯೇ ಬೆಳೆದುಬಂದಂತಹ ಅನೇಕರು ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯ ಮಟ್ಟದಲ್ಲಿ ಹೆಸರನ್ನು ಗಳಿಸಿದ್ದಾರೆ. ನೀವೂ ಆ ನೆಲೆಯಲ್ಲಿ ಪ್ರಯತ್ನಿಸಬೇಕು ಎಂಬುದನ್ನು ಅವರಿಗೆ ತಿಳಿಸಿ ಹೇಳುತ್ತೇವೆ. ಬೆಳಗಾಂ ಜಿಲ್ಲೆಯ ವಿಭಾಗಾಧಿಕಾರಿಯೊಬ್ಬರು ತಮಿಳುನಾಡಿನ ಅತ್ಯಂತ ಬಡ ಹರಿಜನ ಕುಟುಂಬದಿಂದ ಬಂದಂತಹವರು. ಅವರು ತಮ್ಮ ಹನ್ನೆರಡನೆಯ ವರ್ಷ ವಯಸ್ಸಿನ ತನಕ ಶಾಲೆಗೆ ನಾಲ್ಕು ಕಿ.ಮೀ. ನಡೆಯುತ್ತಾ ಹೋಗುತ್ತಿದ್ದರು. ಶಾಲೆಯಿಂದ ವಾಪಸ್ಸಾದ ಅವರಿಗೆ, ತಮ್ಮ ತಾಯಿಯ ಮುಖ ನೋಡಲು ಸಿಗುತ್ತಿರಲಿಲ್ಲ. ಅವಳು ಮಗನಿಗೆಂದು ಗಡಿಗಿಯ ಕೆಳಗೆ ರೊಟ್ಟಿಯನ್ನು ಮುಚ್ಚಿಟ್ಟು ಕೂಲಿಗೆ ಹೋಗಿರುತ್ತಿದ್ದಳು. ಶಾಲೆಯಿಂದ ಮನೆಗೆ ಬರುವ ವೇಳೆಗೆ ಅದು ನಾಯಿಯ ಪಾಲಾಗಿರುತ್ತಿತ್ತು. ಇಂತಹ ಅನಿವಾರ್ಯ

ಕಾರಣಗಳಿಂದಾಗಿ ಅವರು ಉಪವಾಸ ಉಳಿದದ್ದೇ ಹೆಚ್ಚು. ಇಂದು ಅದೇ ಹುಡುಗ ಬೆಳಗಾವಿಯ Divisional Commissioner ಆಗಿರುವನು. ಇಂಥ ಜೀವಂತ ಮಾದರಿಗಳನ್ನು ಅವರೆದುರಿಗೆ ಇಡುವೆವು. ಈ ನಿಟ್ಟಿನಲ್ಲಿ ನಾವು ಅವರಿಗೆ ಮಾನಸಿಕವಾಗಿ ಪೂರ್ವಭಾವಿ ತರಬೇತಿಯನ್ನು ನೀಡುವೆವು. ಅವರ ಮನಸ್ಸಿನ ಮೂಲೆಯಲ್ಲುಳಿದ ಕೀಳರಿಮೆಯನ್ನು ಕಿತ್ತೊಗೆಯುವ ಸಣ್ಣ ಪ್ರಮಾಣಿಕ ಪ್ರಯತ್ನವನ್ನು ನಾವು ನಡೆಸಿರುವೆವು. ನಮ್ಮದು ಕೇವಲ ದೇವದಾಸಿಯರ ಮಕ್ಕಳು ಕಲಿಯುವ ಶಾಲೆಯಲ್ಲ. ಮಲ್ಲಾಬಾದ್‌ನಲ್ಲಿ ಹೈಸ್ಕೂಲು ಇಲ್ಲ. ಹೀಗಾಗಿ ನಾವು ನಮ್ಮ ಮಕ್ಕಳ ಜೊತೆಗೆ ಕುಟುಂಬಸ್ಥ ಮಕ್ಕಳಿಗೂ ಪ್ರವೇಶ ನೀಡುವೆವು. ನಮ್ಮ ಮಕ್ಕಳು ೩೦ ಜನರಿದ್ದರೆ, ಉಳಿದ ಮಕ್ಕಳು ಹತ್ತೋ ಹದಿನೈದೋ ಇರುವರು. ಈ ಕ್ರಮ ಅವರನ್ನು ಸಮಾಜದ ಪ್ರಧಾನಧಾರೆಗೆ ಕೊಂಡೊಯ್ಯುತ್ತದೆ ಎಂದು ನಂಬಿದ್ದೇನೆ. 'ದೇವದಾಸಿ' ಎನ್ನುವ ಶಬ್ದವನ್ನು ನಮ್ಮ ಶಾಲೆಯ ಆವರಣದಲ್ಲಿ ಯಾರೂ ಉಚ್ಚರಿಸುವುದಿಲ್ಲ. ಇದನ್ನು ನಾವು ಕಠಿಣವಾಗಿ ಪಾಲಿಸಿಕೊಂಡು ಬಂದಿದ್ದೇವೆ.

ಇವತ್ತು ವಿಮೋಚನಾ ಶಾಲೆಯಂತಹ ಶಿಕ್ಷಣ ಸಂಸ್ಥೆ ಇಲ್ಲಾ ಎಂದು ಕಲ್ಪನೆ ಮಾಡಿಕೊಳ್ಳಿ. ಸಾಮಾನ್ಯ ಶಾಲೆಯಲ್ಲಿ ದೇವದಾಸಿ ಹಿನ್ನೆಲೆಯಿಂದ ಬಂದ ಮಗು ಪ್ರವೇಶ ಪಡೆದಿದೆ ಎಂದಿಟ್ಟುಕೊಳ್ಳಿ. ಅಲ್ಲಿ ಅವರಿಗೆ ಕುಟುಂಬಸ್ಥ ಮಕ್ಕಳೊಂದಿಗೆ ಸಹಜವಾಗಿ ಬೆರೆಯಲು ಆಗುವುದಿಲ್ಲ. ಸೂಳೆಯ ಮಗ ಅಥವಾ ಮಗಳು ಎಂದು ಬೆರಳು ಮಾಡಿ ಅಪಮಾನಿಸುತ್ತವೆ. ಅವರನ್ನು ತಮ್ಮ ಪಕ್ಕದಲ್ಲಿ ಕೂಡಿಸಿಕೊಳ್ಳು ಇಷ್ಟಪಡುವುದಿಲ್ಲ. ಇದು ಈ ಹೊತ್ತಿಗೂ ನಮ್ಮ ಸಮಾಜದಲ್ಲಿ ಜೀವಂತವಾಗಿದೆ. ಅದಕ್ಕಾಗಿ ಅಂತಹ ಮಕ್ಕಳು ಸಮಾನ ಶಿಕ್ಷಣ ಪಡೆಯುವುದು ಕಷ್ಟವಾಗುತ್ತದೆ. ಸಮಾನ ಶಿಕ್ಷಣ ಸಂಸ್ಥೆಯಲ್ಲಿ ಕಲಿಯುವ ದೇವದಾಸಿಯರ ಮಕ್ಕಳಿಗಿಂತಲೂ, ನಮ್ಮ ವಿಮೋಚನಾ ಶಿಕ್ಷಣ ಸಂಸ್ಥೆಯಲ್ಲಿ ಕಲಿಯುವ ಮಕ್ಕಳು ಮಾನಸಿಕವಾಗಿ, ಬೌದ್ಧಿಕವಾಗಿ ಹೆಚ್ಚು ಸದೃಢವಾಗಿರುತ್ತಾರೆ. ಸಮಾಜದ ಪ್ರಧಾನಧಾರೆಯಲ್ಲಿದ್ದು ಕೊಂಡು ಅವರು ಶಿಕ್ಷಣ ಪಡೆಯಬೇಕೆಂಬ ವಿಚಾರ ಬಹಳ ಒಳ್ಳೆಯದು. ಆದರೆ ವಾಸ್ತವ ಸಂಗತಿಯನ್ನು ಕಡೆಗಣಿಸ ಕೂಡದು. ಮಕ್ಕಳ ಮನಸ್ಸು ಬಹಳ ಸೂಕ್ಷ್ಮ ವಾಗಿರುವುದರಿಂದ ಅವುಗಳಿಗೆ ಸಾಮಾಜಿಕ ಅಪಮಾನಗಳನ್ನು ಎದುರಿಸಲಾಗು ವುದಿಲ್ಲ. ಅಪಮಾನಗಳಿಂದ ಎದೆಗುಂದಿದ ಮಗು ಶಿಕ್ಷಣಕ್ಕೆ ಬೆನ್ನು ತೋರಿಸುತ್ತದೆ. ತಾಯಿಯ ಹತ್ತಿರ ಬಂದ ಆ ಮಗು ಪಿಂಪ್ ಆಗಿಬಿಡುತ್ತದೆ. ಬಾಂಬೆಯ ರೆಡ್ ಲೈಟ್ ಏರಿಯಾದಲ್ಲಿ ಇದೆಲ್ಲ ಸಾಮಾನ್ಯ. ತಾಯಿಯ ರಾತ್ರಿಯ ಎಲ್ಲ ವ್ಯವಹಾರಗಳನ್ನು ನೋಡಿಕೊಂಡು ಬದುಕುವ ಅನಿವಾರ್ಯ ಕಠೋರ ಪ್ರಸಂಗ ಅವರೆದುರಿಗಿದೆ. ಆ ಹೊತ್ತಿನಲ್ಲಿ ಮಗುವನ್ನು ಹೊರಹಾಕಿದರೂ, ಅವಳು ಒಳಗಡೆ ಕರೆದುಕೊಳ್ಳುವವರೆಗೆ ಹೊರಗಡೆ ನಿಂತು ಕಾಯಬೇಕು. ಇದನ್ನು ನಾನೇಕೆ ಹೇಳುತ್ತಿದ್ದೇನೆಂದರೆ ಆ ಮಕ್ಕಳೆದುರಿಗಿರುವ ಈ ಅನಿವಾರ್ಯತೆ, ಅಂತಿಮವಾಗಿ ಅವರನ್ನು ಆ ವ್ಯವಸ್ಥೆಗೆ ಹೊಂದಿಕೊಳ್ಳುವ ರೂಢೀಕರಣವನ್ನು ಹುಟ್ಟುಹಾಕುತ್ತದೆ. ಬಾಂಬೆಯ ರೆಡ್ ಲೈಟ್ ಏರಿಯಾದಲ್ಲಿ ನಮ್ಮ ತೆರನಾದ ಕೆಲವು ಸಂಘ ಸಂಸ್ಥೆಗಳು ಹಗಲು ಶಾಲೆಗಳನ್ನು

ನಡೆಸುತ್ತವೆ. ವಸತಿ ಶಾಲೆಗಳಲ್ಲದ ಅವುಗಳು ಅವರಿಗೆ ರಾತ್ರಿಯ ತಾಯಿಯ ವ್ಯವಹಾರಗಳನ್ನು ನೋಡುವ ಅನಿವಾರ್ಯತೆಯನ್ನು ಸೃಷ್ಟಿಸುತ್ತವೆ. ಈ ಹಿನ್ನೆಲೆಯಲ್ಲಿ ವಿಮೋಚನಾ ಶಾಲೆಯಂಥ ಶಿಕ್ಷಣ ಸಂಸ್ಥೆಗಳು ಬಹಳ ಅಗತ್ಯವೆನಿಸುತ್ತವೆ. ಅವಶ್ಯಕವೆನಿಸುತ್ತವೆ. ಒಂದು ಹಂತದ ತಿಳುವಳಿಕೆ ಬರುವವರೆಗೆ ಆ ಮಗು ಒಳ್ಳೆಯ ವಾತಾವರಣದಲ್ಲಿ ಬೆಳೆಯಲಿ.

**ಒಬ್ಬ Social activist ಆಗಿ ನಿಮ್ಮಂತೆ ಸೇವೆಸಲ್ಲಿಸುತ್ತಿರುವ ಸಂಘಸಂಸ್ಥೆಗಳ ಕುರಿತು ನಿಮಗೇ ನೆನಿಸುತ್ತೆ? ಅವುಗಳು ಪ್ರಾಮಾಣಿಕವಾಗಿ ಕೆಲಸ ನಿರ್ವಹಿಸುತ್ತಿವೆಯಾ?**

NGOಗಳ ಬಗ್ಗೆ ಅಭಿಪ್ರಾಯವನ್ನು ಕೇಳಿದ ರೀತಿಯಲ್ಲಿ ಕೇಳಿದಿರಿ. ಸುದೈವ ದಿಂದಲೋ ದುರ್ದೈವದಿಂದಲೋ I am heading an institution of the Central Government. ಕಪಾರ್ಟ್ ಎನ್ನುವ ಸಂಸ್ಥೆಯ ನಾಲ್ಕು ರಾಜ್ಯಗಳ Chair Person ಆಗಿ ಕೆಲಸ ನಿರ್ವಹಿಸುತ್ತಿದ್ದೇನೆ. ಕಪಾರ್ಟದ ಅಧ್ಯಕ್ಷನಾಗಿ ನಾನು ನಿಮಗೆ ಅಭಿಪ್ರಾಯವನ್ನು ಕೊಡಬಹುದು. ಕಪಾರ್ಟ್ ಸಹಾಯ ಮಾಡುವುದೇ NGOಗಳಿಗೆ. ಈ ವ್ಯವಸ್ಥೆಯನ್ನು ಹತ್ತಿರದಿಂದ ಕಂಡ ನಾನು ನಿಮಗೆ ಕೆಲವು ಅಭಿಪ್ರಾಯಗಳನ್ನು ಹೇಳಬಹುದು. NGOಗಳನ್ನು ಮಾಡಿಕೊಂಡು ಅದರಲ್ಲಿಯೇ ಬದುಕುವ ಜನ ಹುಟ್ಟಿಕೊಂಡಿದ್ದು ಈ ದೇಶದ ಅತ್ಯಂತ ದುರ್ದೈವದ ಸಂಗತಿ. ಇತ್ತಿತ್ತಲಾಗಿ NGOಗಳನ್ನು ಮಾಡುವುದೇ ಒಂದು ಫ್ಯಾಷನ್ ಆಗಿಬಿಟ್ಟಿದೆ. ಸಮಾಜಸೇವೆ ಮಾಡಬೇಕೆನ್ನುವವರು ಯಾರ ಗೌರವವನ್ನು ನಿರೀಕ್ಷಿಸುವುದಿಲ್ಲ. ಅದಕ್ಕಾಗಿ ಸಂಸ್ಥೆಯನ್ನು ಕಟ್ಟಬೇಕಾಗಿಲ್ಲ. ದುಡ್ಡನ್ನು ಸಂಗ್ರಹಿಸ ಬೇಕಾಗಿಲ್ಲ. ಪ್ರಾಮಾಣಿಕವಾಗಿ ಸಾಮಾಜಿಕ ಸೇವೆ ಮಾಡಬೇಕೆನ್ನುವವರಿಗೆ ದುಡ್ಡು ತಾನಾಗಿಯೇ ಹುಡುಕಿಕೊಂಡು ಬರುತ್ತದೆ. ತಾವು ಕಾಕಾ ರಖಾನೀಜ್ ಅವರ ಹೆಸರು ಕೇಳಿರಬಹುದು. ಅವರು ತಮ್ಮ ಸೇವೆಯನ್ನು ದೊಡ್ಡ ಸಂಸ್ಥೆಯನ್ನು ಕಟ್ಟಿಕೊಂಡೇ ಪ್ರಾರಂಭಿಸಿರಲಿಲ್ಲ. ಅಥವಾ ಮುಂಬರುವ ಫಂಡ್‌ಗಾಗಿ ಅವರು ಈ ಯೋಜನೆಯನ್ನು ಕೈಗೆತ್ತಿಕೊಳ್ಳಲಿಲ್ಲ. ನಿಸ್ವಾರ್ಥವಾದ ರೀತಿಯಲ್ಲಿ ಅವರು ಇಡೀ ಜೀವನವನ್ನು ದೇವದಾಸಿಯರ ವಿಮೋಚನೆಗಾಗಿ ತೆಯ್ದರು. ಇಂದು ಅಂತಹ ಸಮಾಜ ಸೇವೆ ದುರ್ದೈವದಿಂದ ಕಡಿಮೆಯಾಗುತ್ತಾ ನಡೆದಿದೆ. NGOಗಳನ್ನು ನಡೆಸಿಕೊಂಡು ಹೋಗುವ ಅನೇಕರು ಫಲಾನುಭವಿಗಳಾಗಿ ಕೆಲಸ ಮಾಡುತ್ತಿಲ್ಲ. ಅವರು ಅಲ್ಲಿ ತಮ್ಮ ಸ್ವಾರ್ಥದ ಬೇಳೆಯನ್ನು ಬೇಯಿಸಿಕೊಳ್ಳುತ್ತಿದ್ದಾರೆ. ಈ ತರಹದ ಅನೇಕ ಸಂಸ್ಥೆಗಳನ್ನು ಕಪಾರ್ಟನಲ್ಲಿ ಕೆಂಪು ಪಟ್ಟಿಯಲ್ಲಿ ಇಟ್ಟಿದ್ದೇವೆ. ಉದಾಹರಣೆಗೆ ಹೇಳಬೇಕೆಂದರೆ ಕೊಲ್ಹಾರದಲ್ಲಿ ನೂರಕ್ಕೆ ಅರವತ್ತರಷ್ಟು NGOಗಳು ಕೆಂಪು ಪಟ್ಟಿಯಲ್ಲಿವೆ. ಸಮಾಜಸೇವಾ ಮನೋಭಾವ ವನ್ನಿಟ್ಟುಕೊಂಡ ಈ ತರಹದ ಸಂಘಸಂಸ್ಥೆಗಳಲ್ಲಿ ಈ ಕೀಳು ವೃತ್ತಿ ಬೆಳೆಯಬಾರದಿತ್ತು. ಅದಕ್ಕೆ ಏನೂ ಮಾಡಲಾಗುವುದಿಲ್ಲ. ಯಾಕೆಂದರೆ ವ್ಯವಸ್ಥೆಯನ್ನು ಸುಧಾರಿಸುವವರೂ ನಾವೇ ಕೆಡಿಸುವವರೂ ನಾವೇ. ನಮ್ಮ ದೇಶದಲ್ಲಿ ಕೆಳಮಟ್ಟದ ವ್ಯಕ್ತಿಯಿಂದ ಹಿಡಿದು ಅತ್ಯುನ್ನತ

ಮಟ್ಟದ ವ್ಯಕ್ತಿಯವರೆಗೆ Corruptionನಲ್ಲಿ ಮುಳುಗಿ ಹೋಗಿದ್ದಾರೆ. ಯಾರು ನಮಗೆ ಮಾದರಿಯಾಗಬೇಕಿತ್ತೋ ಅವರೇ ಇವತ್ತು Corruptionದ ಸಾಕಾರ ಮೂರ್ತಿಯಾಗಿದ್ದಾರೆ. ಇಂತಹ ವ್ಯವಸ್ಥೆಯಲ್ಲಿ ನನ್ನಂತಹ ಅತ್ಯಂತ ಸಣ್ಣ ವ್ಯಕ್ತಿ ಒಳ್ಳೆಯವನಾಗಿ ಬದುಕುವುದು ಕಠಿಣವಾಗಿದೆ, ದೊಡ್ಡ ಸವಾಲಾಗಿದೆ. ಎಲ್ಲ NGOಗಳು ಭ್ರಷ್ಟರೆಂದು ನಾನು ಹೇಳುತ್ತಿಲ್ಲ. ಎಲ್ಲೋ ಒಂದಿಬ್ಬರು ಒಳ್ಳೆಯವರಿರಬಹುದು. ಅವರು ಅದ್ಭುತವಾದ ರೀತಿಯಲ್ಲಿ ಪ್ರಮಾಣಿಕ ಸೇವೆಯನ್ನು ನೀಡಿದ್ದಾರೆ. ಆದರೆ ಅಂಥವರು ಬೆರಳೆಣಿಕೆಯಷ್ಟು ಮಾತ್ರ ಇದ್ದಾರೆ. ಹೆಚ್ಚಿನವರು ಸಂಸ್ಥೆಯ ಹೆಸರಿನಲ್ಲಿ ಸ್ವಂತಕ್ಕೆ ದುಡ್ಡು ಮಾಡಿಕೊಳ್ಳುತ್ತಿರುವವರು. ಇದು ನಮ್ಮ ದುರ್ದೈವ.

**ಮಹಾರಾಷ್ಟ್ರದಲ್ಲಿ ದೇವದಾಸಿಯರ ವಿಮೋಚನೆ ಸಂಬಂಧಿಸಿದಂತೆ ಅನೇಕ ಮಹಿಳಾ ಸಂಘಟನೆಗಳು ಕಾರ್ಯನಿರ್ವಹಿಸುತ್ತಿವೆ. ನನಗೆ ಗೊತ್ತಿದ್ದ ಮಟ್ಟಿಗೆ ಈ ತರಹದ ಮಹಿಳಾ ಸಂಘಟನೆಗಳು ಕರ್ನಾಟಕದಲ್ಲಿ ಇಲ್ಲ ಅಲ್ವಾ?**

ನನ್ನ ಈ ಹದಿನೈದು ವರ್ಷಗಳ ಅನುಭವದ ಹಿನ್ನೆಲೆಯಲ್ಲಿ ಕರ್ನಾಟಕದಲ್ಲಿ ಈ ಹಿನ್ನೆಲೆಯಲ್ಲಿ ಕೆಲಸ ನಿರ್ವಹಿಸಿದ ಮಹಿಳಾ ಸಂಘಟನೆಗಳನ್ನು ನಾನು ಭೇಟಿ ಮಾಡಿಲ್ಲ. ಈಗ ಅತ್ಯಂತ ಹೊಸದಾಗಿ ಇಂತಹ ಸಂಘ ಸಂಸ್ಥೆಗಳನ್ನು ಕಟ್ಟಿಕೊಂಡಿದ್ದರೆ. ನನಗದು ತಿಳಿದಿಲ್ಲ. ಆದರೆ NGOದಲ್ಲಿ ಅನೇಕ ಮಹಿಳಾ ಅಧಿಕಾರಿಗಳು ಈ ಹಿನ್ನೆಲೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ. ಆದರೆ ಅವರ್ಯಾರೂ ಸಂಘಸಂಸ್ಥೆಗಳನ್ನು ಕಟ್ಟಿಕೊಂಡಿಲ್ಲ. ಅದಕ್ಕಾಗಿಯೇ Dedicate ಮಾಡಿದಂಥವರು ಯಾರೂ ಇದ್ದಂತಿಲ್ಲ. ಮಹಾರಾಷ್ಟ್ರದಲ್ಲಿ, ಪಶ್ಚಿಮ ಬಂಗಾಲದಲ್ಲಿ, ಡೆಲ್ಲಿಯಲ್ಲಿ ಈ ತೆರನಾದ ಸಂಘಟನೆಗಳು ಸಾಕಷ್ಟು ಇವೆ. ಕರ್ನಾಟಕದ ಒಬ್ಬ ಹೆಣ್ಣುಮಗಳು ಡೆಲ್ಲಿಯಲ್ಲಿ ಬಹುದೊಡ್ಡ ಹೆಸರನ್ನು ಗಳಿಸಿಕೊಂಡಿದ್ದಾಳೆ. ಅಭಿಮಾನ ಪಡುವಂತಹ ಕೆಲಸಗಳನ್ನು ಅವಳು ನಿರ್ವಹಿಸುತ್ತಿದ್ದಾಳೆ. ಆದರೆ ಕರ್ನಾಟಕದಲ್ಲಿ ಆ ಮಟ್ಟವನ್ನು ಮುಟ್ಟಿದ ಹೆಣ್ಣುಮಗಳನ್ನು ನಾನು ನೋಡಿಲ್ಲ.

**ಕರ್ನಾಟಕದಲ್ಲಿ ಮಹಿಳೆಗೆ ಈ ನಿಟ್ಟಿನಲ್ಲಿ ಯಾಕೆ ಕೆಲಸ ನಿರ್ವಹಿಸಲಾಗುತ್ತಿಲ್ಲ?**

ಇಂತಹ ಕೆಲಸಕ್ಕೆ ಕೈಹಾಕುವವರು ಒಣಗೌರವ ಹಾಗೂ ಅಭಿಮಾನವನ್ನು ಬಿಟ್ಟುಕೊಡಬೇಕು. ಸೇವಾಮನೋಭಾವದಿಂದ ಇಂತ ಕ್ಷೇತ್ರಕ್ಕೆ ಕಾಲಿಡಬೇಕು. ಈ ಕ್ಷೇತ್ರಕ್ಕೆ ಕಾಲಿಟ್ಟಾಗ 'ಸಾಮಾಜಿಕ ಅಪಮಾನಗಳು ಎದುರಾಗುವುದು ಸಹಜ. ಅದನ್ನು ಮೀರಿ ನಿಲ್ಲುವಂತಹ ಮನೋಭಾವವನ್ನು ಮೊದಲೇ ಬೆಳೆಸಿಕೊಳ್ಳಬೇಕು. ಉಚ್ಚವರ್ಣೀಯ ಮಹಿಳೆಯರಲ್ಲಿ ಈ ಮನೋಭಾವವನ್ನು ನಾವು ಬೆಳೆಸಿಲ್ಲ. ಅಥವಾ ಅವರಲ್ಲಿ ಅದು ಬೆಳೆದು ಬಂದಿಲ್ಲ. ಸಾಮಾಜಿಕವಾಗಿ ಎದುರಾಗುವ ನೋವು, ಅಪಮಾನಗಳನ್ನು ಎದುರಿಸುವ ಮಾನಸಿಕ ಶಕ್ತಿ ಸಾಮಾನ್ಯವಾಗಿ ಮಹಿಳೆಯರಲ್ಲಿ ಕಡಿಮೆಯಿರುತ್ತದೆ. ಈ ಎಲ್ಲ ಕಾರಣಗಳಿಂದಾಗಿ ಕರ್ನಾಟಕದಲ್ಲಿ ಇಂತಹ ಸಂಘಟನೆಗಳು ಕಾಣಸಿಕೊಂಡಿರಲಿಕ್ಕಿಲ್ಲ. ಅನೇಕ ರಾಜಕೀಯ

ಧುರೀಣರು-ಅವರು ಮಹಿಳೆಯರಿರಬಹುದು, ಪುರುಷರಿರಬಹುದು- ಅಕ್ಕತಂಗಿಯರು ದೇವದಾಸಿ ವ್ಯವಸ್ಥೆಯೊಳಗೆ ಸಿಕ್ಕು ನಲುಗುತ್ತಿದ್ದರೂ ಅವರೆಂದೂ ಆ ಕುರಿತಂತೆ ತಲೆಕೆಡಿಸಿಕೊಂಡಿಲ್ಲ.

**ಅಂದರೆ ನಿಮ್ಮ ಅರ್ಥದಲ್ಲಿ ಶೋಷಿತ ಸಮುದಾಯಗಳಿಂದ ಬಂದಂತಹ ರಾಜಕೀಯ ನಾಯಕ, ನಾಯಕಿಯರು ಅವರ ಕುರಿತಂತೆ ವಿಶೇಷ ಆಶಕ್ತಿ ತೋರಿಸುತ್ತಿಲ್ಲ ಎಂತಲೆ?**

ಖಂಡಿತವಾಗಿಯೂ ಹೌದು. ೧೯೯೨ರಲ್ಲಿ ನಾನು ಪ್ರಾರಂಭಿಸಿದ ಹೈಸ್ಕೂಲಿನ ಪರ್ಮಿಷನ್ ತೆಗೆದುಕೊಳ್ಳಲಿಕ್ಕೆ ಅಂದಿನ ಶಿಕ್ಷಣ ಸಚಿವರಾಗಿದ್ದ ಮೊಯಿಲಿಯವರ ಭೇಂಬರಿಗೆ ಹೋಗಿದ್ದೆ. ಅಲ್ಲಿ ಅತ್ಯುನ್ನತ ಪದವಿ ಪಡೆದುಕೊಂಡಿದ್ದ ವಕೀಲರು ನನ್ನನ್ನು ಮಾತನಾಡಿಸಿದರು. ಅವರು ದಲಿತರಾಗಿದ್ದರು. ನಾನು ಬಂದ ಕಾರಣವನ್ನು ಕೇಳಿದರು. 'ಹೈಸ್ಕೂಲು ಮಂಜೂರಾತಿಗಾಗಿ ಬಂದಿರುವೆ' ಎಂದ ತಕ್ಷಣ ಒಮ್ಮೊಂದೊಮ್ಮೆಲೆ ಅಬ್ಬರಿಸಿದರು- 'ಈ ಮನುಷ್ಯ ದಲಿತರ ಉದ್ಧಾರ ಮಾಡತೀನಿ ಅಂತ್ಹೇಳಿ ಅವರ್ನ ದಾರಿತಪ್ಪಿಸಾಕ ಬಂದಾನ. ಅವರಿಗಿ ಶಾಲಿ ಕಲಿಸ್ತೀನಿ ಅಂತ ಮುಂದ ಬಂದಾನ. ಕಲಿತ್ರ ಅವರು ಮುಂದ ನಿರುದ್ಯೋಗಿಗಳಾಗತಾರ....ಅವರೇನು ಹಮಾಲಿ ಮಾಡಬೇಕಾ, ಇವ್ರು ಗೌಡ್ರ ಮಂದಿ ನಮ್ಮ ಮಕ್ಕಳು ಹಮಾಲಿ ಮಾಡಬೇಕಂತ ಇಂಥ ವ್ಯವಸ್ಥೆ ಹುಟ್ಟುಹಾಕಿದರ. ನಮ್ಮ ಜನಾಂಗದಲ್ಲಿ ಅಕ್ಕತಂಗಿಯರು, ತಾಯಂದಿರು ದೇವದಾಸಿಯರಾಗಿ ದಂದೆ ಮಾಡ್ತಾರ. ಅದರೊಳಗೆ ಏನು ತಪ್ಪಿದೆ? ಅದು ನಮ್ಮ ಹೆಣ್ಣುಮಕ್ಕಳ ಜನ್ಮಸಿದ್ದ ಹಕ್ಕು. ಅದರ ಮೂಲಕವೇ ನಮ್ಮ ಒಂದೊಂದು ಕುಟುಂಬ ಬದುಕಿವೆ. ನಮ್ಮ ಹೆಣ್ಣಮಕ್ಕಳು ಈ ದಂದಾ ಬಿಟ್ಟರೆ ನಾವೇನು ಉಪವಾಸ ಸಾಯಬೇಕಾ? ಇವರು ನಮಗೆ ಊಟಕ್ಕೆ ಹಾಕ್ತಾರಾ? ಹೀಗೆ ಎಗ್ಗಿಲ್ಲದೆ ಮಾತನಾಡಿದರು. ಅವರ ಮಾತಿನಿಂದ ಮೊಯಿಲಿಯವರ ಮುಖ ಒಮ್ಮೊಂದೊಮ್ಮೆಲೆ ಕಪ್ಪಿಟ್ಟಿತು. ''ನೀವು ದಲಿತರು. ಬಹುದೊಡ್ಡ ವಕೀಲರು. ಈ ರೀತಿ ನೀವು ಮಾತನಾಡಬಾರದು. ನಿಮ್ಮ ಹೆಣ್ಣುಮಕ್ಕಳ ನೋವನ್ನು ನೀವು ಅರ್ಥಮಾಡಿಕೊಳ್ಳದಿದ್ದರೆ ಹೇಗೆ? ಅವರ ಬಿಡುಗಡೆಗಾಗಿ ನಿಮ್ಮಂಥವರು ನಿರಂತರ ಹೋರಾಡಬೇಕು. ಅದನ್ನು ಮಾಡುವುದನ್ನು ಬಿಟ್ಟು ಇಂತಹ ಘನವಾದ ಕೆಲಸವನ್ನು ನಿರ್ವಹಿಸುತ್ತಿರುವ ಮೇಲ್ವರ್ಗದ ವ್ಯಕ್ತಿಯನ್ನೇಕೆ ದೂರುತ್ತೀರಿ? ಎಂದು ಬೈಯ್ದು ನನ್ನ ಕೆಲಸವನ್ನು ಮಾಡಿಕೊಟ್ಟರು. ನನ್ನ ಶಾಲೆಗೆ ಮಂಜೂರಾತಿ ಸಿಕ್ಕಿದ್ದು ಪೇಜಾವರಮಠದ ಸ್ವಾಮಿಜಿಯವರಿಂದ. ಪಾಟೀಲರು ದೇವದಾಸಿಯರ ಮಕ್ಕಳಗೆಂದು ಶಾಲೆ ತೆರೆಯುವ ವಿಚಾರವನ್ನು ಇಟ್ಟುಕೊಂಡಿದ್ದಾರೆ. ಆ ಸಂಸ್ಥೆಯನ್ನು ನಾನು ನೋಡಿ ಬಂದಿದ್ದೇನೆ. ದೇವದಾಸಿಯರ ಮಕ್ಕಳಿಗೆ ಇಂತಹ ಶಾಲೆಯ ಅವಶ್ಯಕತೆಯಿದೆ. ಅದನ್ನು ಮಂಜೂರಾತಿ ಮಾಡಿ'ಎಂದು ಅವರೇ ಮೊಯಿಲಿ ಸಾಹೇಬರಿಗೆ ತಿಳಿಸಿದ್ದರು. ಅಂದರೆ ಮೇಲ್ವರ್ಗದ ಜನರಿಗೆ ಈ ಜನ ಮೇಲೆ ಬರಲಿ ಎನ್ನುವ ಕಾಳಜಿಯಿದೆ. ಆದರೆ ಈ ಕಳಕಳಿ ಅದೇ ವರ್ಗದಿಂದ ಬಂದ ಜನತೆಗಿಲ್ಲ. ನಮ್ಮ ಹೆಣ್ಣುಮಕ್ಕಳು ಸುಧಾರಿಸಿದರೆ ನಮ್ಮ ಜೀವನವೇ ಹಾಳಾಗುತ್ತದೆಯೇನೋ ನಮ್ಮ ಬಾಳುವೆ

ಗತಿಗೆಡುತ್ತವೆಯೇನೋ ಎನ್ನುವ ಹೆದರಿಕೆ ಅವರಿಗಿದೆ. **ಯಾಕೆ ಹೀಗೆ ಅವರು** ಆಡುತ್ತಾರೆಂದರೆ ಅದು ಅವರ Existanceನ ಪ್ರಶ್ನೆ. ಅವರ ಬದುಕೇ ಅವರ ಹೆಣ್ಣುಮಕ್ಕಳ ದುಡಿಮೆಯ ಆಧಾರದ ಮೇಲೆ ನಿಂತಿದೆ. ಅವರ ಹೆಣ್ಣುಮಕ್ಕಳು ಪ್ರತಿದಿನ ಐವತ್ತು ರೂಪಾಯಿಗಳನ್ನು ಕೊಡದೆ ಇದ್ದರೆ, ಅವರ ಮನೆಯವರೆಲ್ಲರೂ ಅಂದು ಉಪವಾಸವಿರಬೇಕಾಗುತ್ತದೆ. ದಲಿತವರ್ಗಕ್ಕಾಗಿ ಸರಕಾರ ಐವತ್ತು ವರ್ಷಗಳಲ್ಲಿ ಅನೇಕ ಯೋಜನೆಗಳನ್ನು ಹಮ್ಮಿಕೊಂಡಿದೆಯಾದರೂ ಅವುಗಳಾವುವೂ ಯಶಸ್ವಿಯಾಗಿಲ್ಲ. ಅವರಿಗೆ ನಾವು Fish ಕೊಟ್ಟಿದ್ದೇವೆಯೇ ಹೊರತು How to fish ಎನ್ನುವುದನ್ನು ಕಲಿಸಿಕೊಟ್ಟಿಲ್ಲ. ದುಡಿಮೆ ಗೌರವವನ್ನು ಅವರಿಗೆ ನಾವೆಂದೂ ಹೇಳಿಕೊಡಲಿಲ್ಲ. ಅಂದಿನ ದಿನಕ್ಕೆ ಎಷ್ಟೋ ಬೇಕೋ ಅಷ್ಟನ್ನು ಮಾತ್ರ ಕೊಟ್ಟು, ಅವರನ್ನು ಬಳಸಿಕೊಂಡಿದ್ದೇವೆ. ಈ ಹಿನ್ನೆಲೆಯಲ್ಲಿ ಅವರು ಪರಾವಲಂಬಿಗಳಾಗಿಯೇ ಬದುಕಿರುವರು. ಪರಾವಲಂಬಿತನದಲ್ಲಿದ್ದ ಅವರೆಂದೂ ತಮ್ಮ ಮಗಳನ್ನು ಅಥವಾ ತಾಯಿಯನ್ನು ಅಥವಾ ಅಕ್ಕತಂಗಿಯರನ್ನು ಸಮಾಜ ದುರ್ಬಳಕೆ ಮಾಡಿಕೊಳ್ಳುತ್ತಿದೆ ಎಂಬುದರ ಕುರಿತು ಅವರೆಂದು ಚಿಂತಿಸಲಿಲ್ಲ. ಸಂಜೆ ಊಟ, ಮುಂಜಾನೆ ಊಟದ ಕುರಿತು ಆಲೋಚಸಿದರೇ ಹೊರತು, ತಮ್ಮ ಮನೆಯ ಹೆಣ್ಣುಮಕ್ಕಳ ಮರ್ಯಾದೆಯ ಕುರಿತು ಯೋಚಿಸಲಿಲ್ಲ. ದುರ್ದೈವದಿಂದ ಅವರು ಈ ಮಾನಸಿಕ ಸ್ಥಿತಿಯಲ್ಲಿರುವರು. ಇದಕ್ಕೆ ಸಮಾಜ ಹಾಗೂ ಸರಕಾರಗಳೆರಡೂ ಕಾರಣವಾಗಿವೆ. ಗೌರವದ ವೃತ್ತಿಯನ್ನು, ಕಾಯಕದ ಗೌರವವನ್ನು ನಾವು ಅವರಿಗೆ ಕಲಿಸಿಕೊಡಲೇ ಇಲ್ಲ. ನಿರಂತರವಾಗಿ ಅವರನ್ನು Vote Catching ಸ್ಥಿತಿಯಲ್ಲಿ ಇಟ್ಟುಕೊಂಡಿದ್ದೇವೆ.

**ದೇವದಾಸಿಯರಿಗೆ ಹೊಲಿಗೆ, ಕಸೂತಿ, ಹೈನುಗಾರಿಕೆ ಮೊದಲಾದ ಸ್ವಯಂ ಉದ್ಯೋಗವನ್ನು ಹೇಳಿಕೊಡುತ್ತಿದೆ ನಿಜ. ಆದರೆ ಅವುಗಳು ಎಷ್ಟರಮಟ್ಟಿಗೆ ಅವರಿಗೆ ಆರ್ಥಿಕ ಬೆಂಬಲವನ್ನು ಸೂಚಿಸುತ್ತದೆ?**

ಈ ದೇಶದಲ್ಲಿ ಉದ್ಯೋಗವನ್ನು ಹೇಳಿಕೊಡುವಂತಹ ಬಹಳಷ್ಟು ಯೋಜನೆಗಳು ವಿಫಲವಾಗಿವೆ. ಇದಕ್ಕೆ ಕಾರಣವೇನೆಂದರೆ ಮೊದಲನೆಯದಾಗಿ ಅವರಿಗೆ ಪ್ಲೇಸ್‌ಮೆಂಟ್ ಇಲ್ಲ. ಎರಡನೆಯದಾಗಿ ಅವರು ತಯಾರಿಸಿದಂತಹ ವಸ್ತುಗಳಿಗೆ ಸುವ್ಯವಸ್ಥಿತವಾದ ಮಾರ್ಕೆಟಿಂಗ್ ಇಲ್ಲ. ಹೀಗಾಗಿ ಸಿದ್ಧಪಡಿಸಿದ ವಸ್ತುಗಳು ಯೋಗ್ಯ ಬೆಲೆಗೆ ಮಾರಾಟವಾಗದಿದ್ದರೆ, ಅವಳ ಕೆಲಸ ಅಲ್ಲಿಗೆ ನಿಂತು ಹೋಗುತ್ತದೆ. ಹ್ಯಾಂಡಲೂಮ ಕಾರ್ಪೋರೇಷನ್ ವತಿಯಂದ ೩೦ಜನ ದೇವದಾಸಿಯರಿಗೆ ನೆಯ್ಗೆ ಕೆಲಸವನ್ನು ಹೇಳಿಕೊಟ್ಟೆವು. ತಿಂಗಳವರೆಗೆ ಟ್ರೈನಿಂಗ್ ನೀಡಿದೆವು. ಬನಹಟ್ಟಿ, ರಬಕವಿಯಿಂದ ನೂಲನ್ನು ತರಸಿಕೊಟ್ಟೆವು. ನೆಯ್ಗೆ ಬಟ್ಟೆಗೆ ಬೇಡಿಕೆ ಬಂದಾಗ' ನೂಲನ್ನು ತರಿಸಬೇಕು. ಅದನ್ನು ನೆಯ್ದು ಮಾರುಕಟ್ಟೆಗೆ ತರಲು ಮತ್ತೆ ಒಂದೆರಡು ತಿಂಗಳುಗಳು ಬೇಕು. ಮಾರಾಟಕ್ಕೆಂದು ಬಟ್ಟೆಯನ್ನು ತೆಗೆದುಕೊಂಡು ಹೋದಂತಹ ವ್ಯಕ್ತಿ ಅವರಿಗೆ ದುಡ್ಡನ್ನು ತಲುಪಿಸಲು ಮತ್ತೆ ಒಂದೆರಡು

ತಿಂಗಳುಗಳನ್ನು ತೆಗೆದುಕೊಳ್ಳಬಹುದು. ಹೀಗಾಗಿ ನಾವು ಹಾಕಿದ ಯೋಜನೆ ಎರಡು ವರ್ಷಗಳ ನಂತರ ಸಂಪೂರ್ಣ ಹಾಳಾಗಿ ಹೋಯಿತು. ಅದನ್ನು ನಂಬಿದವರಿಗೆ ಉಪವಾಸವೇ ಎದುರಾಯಿತು. ಇವೇ ಸ್ವಯಂ ಉದ್ಯೋಗಗಳನ್ನು ಕುಟುಂಬಸ್ಥ ಹೆಣ್ಣು ಮಕ್ಕಳಿಗೆ ಕಲಿಸಿದರೆ ನಿಮಗೆ ಬೇರೆ ರೀತಿಯ ಫಲಿತಾಂಶ ಎದುರಾಗುತ್ತದೆ. ಅವರಲ್ಲಿ ಸ್ಪರ್ಧಾತ್ಮಕ ಗುಣವಿರುತ್ತದೆ. ಅವರು ದಿನವೊಂದಕ್ಕೆ ೮೦ ರಿಂದ ೧೦೦ರೂಪಾಯಿಗಳವರೆಗೆ ಗಳಿಸುತ್ತಾರೆ. ದೇವದಾಸಿಯರು ಹೆಚ್ಚೆಂದರೆ ೩೦ ರಿಂದ ೪೦ ರೂಪಾಯಿಗಳನ್ನು ಗಳಿಸುತ್ತಾರೆ. ಕಾರಣವೆಂದರೆ ನಿರಂತರವಾಗಿ ದೇವದಾಸಿ ವ್ಯವಸ್ಥೆಯೊಳಗೆ ನಲುಗಿದ ಅವರು, ದೈಹಿಕವಾಗಿ ಅನೇಕ ತೊಂದರೆಗಳನ್ನು ಎದುರಿಸುತ್ತಿರುತ್ತಾರೆ. ಅದಕ್ಕಾಗಿ ಅವರಿಂದ ಈ ತರಹದ ದೈಹಿಕ ಶ್ರಮದ ಕೆಲಸಗಳನ್ನು ನಿರ್ವಹಿಸಲಾಗುವುದಿಲ್ಲ. ಅದರಿಂದಾಗಿ ಅವರ ಉತ್ಪಾದನೆ ಕುಂಠಿತವಾಗುತ್ತದೆ. ಉತ್ಪಾದನೆ ಕಡಿಮೆಯಾದಾಗ ಅವರ ಮಾರುಕಟ್ಟೆಯ ಪ್ರಶ್ನೆಯೇ ಏಳುವುದಿಲ್ಲ. ಹೀಗಾಗಿ ಹಿಡಿದ ಇಂತಹ ಉದ್ಯೋಗಗಳನ್ನು ಮಧ್ಯದಲ್ಲಿಯೇ ಕೈಬಿಡುತ್ತಾಳೆ. ಆತ್ಮಗೌರವದಿಂದ ಬದುಕಬೇಕೆನಿಸಿದರೂ ದೇಹಸ್ಥಿತಿ ಅವಳೊಂದಿಗೆ ಸಹಕರಿಸುವುದಿಲ್ಲ. ಈ ಮೊದಲೇ ಹೇಳಿದಂತೆ ಅವಳಿಗೆ ಉದ್ಯೋಗವನ್ನು ಹೇಳಿಕೊಟ್ಟರೆ ಸಾಲದು. ಅದಕ್ಕೆ ಪ್ಲೇಸಮೆಂಟ್, ಮಾರ್ಕೆಟಿಂಗ್ ಎರಡನ್ನೂ ಒದಗಿಸಿ ಕೊಡಬೇಕು. ಅವಳು ಮರ್ಯಾದೆಯಿಂದ ಬದುಕಬೇಕೆಂದರೂ, ಸಾಮಾಜಿಕ ಪರಿಸರಗಳು ಅದಕ್ಕೆ ಸಹಕರಿಸುವುದಿಲ್ಲ. ಮೀನನ್ನು ಕೊಟ್ಟು ಆ ದಿನ ಸಂಜೆ ಅಡಿಗೆ ಮಾಡಕ್ಕೆ ಹೇಳಿಕೊಟ್ಟಿದ್ದೇವೆ ವಿನಃ ಮೀನು ಹಿಡಿಯುವುದನ್ನು ಕಲಿಸಿಕೊಡಲಿಲ್ಲ. ಸ್ವಾತಂತ್ರ್ಯ ಬಂದ ನಂತರ ರೂಪಗೊಂಡ ಸರಕಾರ ಐವತ್ತು ವರ್ಷಗಳ ತನ್ನ ಸುದೀರ್ಘ ಆಡಳಿತದ ಅವಧಿಯಲ್ಲಿ ಒಂದು ಮೀನನ್ನು ಕೊಟ್ಟು, ಒಂದು ಓಟನ್ನು ಪಡೆದುಕೊಳ್ಳಲು ಪ್ರಯತ್ನಿಸುತ್ತಿದೆ ವಿನಃ, ಮರ್ಯಾದೆಯಿಂದ ಸ್ವತಂತ್ರವಾಗಿ ಬದುಕುವ ಪರಿಪಾಠವನ್ನು ಹೇಳಿಕೊಡಲಿಲ್ಲ. ಈ ಕುರಿತಂತೆ ಸರಕಾರದೊಂದಿಗೆ ಸಾಕಷ್ಟು ಮಾತುಕತೆ ನಡೆಸಿದ್ದೇನೆ.

**ದೇವದಾಸಿಯರಿಗಾಗಿ ಸರಕಾರ ಹಮ್ಮಿಕೊಂಡ ಯೋಜನೆಗಳು ಫಲಪ್ರದವಾಗಬೇಕಾದರೆ ಅವರು ಆತ್ಮಗೌರವದಿಂದ ಬದುಕಬೇಕಾದರೆ, ಯಾವ ರೀತಿಯ ಕಾರ್ಯಕ್ರಮಗಳನ್ನು ಸರಕಾರ ರೂಪಿಸಿಕೊಳ್ಳಬೇಕಿದೆ?**

ನಿಮ್ಮ ಈ ಪ್ರಶ್ನೆಗೆ ಉತ್ತರಿಸುವುದು ಅಷ್ಟು ಸುಲಭವಲ್ಲ. ತುಂಬ ಕಠಿಣವಾದುದನ್ನು ಕೇಳುತ್ತಿರುವಿರಿ. ಒಟ್ಟು ವ್ಯವಸ್ಥೆಯನ್ನು ಬದಲಿಸುವಂತಹ ಬಹುದೊಡ್ಡ ಕ್ರಾಂತಿ ಇಲ್ಲಿ ಜರುಗಬೇಕಿದೆ. ಇದು ಒಬ್ಬ ವ್ಯಕ್ತಿಯಿಂದಾಗಲಿ, ಸರಕಾರದಿಂದಾಗಲಿ ಸಾಧ್ಯವೆಂಬುದರಲ್ಲಿ ನನಗೆ ವಿಶ್ವಾಸವಿಲ್ಲ. ಯಾಕೆಂದರೆ ಅದರ ಸ್ವರೂಪ ಅಷ್ಟು ಸೀಮಿತವಾಗಿಲ್ಲ. ಸಮಾಜದೊಳಗಿನ ಜನರ ಮನೋಭಾವವೇ ಬದಲಾಗಬೇಕು. ಅದಕ್ಕಾಗಿ ನಾವು ನೀವೆಲ್ಲ ಅನೇಕ ವರ್ಷಗಳವರೆಗೆ ಪ್ರಯತ್ನಿಸಬೇಕು. ಈ ಕೆಲಸಕ್ಕಾಗಿ ಹಲವಾರು Dedicated Work

ಆಗತ್ಯವಿದೆ. ಅಂದಾಗ ಮಾತ್ರ ಅವರಿಗೆ ಆತ್ಮಗೌರವದಿಂದ ಬದುಕುವ ವಾತಾವರಣವನ್ನು ಕಲ್ಪಿಸಲು ಸಾಧ್ಯವಾಗುತ್ತದೆ.

ದೇವದಾಸಿಯರನ್ನು ಕೇಂದ್ರವಾಗಿಟ್ಟುಕೊಂಡು ನಾನು ಮಾಡಿದ ಕೆಲಸಗಳಲ್ಲಿ ನನಗೆ ನಿರಾಶೆ ಎದುರಾದದ್ದೇ ಹೆಚ್ಚು. ನೂರು ದೇವದಾಸಿಯರನ್ನು ಬದಲಾಯಿಸಲು ಪ್ರಯತ್ನಿಸಿದರೆ ಅವರಲ್ಲಿ ಹೆಚ್ಚೆಂದರೆ ಇಬ್ಬರು, ಮೂವರು ಸುಧಾರಿಸಬಹುದು. ಅವರು ಅಂತಹದೇ ವಾತಾವರಣದಲ್ಲಿ ಬೆಳೆದು ಬಂದದ್ದರಿಂದ ಆ ಛಾಯೆಯಿಂದ ಬಿಡಿಸಿಕೊಳ್ಳಲು, ಬದಲಾಗಲು ಪ್ರಯತ್ನಿಸುವುದಿಲ್ಲ. ಅದಕ್ಕಾಗಿಯೇ ನಾನು ಅವರ ಮಕ್ಕಳ ಮೇಲೆ ಹೆಚ್ಚು ಲಕ್ಷ್ಯವನ್ನು ಕೇಂದ್ರೀಕರಿಸಿದ್ದೇನೆ. ಎಳೆವಯಸ್ಸಿನಲ್ಲಿ ಬದಲಾಯಿಸುವುದು ಬಹಳ ಸುಲಭ. ಒಳ್ಳೆಯ ಶಿಕ್ಷಣದ ಜೊತೆಗೆ ನೈತಿಕ ಶಿಕ್ಷಣವನ್ನು ನೀಡಿದರೆ ಅವರುಗಳು ಖಂಡಿತವಾಗಿ ಬದಲಾಗುತ್ತಾರೆ. ಅದಕ್ಕಾಗಿ ನಾನು ರೆಸಿಡೆನ್ಸಿಯಲ್ ಸ್ಕೂಲ್ ತೆರೆದಿರುವೆ. ಅದರ ಮೂಲ ಉದ್ದೇಶ ಮಕ್ಕಳ ಮನೋಭಾವವನ್ನು ಬದಲಾಯಿಸುವುದಾಗಿದೆ. ಬದಲಾವಣೆ ಬಯಸುವ ಮೊದಲು ನಾನು ಅವರ ಮಕ್ಕಳ ಭವಿಷ್ಯದ ಕಡೆಗೆ ನಮ್ಮ ಗಮನವನ್ನು ಹರಿಸಬೇಕಾಗಿದೆ. ನಿಮ್ಮಿಂದಾಗಿಯೇ ನಾನು ತಲೆತಗ್ಗಿಸಿ ಬದುಕಬೇಕಾಗಿದೆ. ಇದರಿಂದ ಬಿಡುಗಡೆಗೊಂಡು ಹೊಸ ಬಾಳುವೆ ಸಾಗಿಸೋಣ'ಎಂದು ಶಿಕ್ಷಣ ಪಡೆದ ಮಗು ಕೇರಿಯಲ್ಲಿ ದೇವದಾಸಿಯರಾಗಿ ಬದುಕುತ್ತಿರುವ ತನ್ನ ಅಕ್ಕತಂಗಿಯರಿಗೆ ತಾಯಂದಿರಿಗೆ ಬುದ್ಧಿವಾದವನ್ನು ಯಾವಾಗ ಹೇಳುತ್ತದೆಯೋ ಅಂದು ಮಾತ್ರ ಇಂತಹ ವ್ಯವಸ್ಥೆ ಬದಲಾಗಲು ಸಾಧ್ಯ. ಹೊರಗಿನಿಂದ ಬಂದಂತಹ ನಮ್ಮಂತಹ ಜನರಿಂದ ಇದು ಸಾಧ್ಯವಿಲ್ಲ. ಈ ಹೋರಾಟವನ್ನು ಜೀವಂತವಾಗಿ ಇಟ್ಟುಕೊಂಡು ಹೋಗಲು ಸ್ವಲ್ಪ Contribution ಮಾಡಬಹುದೇ ಹೊರತಾಗಿ, ಅವರನ್ನು ಬದಲಾಯಿಸಲು ಆಗುವುದಿಲ್ಲ. ಅಂತಹ Drastic ಆದಂತಹ ಬದಲಾವಣೆ ಆ ಜನರಲ್ಲಿಯೇ ಹುಟ್ಟಿಕೊಳ್ಳಬೇಕು.

**ನಾನು ಅನೇಕ ದೇವದಾಸಿಯರನ್ನು ಸಂದರ್ಶಿಸಿದ್ದೇನೆ. ದೇವದಾಸಿಯರಲ್ಲಿ ಅವರದೇ ಆದಂತಹ ಪಾವಿತ್ರ್ಯ, ಪ್ರೀತಿ, ಆತ್ಮಗೌರವವಿರುವುದನ್ನು ಗುರುತಿಸಿದ್ದೇನೆ. ಅವರ ಕುರಿತು ಅಷ್ಟು ಹಗುರವಾದ ನಿಲುವನ್ನು ತಾಳುವುದು ಸಾಧುವಲ್ಲವೆನಿಸುತ್ತದೆ. ಸರಕಾರ ಹಾಗೂ ಖಾಸಗಿ ಸಂಸ್ಥೆಗಳು ನಿಜವಾದ ಅರ್ಥದಲ್ಲಿ ಅವರಿಗಾಗಿ ಪರಿಶ್ರಮಿಸುತ್ತಿಲ್ಲ. ಸುಮ್ಮನೆ ಅವರು ಬದಲಾಗುವುದಿಲ್ಲ ಎಂದು ದೂರಿದರೆ ಸಾಲದು. ಜಾಗತೀಕರಣ, ಆಧುನೀಕರಣ ಹಾಗೂ ಕಂಪ್ಯೂಟರೀಕರಣದಂತಹ ಇಂದಿನ ಯುಗದಲ್ಲಿ ಹೊಲಿಗೆ, ಕೋಳಿಸಾಕಣಿಕೆಯಂತಹ ಆರ್ಥಿಕ ಭದ್ರತೆಯನ್ನು ಮೂಡಿಸದ ಉದ್ಯೋಗಗಳನ್ನು ಹೇಳಿಕೊಡುವ ಸರಕಾರದ ಕ್ರಮ ಎಷ್ಟರಮಟ್ಟಿಗೆ ಸೂಕ್ತವೆನಿಸುತ್ತದೆ?**

ತಾವು ಹೇಳಿದ್ದಕ್ಕೆ In Principal I accept it. ಅವರು ಎಂತಹ ಅಶಿಕ್ಷಿತರಾದರೂ ಕೆಟ್ಟ ಕೌಟುಂಬಿಕ ಹಿನ್ನೆಲೆಯಲ್ಲಿ ಬಂದಿದ್ದರೂ. ಸಾಮಾಜಿಕ ಪರಿಸರದಲ್ಲಿ ಆತ್ಮಗೌರವದಿಂದ

ಬದುಕಬೇಕೆಂಬ ಹಂಬಲವಿರುತ್ತದೆ. ಅವರಲ್ಲಿಯ ಈ ಹಂಬಲವನ್ನು Supress ಮಾಡಿದ್ದು, Defeatist mentalityಯನ್ನು ಹುಟ್ಟುಹಾಕಿದ್ದೇವೆ. ಮರ್ಯಾದೆಯಿಂದ ಬದುಕಬೇಕೆಂಬ ಹಂಬಲ ಅವರಲ್ಲಿದ್ದರೂ, ಈ ಸಮಾಜ ಅದಕ್ಕೆ ಅವಕಾಶ ನೀಡುತ್ತಿಲ್ಲ. ಅದಕ್ಕಾಗಿ ಒಳ್ಳೆಯ ಅವಕಾಶಗಳನ್ನು ಸೃಷ್ಟಿಸುವ ಮೂಲಕ ಪ್ರಧಾನ ಧಾರೆಯಲ್ಲಿ ಅವರಿಗೆ ಒಳ್ಳೆಯ ಸ್ಥಾನವನ್ನು ಕಲ್ಪಿಸುವ ಪ್ರಯತ್ನ ನಡೆಯಬೇಕಿದೆ. ಸರಕಾರದವರಾಗಲಿ, NGOದವರಾಗಲಿ, ನಾವೆಲ್ಲ ಸೇರಿ ಒಂದು ತಪ್ಪನ್ನು ಮಾಡುತ್ತಿದ್ದೇವೆ. ಹೊಲಿಗೆ, ಕೈಮಗ್ಗದ ಕೆಲಸ ಮೊದಲಾದವುಗಳನ್ನು ಕಲ್ಪಿಸಿಕೊಡುತ್ತಿದ್ದೇವೆ. ಆದರೆ, ನೀವು ಹೇಳಿದಂತೆ ನಾವೆಲ್ಲ ಇದನ್ನು ಅವಲಂಬಿಸಿ ಅವಳಿಗೆ ಬದುಕು ಸಾಗಿಸಲು ಸಾಧ್ಯವೇ ಎನ್ನುವುದರ ಕುರಿತು ಯೋಚಿಸುತ್ತಿಲ್ಲ. NGOಕ್ಕೆ ಸಿಮೀತ ವ್ಯವಸ್ಥೆಯಿರುತ್ತದೆ. NGOಗಳು ಇಂತಹ ವ್ಯಕ್ತಿಗಳಿಗೆ ಸಹಾಯ ಮಾಡಬೇಕಿದ್ದರೆ ಸರಕಾರದಿಂದ ಬರುವ ಫಂಡ್ ಗಳನ್ನು ಇಲ್ಲವೆ ದಾನಿಗಳನ್ನು ನಿರೀಕ್ಷಿಸುತ್ತಿರುತ್ತದೆ. ಫಂಡ್ ಕೊಡುವಂತವರು ಕೆಲವೊಂದು ನಿರ್ದಿಷ್ಟ ಯೋಜನೆಗಳನ್ನು ಹಾಕಿಕೊಂಡೇ ಬಂದಿರುತ್ತಾರೆ. ಹೀಗೆ ಹಾಕಿಕೊಂಡ ನಿಖರವಾದ ಯೋಜನೆಗಳನ್ನು Exeicute ಮಾಡಲು ಹೋದಾಗ ನೀವು ಹೇಳಿದ ಈ ಎಲ್ಲ ಸಮಸ್ಯೆಗಳು ಉದ್ಭವವಾಗುತ್ತವೆ. ದೇವದಾಸಿಯರಿಗೆ ಆರ್ಥಿಕ ಬೆಂಬಲವನ್ನು ಬಲಪಡಿಸುವ ಸ್ವಯಂ ಉದ್ಯೋಗಗಳನ್ನು ಗುರುತಿಸುವ, ರೂಪಿಸುವ ಜವಾಬ್ದಾರಿಯನ್ನು ಸರ್ಕಾರ ಹಾಗೂ ಸಂಘಸಂಸ್ಥೆಗಳು ವಹಿಸಿಕೊಳ್ಳಬೇಕಿದೆ.

**ರಾಜಕೀಯ ಹಾಗೂ ಉದ್ಯೋಗ ಕ್ಷೇತ್ರಗಳಲ್ಲಿ ಮಹಿಳಾ ಮೀಸಲಾತಿಯ ಕುರಿತು ಚರ್ಚೆ ನಡೆಯತಕ್ಕಂತಹ ಈ Critical ಹಂತದಲ್ಲಿಯೇ ನನಗೆ ಇನ್ನೊಂದು ಆತಂಕ ಕಾಡುತ್ತಿದೆ. ಶಿಕ್ಷಣಕ್ಕೆ ಹೆಚ್ಚು ಮುಖಾಮುಖಿಯಾದವರೆಂದರೆ ಮೇಲ್ಜಾತಿಯ ಸ್ತ್ರೀಯರು ಇದರ ಸದುಪಯೋಗವನ್ನು ಪಡೆದುಕೊಳ್ಳುವವರು ಅವರು ಇದರಿಂದಾಗಿ ಸಮಗ್ರ ಮಹಿಳಾ ಸಮುದಾಯಕ್ಕೆ ಸಮಾನ ರೀತಿಯಲ್ಲಿ ನ್ಯಾಯ ಸಿಗಲಾರದು ಎನಿಸುವುದಿಲ್ಲವೆ?**

ನೀವು ಹೇಳಿದ ಮಾತು ಅಕ್ಷರಶಃ ನಿಜ. ಹಿಂದುಳಿದ ಜನಾಂಗದ ಮುಂದುವರೆದವರು ತಮ್ಮ ಜನಾಂಗದ ನೋವಿನ ಚರಿತ್ರೆಯ ಕುರಿತು ಮೌನ ವ್ರತಾಚರಣೆ ಮಾಡುತ್ತಾರೆ. ಅನೇಕರು ತಮ್ಮ ಜನಾಂಗದವರನ್ನು ತಾವೇ ಶೋಷಿಸುತ್ತಾರೆ. ತಮ್ಮಂತೆ ಶೋಷಿತರಾದವರಿಗೆ ಸಹಾಯ ಮಾಡಬೇಕೆಂಬ ಪರಿಕಲ್ಪನೆ ಅವರಲ್ಲಿಲ್ಲ. ಹೆಣ್ಣುಮಕ್ಕಳಿಗೆ ಮೀಸಲಾತಿ ಇಟ್ಟರೆ ಮೇಲೆ ಹೇಳಿದ ಪುರುಷರು ಮಾಡುವ ರಾಜಕಾರಣವನ್ನು, ಮೇಲ್ಜಾತಿಯ ಮಹಿಳೆಯರೂ ಮಾಡುವ ಸಾಧ್ಯತೆಯಿದೆ. ಆದರೆ ಇಂತಹ ಸಾಧ್ಯತೆಗಳಿಂದ್ದಾಗ್ಯೂ ಅಂತಹ ಬಹುದೊಡ್ಡ ಹಾಗೂ ಮಹತ್ವದ ಯೋಜನೆಯನ್ನು ಕೈಬಿಡಲಾಗುವುದಿಲ್ಲ. ಇಂದು ಪ್ರತಿಕ್ಷೇತ್ರದಲ್ಲಿಯೂ ಮಹಿಳಾ ಮೀಸಲಾತಿಯ ಪ್ರಯೋಗದ ಅಗತ್ಯತೆಯಿದೆ. ಅಂದಾಗ ಮಾತ್ರ ಸಮಾಜದಲ್ಲಿ

ಬದಲಾವಣೆ ತರಲು ಸಾಧ್ಯವಾಗುತ್ತವೆ. ಅದರಲ್ಲಿಯೂ Drawbacks ನೋಡುತ್ತ ಕುಳಿತುಕೊಳ್ಳಬಾರದು. ಸಮಗ್ರ ಮಹಿಳಾ ಕಲ್ಯಾಣದ ದೃಷ್ಟಿಯಿಂದ ಶೋಷಿತ ಸಮುದಾಯ ಗಳಿಂದ ಬಂದಂತಹ ಮಹಿಳೆಯರಿಗೆ ಹೆಚ್ಚಿನ ಆದ್ಯತೆ ನೀಡುವುದು ಅನಿವಾರ್ಯ ಹಾಗೂ ಅಗತ್ಯವಾದುದಾಗಿದೆ.

**ದೇವದಾಸಿಯರಿಗೆ ಹಾಗೂ ಅವರ ಮಕ್ಕಳಿಗೆ ಉದ್ಯೋಗ ಹಾಗೂ ರಾಜಕೀಯ ಕ್ಷೇತ್ರಗಳಲ್ಲಿ ವಿಶೇಷ ಮೀಸಲಾತಿ ಅಗತ್ಯವೆನಿಸುವುದಿಲ್ಲವೆ? ಈ ನಿಟ್ಟಿನಲ್ಲಿ ಸರಕಾರದ ಜೊತೆಗೆ ಏನಾದರೂ ಪ್ರಯತ್ನ ನಡೆಸಿರುವಿರಾ?**

ಈ ವಿಷಯದ ಕುರಿತಂತೆ ಸಾಕಷ್ಟು ಸಲ ಸರಕಾರದ ಜೊತೆಗೆ ನಾವೆಲ್ಲರೂ ಚರ್ಚೆಗಿಳಿದಿದ್ದೇವೆ. ನಮ್ಮ ಸರಕಾರ ಹಾಗೂ ಸಂಘಸಂಸ್ಥೆಗಳು ಸಮಸ್ಯೆ, ಶೋಷಣೆಯ ಕುರಿತಂತೆ ಸುದೀರ್ಘವಾಗಿ ಮಾತನಾಡುತ್ತವೆ. ಆದರೆ ಅವುಗಳನ್ನು ಜಾರಿಗೊಳಿಸುವ ಸಂದರ್ಭದಲ್ಲಿ ಬಹಳಮಟ್ಟಿಗೆ ನಿರ್ಲಿಪ್ತಧೋರಣೆಯನ್ನು ತಾಳುತ್ತಾರೆ. ನಿಜವಾದ ಕಾಳಜಿಯಲ್ಲಿ ಇವರ್ಯಾರೂ ಕೆಲಸ ಮಾಡುವುದಿಲ್ಲ. ಇದು ನಮ್ಮ ದುರ್ದೈವವಲ್ಲದೆ ಬೇರೇನಲ್ಲ. ಉದಾಹರಣೆಗೆ ಈ ಹಿಂದಿದ್ದ ಸರಕಾರ ದೇವದಾಸಿಯರ ಅಭಿವೃದ್ಧಿ ಕುರಿತಂತೆ ಸಾಕಷ್ಟು ಮಾತನಾಡಿತು. ಆಧರೆ ಅದನ್ನು ಕಾರ್ಯರೂಪಕ್ಕಿಳಿಸಲಿಲ್ಲ. ಇಡೀ ದೇಶದಲ್ಲಿ ಪ್ರಪ್ರಥಮವಾಗಿ ದೇವದಾಸಿಯರ ಮಕ್ಕಳಿಗೆಂದೇ ತೆರೆದ ಶಾಲೆ ನಮ್ಮದು. ಇವೊತ್ತಿಗೂ ಅದು ತನ್ನ ಸ್ಥಾನಮಾನವನ್ನು ಉಳಿಸಿಕೊಂಡಿದೆ. ಇಂತಹ ಶಾಲೆಗೆ ಅನುದಾನವನ್ನು ನೀಡುವ ವಿಚಾರವನ್ನು ಸರಕಾರವು ಇಂದಿಗೂ ಮಾಡಿಲ್ಲ. ಹಿಂದುಳಿದ ವರ್ಗದ ಪರವಾಗಿ ನಡೆದಂತಹ ಹೊಸ ಪ್ರಯೋಗಗಳಿಗೆ ಸಹಾಯ ನೀಡಬೇಕಾದುದು ಮಾನವಧರ್ಮ. ನಾವೇನು ಸರಕಾರಕ್ಕೆ ಹೆಚ್ಚೇನೂ ಕೇಳಿಲ್ಲ. ಅಲ್ಲಿರುವ ಗುರುವರ್ಗಕ್ಕೆ ಪಗಾರವನ್ನು ಕೇಳಿದ್ದೇವೆ. ಇದರಿಂದಾಗಿ ಅವರ ಜೀವನಕ್ಕೆ ಒಂದು ರಕ್ಷಣೆ ಸಿಕ್ಕಂತಾಗುತ್ತದೆ. ಇಂಥ ಸಣ್ಣ ಸಹಾಯ ಮಾಡದಷ್ಟು ಸರಕಾರ ಅಸಹಾಯಕವಾಗಿದೆ. ಅದಕ್ಕಾಗಿ ಇಂಥ ಅಸಹಾಯಕ ಸರಕಾರವನ್ನು ನಂಬಿಕೊಂಡು ನಮ್ಮಂಥವರು ಈ ತರಹದ ಹೋರಾಟವನ್ನು ಎಷ್ಟು ದಿನ ಮುಂದುವರೆಸಲಾಗುತ್ತದೆ ಎಂಬುದನ್ನು ಕೂಡ ಚಿಂತಿಸಬೇಕಾಗುತ್ತದೆ. ದೇವದಾಸಿಯರಿಗೆ, ಅವರ ಮಕ್ಕಳಿಗೆ ವಿಶೇಷ ಮೀಸಲಾತಿಯನ್ನು ನೀಡಬಯಸತಕ್ಕಂಥ ಚಿಂತನಶೀಲರು ನಮ್ಮ ಸರಕಾರದಲ್ಲಿ ಬರಲಿ ಎಂದು ಆ ದೇವರಲ್ಲಿ ಪ್ರಾರ್ಥಿಸುತ್ತೇನೆ.

**ನೀವು ದೇವದಾಸಿಯರ ಕುರಿತಂತೆ ಇತ್ತೀಚೆಗೆ ವಿಶೇಷ ಯೋಜನೆಗಳನ್ನೇನಾದರೂ ಹಾಕಿಕೊಂಡಿದ್ದೀರಾ?**

ನಮ್ಮ ಸಂಸ್ಥೆ ನಮಗೆ ಪ್ರತಿವರ್ಷ ಹೊಸಪಾಠಗಳನ್ನು ಕಲಿಸುತ್ತದೆ. ಆರಂಭದ ನಾಲ್ಕೈದು ವರ್ಷಗಳಲ್ಲಿ ದೇವದಾಸಿಯರ ಯೋಗಕ್ಷೇಮವನ್ನೇ ಕೇಂದ್ರವಾಗಿರಿಸಿಕೊಂಡು ಅನೇಕ

ಯೋಜನೆಗಳನ್ನು ರೂಪಿಸಿದೆವು. ಅವುಗಳನ್ನು ಜಾರಿಯಲ್ಲಿ ತಂದೆವು ಕೂಡ. ಆದರೆ ದುರ್ದೈವವೆಂದರೆ ಅವುಗಳಾವುವು ಯಶಸ್ವಿಯಾಗಲಿಲ್ಲ. ಅವರ ಬದಲಾವಣೆ ತರಬೇಕೆಂದರೆ ನಾವು ಅವರ ಮಕ್ಕಳೆಡೆಗೆ ಹೆಚ್ಚಿನ ಗಮನಕೊಡಬೇಕೆಂಬ ಪಾಠವನ್ನು ಕಲಿತುಕೊಂಡೆವು. ದೇವದಾಸಿಯರನ್ನು ಬದಲಾಯಿಸಲು ನಾನು ಮಾಡಿದ ಪ್ರಯತ್ನವೇ ತಪ್ಪು. ಅವರನ್ನು ಬದಲಾಯಿಸಲು ಸಾಧ್ಯವಿಲ್ಲ ಎಂಬುದನ್ನು ಕೆಲವು ವರ್ಷಗಳು ಕಳೆದ ನಂತರವೇ ಕಂಡುಕೊಂಡದ್ದು.

ಈಗಿನ ನಮ್ಮ ಅನುಭವದ ಪ್ರಕಾರ ಮಕ್ಕಳು ಎಸ್.ಎಸ್.ಎಲ್.ಸಿಯವರೆಗೆ ಬಹಳ ಚೆನ್ನಾಗಿ ಓದುತ್ತಾರೆ. ಈ ಬಾರಿಯ ನಮ್ಮ ಮಕ್ಕಳ ಪರೀಕ್ಷಾ ಫಲಿತಾಂಶ ತಮಗೂ ಗೊತ್ತಾಗಿರಬಹುದು. ೫೪ ಜನರು ಪರೀಕ್ಷೆಗೆ ಕುಳಿತುಕೊಂಡರೆ ೫೪ ಜನರು ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾಗಿರುವರು. ಅದರಲ್ಲಿಯೇ ನನ್ನ ಮಗಳು ಇಡೀ ಕೇಂದ್ರಕ್ಕೆ ಪ್ರಥಮ ಸ್ಥಾನವನ್ನು ಪಡೆದುಕೊಂಡಿದ್ದಾಳೆ. ಇದು ನಿಜವಾಗಿಯೂ ಅಭಿಮಾನಪಡುವ ಸಂಗತಿ. ಎಸ್.ಎಸ್.ಎಲ್.ಸಿ ಮುಗಿಸಿದ ತಕ್ಷಣ ನಾವು ಅವರನ್ನು ಹೊರಗಡೆ ಕಳುಹಿಸುತ್ತೇವೆ. ಅಲ್ಲಿ ಅವರು ಅನೇಕ ಪ್ರಲೋಭನೆಗಳಿಗೆ ಒಳಗಾಗಿ ಮಾನಸಿಕ ಸ್ಥಿಮಿತತೆಯನ್ನು ಸ್ವಾಸ್ಥ್ಯವನ್ನು ಕಳೆದುಕೊಳ್ಳುತ್ತಾರೆ. ಅದಕ್ಕಾಗಿ ಅವರಿಗೆ ಎಸ್.ಎಸ್.ಎಲ್.ಸಿ ಮುಗಿಸಿದ ತಕ್ಷಣ ವೃತ್ತಿ ನಿರತ ಉದ್ಯೋಗಗಳನ್ನು ಕಲ್ಪಿಸಿಕೊಡುವ ಕೆಲಸ ಮಾಡಿದ್ದೇನೆ. ನರ್ಸಿಗ್ ಸ್ಕೂಲ್ ತೆಗೆಯುವ ವಿಚಾರವಿಟ್ಟುಕೊಂಡಿದ್ದೇನೆ. ಯಾಕೆಂದರೆ ನಮ್ಮ ಹೆಣ್ಣುಮಕ್ಕಳಲ್ಲಿ ನರ್ಸ್ ಆಗಬೇಕು, ಟೀಚರ್ ಆಗಬೇಕು ಎನ್ನುವ ಕನಸುಗಳಿರುತ್ತವೆ. ಇನ್‌ಫೋಸಿಸ್ ಕಂಪನಿಯ ಧರ್ಮದರ್ಶಿಯಾದಂತಹ ಸುಧಾಮೂರ್ತಿಯವರು ನಮಗೆ ಈ ವಿಚಾರವನ್ನು ಹೇಳಿದರು. ಗಂಡುಮಕ್ಕಳಿಗೆ NTTF ಇಲ್ಲವೆ Politechinal ಕೋರ್ಸ್‌ಗಳನ್ನು ಪ್ರಾರಂಭಿಸುವ ವಿಚಾರವನ್ನಿಟ್ಟುಕೊಂಡಿದ್ದೇವೆ. ಉದ್ಯೋಗದ ಕುರಿತಾಗಿ ನಿಶ್ಚಿತವಾದ ಭವಿಷ್ಯವಿದ್ದಂತಹ Technical Courseಗಳನ್ನು ತೆಗೆಯುವ ಯೋಜನೆಯಿದೆ. ಈ ಕುರಿತಂತೆ ಚಿಂತನೆ ನಡೆಸುತ್ತಿದ್ದೇವೆ. ಪ್ರೊಜೆಕ್ಟ್‌ಗಳಾಗಿ ರೂಪಿಸುತ್ತಿದ್ದೇವೆ. ಇದರಿಂದಾಗಿ ದೇವದಾಸಿಯರು ಅವರ ಮಕ್ಕಳು ಗೌರವಯುತವಾದ ಜೀವನ ನಡೆಸಲು ಸಾಧ್ಯವಾಗುತ್ತದೆ.

**ನಿಮ್ಮ ಯೋಜನೆಗಳ ಕುರಿತಂತೆ ನನಗೆ ಗೌರವವಿದೆ. ನಿಮ್ಮ ಮಾತನ್ನು ಕೇಳುತ್ತಿದ್ದಂತೆ ಒಂದು ಆತಂಕ ನನ್ನನ್ನು ತೀವ್ರವಾಗಿ ಕಾಡುತ್ತಿದೆ. ಹುಡುಗಿಯರಿಗೆ ನರ್ಸಿಂಗ್, ಹುಡುಗರಿಗೆ NITF , Politechnical Course ಎಂದು ವಿಂಗಡಿಸಿ ಔದ್ಯೋಗಿಕ ತರಬೇತಿ ನೀಡುವುದು ಇವತ್ತಿನ ಸಂದರ್ಭದಲ್ಲಿ ಎಷ್ಟರಮಟ್ಟಿಗೆ ಉಚಿತವೆನಿಸುತ್ತದೆ?**

ಇದು ಹುಡುಗನಿಗೆ ಇದು ಹುಡುಗಿಗೆ ಎಂದು ವಿಂಗಡಿಸುತ್ತಿಲ್ಲ. ಹುಡುಗರು Male Nurse ಆಗಬಹುದು. ಅಲ್ಲಿ Gender ಪ್ರಶ್ನೆಯೇ ಏಳುವುದಿಲ್ಲ. ಲಯನ್ಸ್, ರೋಟರಿ ಮೊದಲಾದ ಕ್ಲಬಿನಲ್ಲಿರುವ ಮಹಿಳೆಯರು ಜಾಹಿರಾತು ಹಾಗೂ ಸಿನಿಮಾದಲ್ಲಿ ಸ್ತ್ರೀಯರು ಅರೆಬೆತ್ತಲೆಯಾಗಿ

ಕಾಣಿಸಿಕೊಳ್ಳುವುದನ್ನು ವಿರೋಧಿಸುತ್ತಾರೆ. ಅದರರ್ಥ ಆ ವಿಷಯ ಅಪ್ರಸ್ತುತವೆಂದು, ಅದನ್ನು ನಾನು ವಿರೋಧಿಸುತ್ತಿಲ್ಲ. ಆದರೆ ಅವರೆಂದೂ ಚಂದ್ರಗುತ್ತಿಯಲ್ಲಿ ನಡೆಯುವ ಬೆತ್ತಲೆ ಸೇವೆಯನ್ನು, ದೇವದಾಸಿ ವ್ಯವಸ್ಥೆಯನ್ನು ವಿರೋಧಿಸಲಿಲ್ಲ.

ನಾನು ಯಾವ ವ್ಯವಸ್ಥೆಯಲ್ಲಿ ಬದುಕಿಬಂದಿರುತ್ತೇವೆಯೋ ನಮ್ಮ ಚಿಂತನೆಗಳು ಆ ಹಿನ್ನೆಲೆಯಲ್ಲಿಯೇ ರೂಢಿಗತವಾಗಿರುತ್ತವೆ. ಲಯನ್ಸ್, ರೋಟರಿ ಕ್ಲಬ್ಬಿನಲ್ಲಿರುವ ಮಹಿಳೆಯರು ಬೆಳೆದು ಬಂದ ವಾತಾವರಣವೇ ಭಿನ್ನವಾಗಿರುತ್ತದೆ. ಅವರಿಗೆ ಇಂತಹ ಚಿಂತನೆಗಳನ್ನು ಮಾಡುವ ಸಾಮಾಜಿಕ ಜವಾಬ್ದಾರಿಯ ಒತ್ತಡವಿರಲಿಕ್ಕಿಲ್ಲ. ಆದರೆ ಇರಬಾರದು ಎಂತಲ್ಲ. ಅವರಲ್ಲಿ ಈ ತರಹ ಚಿಂತನ ಮನೋಭಾವನೆ ಇರುವುದು ಕಡಿಮೆ. ಶ್ರೀಮಂತ ಹಿನ್ನೆಲೆಯಿಂದ ಬಂದಂತಹ ಗಾಂಧಿ, ನೆಹರೂ ಅವರಂಥಹ ಎಲ್ಲೋ ಒಂದಿಬ್ಬರಿಗೆ ಇಂತಹ ಚಿಂತೆಗಳು ಕಾಡಿರಬಹುದು. ಶೋಷಿತ ಸಮುದಾಯಗಳ ಕುರಿತು ಚಿಂತನೆ ಮಾಡುವ ಮನಸ್ಸುಗಳು ಒಂದೆರಡು ದೊರೆತರೆ ಸಾಕು. ಯಾಕೆಂದರೆ ಆರೋಗ್ಯಕರ ಚಿಂತನೆ ಮಾಡುವುದು ಬಹಳ ಜನರಿಂದ ಸಾಧ್ಯವಾಗಿರಲಿಕ್ಕಿಲ್ಲ. ಸಮಾಜ ಸುಧಾರಣೆಯ ಕಾಳಜಿಯುಳ್ಳವರು ನಾಲ್ಕು ಜನ ದೊರೆತರೂ ಸಾಕು. ಇಡೀ ಸಾಮಾಜಿಕ ವ್ಯವಸ್ಥೆಯನ್ನು ಬದಲಿಸಲು ಸಾಧ್ಯವಾಗುತ್ತದೆ. ಲಯನ್ಸ್, ರೋಟರಿಯಲ್ಲಿರುವ ಮಹಿಳೆಯರಿಗೆ ನಿಜವಾದ ಸಾಮಾಜಿಕ ಸಮಸ್ಯೆಗಳ ಕುರಿತಂತೆ ಚಿಂತಿಸಲು ಅವರಲ್ಲಿ ವೇಳೆಯಿಲ್ಲ. ಇದು ಈ ದೇಶದ ದುರ್ದೈವ. ನಾನು ಇತ್ತೀಚೆಗೆ ರೋಟರಿ ಕ್ಲಬ್ಬಿಗೆ ಭಾಷಣ ನೀಡಲು ಹೋಗಿದ್ದೆ. ಅವರು ಕೊಟ್ಟಂತಹ ವಿಷಯವನ್ನು ಕೈಬಿಟ್ಟು ನಾನು ನನ್ನ ಸಂಸ್ಥೆಯ ಕುರಿತಂತೆ ಮಾತನಾಡಿದೆ. ನಾನು ನನ್ನ ಸಂಸ್ಥೆಯ ಕುರಿತು ಮಾತನಾಡುವುದು ನಿಮಗೆ ಅನುಚಿತವೆನಿಸಬಹುದು. ಸಾಮಾಜಿಕ ಸೇವೆಗಾಗಿ ಸ್ಥಳಗಳನ್ನು ಹುಡುಕಾಡುತ್ತಿದ್ದರಿಂದ ನಾನು ನನ್ನ ಸಂಸ್ಥೆಯ ಕುರಿತು ಮಾತನಾಡುವುದು ಅನಿವಾರ್ಯವಾಗಿದೆ. ನಿಮ್ಮಲ್ಲಿ ನಿಜಕ್ಕೂ ಸೇವಾಮನೋಭಾವನೆಯಿದ್ದರೆ ನಮ್ಮ ಹಳ್ಳಿಗಳಿಗೆ ಬನ್ನಿ. ಅವು ನಿಮ್ಮ ಸೇವೆಗಾಗಿ ಕಾದು ಕುಳಿತಿದೆ' ಎಂದಾಗ ಅವರೆಲ್ಲರೂ ಅದನ್ನು ಒಪ್ಪಿಕೊಂಡರು.

**ಇತ್ತೀಚೆಗೆ ನಡೆದ ಕಾರ್ಯಕ್ರಮಗಳನ್ನು ಪತ್ರಿಕೆಗಳಲ್ಲಿ ನೀವು ಗಮನಿಸಿರಬಹುದು. ವಿಪ್ರ ಮಹಿಳಾ ಸಮ್ಮೇಳನ, ದಲಿತ ಮಹಿಳಾ ಸಮ್ಮೇಳನಗಳು ನಡೆದವು. ಆ ಕುರಿತಂತೆ ನಿಮ್ಮ ಅಭಿಪ್ರಾಯವೇನು?**

ಜಾತಿಯ ಹೆಸರಿನಲ್ಲಿ ನಡೆಯುವ ಇಂತಹ ಸಮ್ಮೇಳನಗಳು ಸಾಮಾಜಿಕ ಸ್ವಾಸ್ಥ್ಯದ ದೃಷ್ಟಿಯಿಂದ ಒಳ್ಳೆಯದಲ್ಲ. ಒಟ್ಟು ಮಹಿಳಾ ಸಮುದಾಯದ ಸಮಸ್ಯೆಗಳ ಕುರಿತಂತೆ ಚರ್ಚೆ ನಡೆಸಬೇಕಿದೆಯೇ ವಿನಃ ಆಯಾ ಜಾತಿ, ಸಮುದಾಯಗಳ ಸಮಸ್ಯೆಗಳನ್ನಲ್ಲ. ಒಟ್ಟಾರೆ ಸಮಸ್ಯೆಗಳನ್ನು ಬಿಡಿಸಿಕೊಳ್ಳುವ ಈ ಸೂಕ್ಷ್ಮ ಹಂತದಲ್ಲಿ ಇಂತಹ ಸಮ್ಮೇಳನಗಳು ಅಷ್ಟು ಆರೋಗ್ಯಕರವಾಗಿ ಕಾಣುವುದಿಲ್ಲ. ನಮ್ಮಲ್ಲಿ ಪ್ರತಿಯೊಂದು ಜಾತಿಯವರೂ ತಮ್ಮ

ಒಂದೊಂದು ಸಮಾಜವನ್ನು ರೂಪಿಸಿಕೊಂಡಿರುವರು. ಇದು ಆಯಾ ಜಾತಿಗಳಿಗೆ ರಾಜಕೀಯ ಭದ್ರತೆಯನ್ನು ಒದಗಿಸುವಂತಹ ವ್ಯವಸ್ಥೆಯಾಗಿ ರೂಪ ಪಡೆದುಕೊಂಡಿದೆ. ಎಲ್ಲರೂ ಜಾತಿ Politics ಮಾಡುತ್ತಿದ್ದಾರೆ. ಅದಕ್ಕಾಗಿ ಜಾತಿಯ ಹಿನ್ನೆಲೆಯಲ್ಲಿ ಒಡೆದು ಆಚರಿಸುವ ಸಮ್ಮೇಳನಗಳು ನಮಗೆ ಬೇಕಿಲ್ಲ. ಎಲ್ಲ ಮಹಿಳೆಯರು ಒಂದೆಡೆ ಸೇರಿ, ಎಲ್ಲರ ನೋವನ್ನು ಒಬ್ಬರಿಗೊಬ್ಬರು ಕೇಳಿಸಿಕೊಳ್ಳಬೇಕಿದೆ. ಅಂದರೆ ನಿಮ್ಮ ಅರ್ಥದಲ್ಲಿ ಮಹಿಳಾ ಸಮಸ್ಯೆಗಳಿಗೆ ಏಕರೂಪವನ್ನು ಕೊಡಲು ಸಾಧ್ಯ.

ಮಹಿಳೆಯರ ಒಟ್ಟು ಸಮಸ್ಯೆಗಳ ಕುರಿತಂತೆ ಚರ್ಚಿಸಲು, ಆಯಾ ಸಮುದಾಯದ ಪ್ರತಿನಿಧಿಗಳು ಒಂದೆಡೆಗೆ ಸೇರಬೇಕು. ಈ ಹಿನ್ನೆಲೆಯಲ್ಲಿ ಮಹಿಳಾ ಸಮ್ಮೇಳನಗಳು ನಡೆಯಬೇಕು. ಎಲ್ಲ ವರ್ಗದ ಮಹಿಳೆಯರು ಸಮೂಹಗೊಂಡು ಚರ್ಚಿಸುವುದರಿಂದ ಅವರ ಸಮಸ್ಯೆಗಳಿಗೆ ಒಂದು ಸಾಮಾಜಿಕ ಸ್ವರೂಪ ಸಿಗುತ್ತದೆ. ಇದನ್ನು Ear marking ಮಾಡುವುದು ಬೇಡ. ಇದರಿಂದಾಗಿ ಬಹುಮುಖ್ಯವಾದ ಸಮಸ್ಯೆಗಳನ್ನು ಮರೆತುಬಿಡುವ, ನಿರ್ಲಕ್ಷಿಸುವ ಅಪಾಯವಿದೆ. ಅದಕ್ಕಾಗಿ ಅಂತಹ ಸಮಸ್ಯೆಗಳಿಗೆ ವಿಶೇಷವಾಗಿ 'ಸ್ಪಂದಿಸಬೇಕು. ದೇವದಾಸಿ ಸಮಸ್ಯೆ ಕೆಲವು ಜಾತಿಗಳಿಗೆ ಸೀಮಿತವಾಗಿದ್ದರೂ ಅದು ವ್ಯಾಪಕವಾದ ಸಮಸ್ಯೆಯಾಗಿದೆ. ಇವರ ಕುರಿತು ಚರ್ಚಿಸಲು ಕೆಲವರಿಗೆ ಮುಜುಗರವಾಗಬಹುದು. ಅಂತಹ ವೇಳೆಯಲ್ಲಿ ಶೋಷಿತ ಸಮುದಾಯಗಳ ಕುರಿತು ಕಾಳಜಿಯಿರುವ ಮಹಿಳೆಯರೆಲ್ಲರೂ ಒಂದೆಡೆ ಸೇರಿ, ಇಂತಹ ಸಮಸ್ಯೆಗಳ ಕುರಿತಂತೆ ಸುದೀರ್ಘವಾದ ಚಿಂತನೆಯನ್ನು ನಡೆಸಬೇಕುಃಯೋಜನೆಗಳನ್ನು ರೂಪಿಸಿಕೊಳ್ಳಬೇಕು.ಮಹಿಳಾ ಸಮ್ಮೇಳನಕ್ಕೆ ಜಾತಿಯ ಹೆಸರು ಅಂಟಿಕೊಳ್ಳಬಾರದು. ಚರಿತ್ರೆಯಲ್ಲಿ ಯಾವ ಸಮುದಾಯಗಳ ಮಹಿಳೆ ಹೆಚ್ಚಿನ ಶೋಷಣೆಗಳ ಗುರಿಯಾಗಿರುವಳೋ, ಅವಳ ಸಮಸ್ಯೆಗಳನ್ನು ಕೇಂದ್ರವಾಗಿಟ್ಟುಕೊಂಡು ಚಿಂತನೆ ನಡೆಯಬೇಕಿದೆ.

**ಭಾರತೀಯ ಸಂದರ್ಭದಲ್ಲಿ ಕಾಣಿಸಿಕೊಂಡಂತಹ ಬಹುಪಾಲು ಚಿಂತಕಿಯರು ದೇವದಾಸಿಯರ ಸಮಸ್ಯೆಗಳನ್ನು ಅಷ್ಟು ತೀವ್ರವಾಗಿ ಪರಿಗಣಿಸಿದಂತೆ ಕಾಣುವುದಿಲ್ಲ ಅಲ್ಲವೆ?**

ಸಾಮಾಜಿಕ ಚಿಂತನೆಯ ಕುರಿತಂತೆ ಅಭಿವ್ಯಕ್ತಿಯ ಸ್ವರೂಪ ಕಾಲದಿಂದ ಕಾಲಕ್ಕೆ ಬದಲಾಗುತ್ತ ಬಂದಿದೆ. ನಾನು ಬಹಳ ಓದಿಕೊಂಡವನಲ್ಲ. ಆದರೆ ಐವತ್ತರ ವರ್ಷಗಳ ಹಿಂದಿನ ಪರಿಸ್ಥಿತಿಯನ್ನು ನಾವು ವಿಚಾರ ಮಾಡಿದಾಗ ಅಂದು, ಇಂಥ ಸಮಸ್ಯೆಗಳನ್ನು ಕೇಂದ್ರವಾಗಿರಿಸಕೊಂಡು ಚಿಂತನೆ ನಡೆಸುವ ವಾತಾವರಣವಿರಲಿಲ್ಲ. ಅಂದಿನ ಸಾಮಾಜಿಕ ಸಮಸ್ಯೆಗಳೇ ಬೇರೆಯಾಗಿದ್ದವು. ಅಸ್ಪೃಶ್ಯತೆಯನ್ನು ದೇವದಾಸಿ ವ್ಯವಸ್ಥೆಯನ್ನು ಅಂದಿನ ಸಮಾಜ ಒಪ್ಪಿಕೊಂಡಿತ್ತು. ಅದರಿಂದ ಅಂದಿನ ಸಮಾಜಕ್ಕೆ ಅವುಗಳು ತೀವ್ರತರವಾದ ಸಮಸ್ಯೆಗಳಾಗಿ ಕಾಡಲಿಲ್ಲ. ಇಂದು ಈ ತರಹದ ಸಮಸ್ಯೆಗಳನ್ನು ತೀವ್ರವಾಗಿ ಪರಿಗಣಿಸುವುದರಿಂದ ಶೋಷಿತ ಸಮುದಾಯಗಳ ಕುರಿತಂತೆ ಹೆಚ್ಚಿನ ಅಧ್ಯಯನಗಳು

ಪ್ರಾರಂಭವಾಗಿವೆ. ಬಹುಪಾಲು ಲೇಖಕಿಯರು ಮೇಲ್ವರ್ಗದವರಾಗಿರುವುದರಿಂದ ಅವರಿಗೆ ಇದು ತೀವ್ರವಾಗಿ ಕಾಡಲಿಲ್ಲವೇನೋ? ದಲಿತ ಮೂಲದಿಂದ ಬಂದಂತಹ ಸ್ವತಃ ಅಂಬೇಡ್ಕರರೂ ಕೂಡ ದೇವದಾಸಿಯರ ಕುರಿತಂತೆ ಅಷ್ಟೊಂದು ತೀವ್ರವಾದ ಕಾಳಜಿಯಿಂದ ಚರ್ಚಿಸಲಿಲ್ಲ. ಈ ಮಾತನ್ನು ನನ್ನ ಓದಿನ ಮಿತಿಯಲ್ಲಿ ಹೇಳುತ್ತಿರುವೆ. ಜಾತಿ ಸಮಸ್ಯೆ, ದೇಶದ ಸ್ವಾತಂತ್ರ್ಯದ ಸಮಸ್ಯೆಗಳ ಎದುರು ದೇವದಾಸಿಯರ ಸಮಸ್ಯೆ ಅವರಿಗೆ ಅಷ್ಟು ದೊಡ್ಡದಾಗಿ ಕಾಡಲಿಲ್ಲ. ದುರ್ದೈವೆಂದರೆ ದೇವದಾಸಿಯರಿಗೆ ಎಷ್ಟು ಒತ್ತನ್ನು ಕೊಡಬೇಕಾಗಿತ್ತೋ ಅಷ್ಟು ಒತ್ತನ್ನು ಅವರೂ ಕೊಡಲಿಲ್ಲ.

**ಬುದ್ಧ-ಬಸವ-ಅಂಬೇಡ್ಕರರ ಚಿಂತನೆಗಳನ್ನು ಮಾನವೀಯ ನೆಲೆಯಲ್ಲಿ ಅವುಗಳನ್ನು ನಾವು ಹೇಗೆ ಮೇಳೈಯಿಸಿಕೊಳ್ಳಬಹುದು. ಅದರಿಂದಾಗಿ ಸಮಾಜವನ್ನು ಪ್ರಗತಿಪರ ನಿಟ್ಟಿನಲ್ಲಿ ಕೊಂಡೊಯ್ಯಲು ಸಾಧ್ಯವಾಗುತ್ತಿದೆಯೆ?**

ತುಳಿತಕ್ಕೊಳಗಾದ ಮಹಿಳೆಯರ ಕುರಿತಂತೆ ಬುದ್ಧ-ಬಸವ-ಅಂಬೇಡ್ಕರರು ಮಾಡಿದ ಇಂತಹ ವಿಚಾರಧಾರೆಗಳನ್ನು ನಮ್ಮ ಈ ಸಾಮಾಜಿಕ ವ್ಯವಸ್ಥೆಯೊಳಗೆ ಅಳವಡಿಸಿದರೆ, ಖಂಡಿತವಾಗಿಯೂ ಬಹುದೊಡ್ಡ ಕ್ರಾಂತಿ ಜರುಗುತ್ತದೆ. ನಾವೆಲ್ಲ ಸುಧಾರಣೆಯ ನಾಟಕವಾಡುತ್ತಿದ್ದೇವೆನಿಸುತ್ತದೆ. ಉದಾಹರಣೆಗೆ ಹಳ್ಳಿಯನ್ನು ಉದ್ಧಾರ ಮಾಡಬೇಕೆನ್ನುವ ನಾನೇ, ಇವರೆಲ್ಲರೂ ಸುಧಾರಣೆಯಾದರೆ ನನ್ನ ಕೆಲಸಗಳಿಗೆ ಕೂಲಿಯಾಳುಗಳು ದೊರೆಯುವುದಿಲ್ಲವಲ್ಲ ಎಂದು ಆತಂಕ ಪಡುತ್ತೇನೆ. ಇದನ್ನೇ ಮಹಿಳೆಯರಿಗೂ ಅನ್ವಯಿಸಿ ಇದರಿಂದಾಗಿ ಸಾಮಾಜಿಕ ಪರಿವರ್ತನೆಯನ್ನು ಪರಿಣಾಮಕಾರಿಯಾಗಿ ತರಲಾಗುವುದಿಲ್ಲ. ಈ ಎಲ್ಲ ಧೀಮಂತರ ವಿಚಾರಧಾರೆಗಳು ಸಮಾಜದಲ್ಲಿ ಕ್ರಿಯಾಶೀಲವಾಗಬೇಕಾದರೆ ಮೊದಲು ನಮ್ಮಲ್ಲಿ ಮಾನಸಿಕ ಬದಲಾವಣೆ ಆಗಬೇಕು.

**ಅಲಕ್ಷಿತ ಸಮುದಾಯಗಳ ಸಂಘಟನೆಗಲು ಬಹಳ ದುರ್ಬಲ ಇವೆ ಯಾಕೆ?**

ನಮ್ಮ ಜನಕ್ಕೆ Political Power ಕುರಿತಂತೆ ಬಹಳ ಗೌರವವಿದೆ. ಅದನ್ನೇ ಶ್ರೇಷ್ಠವೆಂದು ಪರಿಭಾವಿಸುತ್ತಾರೆ. ಬಹಳ ದೊಡ್ಡ ಹೋರಾಟದ ಉದ್ದೇಶವನ್ನಿಟ್ಟುಕೊಂಡು ಹುಟ್ಟಿದಂತಹ ನಮ್ಮ ದೇಶದಲ್ಲಿಯ ಅನೇಕ ಸಂಘಟನೆಗಳು ಅಂತಿಮ ಹಂತದಲ್ಲಿ ವಿರೂಪಗೊಳ್ಳುತ್ತವೆ. ಅವರು Political powerನ್ನು ಹಿಂಬಾಲಿಸಿರುತ್ತಾರೆ. ದಲಿತರ ಪರವಾಗಿ ಹೋರಾಡುವ ಶಕ್ತಿಗಳು ಕ್ರಮೇಣ ದಲಿತರನ್ನೇ ಆಯುಧವಾಗಿಸಿಕೊಂಡು Political powerನ್ನು ಗಳಿಸಿಕೊಳ್ಳಲು ಪ್ರಯತ್ನಿಸುತ್ತವೆ. ಆವಾಗ ಅದರ ನೈಜ ಹೋರಾಟದ ದಿಕ್ಕು ಬದಲಾಗುತ್ತದೆ. ಯಾವುದನ್ನು ಅಂತಿಮ ಗುರಿಯಾಗಿಟ್ಟುಕೊಂಡು ಹೋರಾಡಬೇಕೋ ಅದನ್ನು ಬಿಟ್ಟು, ಬೇರೆಯದಕ್ಕೆ ಮುಖಮಾಡಿ ಹೊರಟರೆ, ಅಂತಹ ಸಂಘಟನೆಗಳು ಅಂತಿಮವಾಗಿ ಸೋಲನ್ನು ಒಪ್ಪಿಕೊಳ್ಳುತ್ತವೆ.

**ಅಲಕ್ಷಿತ ಸಮುದಾಯಗಳ ಸಂಘಟನೆಗಳಿಗೆ ಸಮಷ್ಟಿ ಸ್ವರೂಪ ಕೊಡಲು ಸಾಧ್ಯವೆ?**

ಯಾವುದೇ ಒಂದು ಒಳ್ಳೆಯ ವಿಚಾರವನ್ನಿಟ್ಟುಕೊಂಡು ಹೋರಾಟಕ್ಕೆ ಹೊರಟ ಸಂಘಟನೆಗಳು ಅಂತಿಮ ಹಂತದಲ್ಲಿ ಸೋಲುತ್ತದೆ. ಅದರ ಫಲಿತಾಂಶದ ಕುರಿತು ಸ್ವಾರ್ಥಪರ ಚಿಂತನೆಗಳನ್ನು ಕೈಬಿಡಬೇಕು. ಅಲ್ಲಿ ಸ್ವಾರ್ಥಕಾಲಿಟ್ಟತೆಂದರೆ, ಆ ಹೋರಾಟ ಎಷ್ಟೇ ಉದಾತ್ತವಾಗಿದ್ದರೂ ಅದು ಯಶಸ್ವಿಯಾಗುವುದಿಲ್ಲ. ಈ ದೇಶದಲ್ಲಿ ನಿಸ್ವಾರ್ಥ ಕಾರ್ಯಕರ್ತರ ಹೆಸರು ಕೆಲವೇ ಕೆಲವು ಕೇಳಿಬರುತ್ತವೆ. ಅದರಲ್ಲಿ ಕರ್ನಾಟಕದಲ್ಲಿ ಅಣ್ಣಾ ಹಜಾರೆ ಅವರ ಹೆಸರು ಬಹಳ ಪ್ರಮುಖವಾದದ್ದು. ಅಣ್ಣ ಹಜಾರೆ ಅವರು ತಮ್ಮ ಪ್ರದೇಶದಲ್ಲಿ ಮಾಡಿದಂತಹ ಬದಲಾವಣೆಯನ್ನು ಗಮನಿಸಿದರೆ, ಅಂತಹ ಪರಿವರ್ತನೆಯನ್ನು ಸಾಮಾನ್ಯವಾಗಿ ಯಾರೂ ಮಾಡಿದಂತೆ ಕಂಡುಬರುವುದಿಲ್ಲ. ರಾಜಕೀಯದವರು ಒಡ್ಡುವ ಪ್ರಲೋಭನೆಗಳನ್ನು ಅವರು ಮೀರಿದ್ದರಿಂದ ಅದು ಅವರಿಗೆ ಸಾಧ್ಯವಾಯಿತು. ಅವರು ತಮ್ಮ ಉದ್ದೇಶವನ್ನೇ ಕೇಂದ್ರವಾಗಿಸಿಕೊಂಡು ಹೋರಾಡಿದರೆ ಹೊರತು ಇನ್ನುಳಿದ ಯಾವ ಪ್ರಲೋಭನೆಗಳಿಗೂ ಅವರು ತಲೆಬಾಗಲಿಲ್ಲ. ಯಾವುದರಿಂದಲೂ ಅವರು ವಿಚಲಿತರಾಗಲಿಲ್ಲ. ಅಂತಿಮ ಗುರಿಯ ಬಗ್ಗೆ ಅವರಿಗೆಂದು ಗೊಂದಲವಿರಲಿಲ್ಲ. ಇಂತಹ ನಿಶ್ಚಿತವಾದ ಮನಸ್ಸು ಇದ್ದಾಗ ಮಾತ್ರ ಅವುಗಳಿಗೆ ಸಮಷ್ಟಿ ಸ್ವರೂಪ ಕೊಡಲು ಸಾಧ್ಯವಾಗುತ್ತದೆ.

**ಇವತ್ತಿಗೂ ಸಾಮಾಜಿಕ ಪಿಡುಗುಗಳು ಮತ್ತೆ-ಮತ್ತೆ ಸವಾಲಾಗಿ ಏಕೆ ನಿಲ್ಲುತ್ತಿವೆ?**

ಧರ್ಮವಿನಾಶವಾದಾಗ ನಾನು ಮತ್ತೆ ಮತ್ತೆ ಹುಟ್ಟಿ ಬರುತ್ತೇನೆ ಎಂದು ಸ್ವತಃ ಭಗವಂತನೇ ಹೇಳಿಕೊಂಡಿದ್ದಾನೆ. ಒಮ್ಮೆ ಹುಟ್ಟಿಗೆ ಬಂದು ಈ ಸಮಾಜವನ್ನು ಸುಧಾರಿಸುತ್ತೇನೆಂಬ ನಂಬಿಕೆ ಅವನಿಗಿಲ್ಲ. ಅದೇ ರೀತಿ ಈ ಸಾಮಾಜಿಕ ಸಮಸ್ಯೆಗಳನ್ನು ಒಂದೇ ಬಾರಿಗೆ ಬಿಡಿಸುತ್ತೇನೆ ಎಂಬುದು ಆಗದ ಮಾತು. ನಮ್ಮ ಸಮಾಜವನ್ನು ಆರೋಗ್ಯ ಪೂರ್ಣವಾಗಿ ಇಡಬೇಕಾದರೆ ನಿರಂತರವಾಗಿ ಕೆಲಸ ಮಾಡುವ ಒಂದು ಕೇಡರ್ ಬೇಕೆ ಬೇಕು. ಯಾಕೆಂದರೆ ನೈತಿಕ ನೆಲೆಗಟ್ಟಿನ ಮೇಲೆ ಒಬ್ಬ ವ್ಯಕ್ತಿ ನಿರಂತರವಗಿ ತಿದ್ದಿಕೊಂಡು ಹೋಗುವುದು ಸಾಧ್ಯವಿಲ್ಲ. ಅವನನ್ನು ಅಥವಾ ಅವಳನ್ನು ಎಚ್ಚರಿಸುವ ಒಂದು ವ್ಯವಸ್ಥೆ ಬೇಕೆಬೇಕು.

# ಮಹಿಳೆ - ವಿಜ್ಞಾನ - ತಂತ್ರಜ್ಞಾನ

*ಕಮಲಾ ನಂದಪ್ಪ*

**ಮಹಿಳೆ ಮತ್ತು ಸಮಾಜ**

ಯಾವುದೇ ಒಂದು ಜೀವಿ ಈ ಜೀವಮಂಡಲದ ಒಂದು ಅಂಗ. ಈ ಜೀವ ಮಂಡಲದಲ್ಲಿ ಅದು ತನ್ನದೇ ಆದ ಜೀವನಕ್ರಮದಿಂದ ತನಗೊಂದು ಸ್ಥಾನವನ್ನು ಪಡೆದುಕೊಂಡಿದೆ ಹಾಗೂ ನಿಸರ್ಗದೊಂದಿಗೆ ಬೆರೆತು ನಡೆಯುತ್ತಿದೆ. ಇಂಥಹ ಜೀವಿಗಳ ಸಾಲಿನಲ್ಲಿ ಮಾನವ ಜೀವಿಯೂ ಒಂದು. ಅದರೆ ಈ ಜೀವಿಯ ವೈಶಿಷ್ಟ್ಯವೆಂದರೆ ಈ ಜೀವಿಗೆ ಸೃಷ್ಟಿಕರ್ತ(?) ತರ್ಕಿಸುವ, ವಿವೇಚಿಸುವ, ನಿರ್ಧಾರ ಕೈಗೊಳ್ಳುವ, ಸುಖ-ದುಃಖಗಳನ್ನು ಅನುಭವಿಸುವ ಮನಸ್ಸನ್ನು ನೀಡಿದ. ಇದರಿಂದ ಮನುಷ್ಯನೊಬ್ಬ ತನ್ನ ಜೀವನವನ್ನು ತನಗಿಷ್ಟ ಬಂದಂತೆ ರೂಪಿಸಿಕೊಳ್ಳಲು ನೆರವಾಯಿತು.

ಹಿಂದೆ ಮನುಷ್ಯ ಕಾಡುಮೇಡುಗಳಲ್ಲಿ ಅಲೆದು ಗೆಡ್ಡೆ ಗೆಣಸುಗಳನ್ನು ತಿಂದು ಬದುಕಿದ. ಅನಂತರ ವ್ಯವಸಾಯವನ್ನು ಮಾಡಿ ವ್ಯವಸಾಯೋತ್ಪನ್ನಗಳನ್ನು ಪಡೆದು ಅವುಗಳನ್ನು ಉಪಯೋಗಿಸಿ ನಾಲ್ಕಾರು ಜನರೊಂದಿಗೆ ಕೂಡಿ ಬದುಕುವುದು ಹೆಚ್ಚು ಸೂಕ್ತ ಎಂದು ಭಾವಿಸಿದ. ಹೀಗೆ-ಪ್ರಾರಂಭವಾಯಿತು ಅವನ ಸಾಂಘಿಕ ಜೀವನ ಅಥವಾ ಸಾಮಾಜಿಕ ಜೀವನ.

ಜೀವನ ಎಂದರೆ ಇಷ್ಟಕ್ಕೆ ಮುಗಿಯಿತೇ? ಸಂತಾನೋತ್ಪತ್ತಿ ಎಲ್ಲ ಜೀವ ಜಂತುಗಳ ಅವಿಭಾಜ್ಯ ಅಂಗ. ಇದಕ್ಕಾಗಿ ಆತ ಸಂಗಾತಿಯನ್ನು ಅರಸುವಂತಾದ. ಕುಟುಂಬ ಅಂಕುರವಾದದ್ದು ಹೀಗೆ. ಮಹಿಳೆ ಕುಟುಂಬದ, ಆ ಮೂಲಕ ಸಮಾಜದ ಅವಿಭಾಜ್ಯ ಅಂಗವಾದಳು.

ನಿಸರ್ಗ ಪ್ರತಿಯೊಂದು ಜೀವಿಯ ರಚನೆಯಲ್ಲೂ ತನ್ನ ವೈವಿಧ್ಯತೆಯನ್ನು ಪ್ರದರ್ಶಿಸಿದೆ. ಅಂತೆಯೇ ಪುರುಷ ಮತ್ತು ಮಹಿಳೆಯರ ದೇಹ ರಚನೆ ಮತ್ತು ಪ್ರಕೃತಿಯಲ್ಲೂ ಸಾಕಷ್ಟು ವೈವಿಧ್ಯತೆಯನ್ನು ಪ್ರದರ್ಶಿಸಿದೆ. ಈ ದೇಹ ರಚನೆ ಮತ್ತು ಕಾರ್ಯ ವಿಧಾನಗಳೇ ಕಾರಣವಾಗಿ ಪುರುಷ ಮತ್ತು ಮಹಿಳೆಯರ ನಡುವೆ ಅಸಮಾನತೆ ಪ್ರಾರಂಭವಾಯಿತು. ಮಹಿಳೆ ಪ್ರಕೃತಿದತ್ತವಾದ ಸಹಜ ಕ್ರಿಯೆಯಂತೆ ಪ್ರತಿ ತಿಂಗಳೂ ಋತುಮತಿಯಾಗುತ್ತಾಳೆ. ಪುರುಷ ಇದನ್ನು ಆಕೆಯ ದೈಹಿಕ ದುರ್ಬಲತೆಯೆಂದು ಪರಿಗಣಿಸಿದ, ತಾನು ಬಲಿಷ್ಠನೆಂದೂ ಮತ್ತು ಆಕೆ ದುರ್ಬಲಳೆಂದೂ ಭಾವಿಸಿದ. ಮದುವೆ-ಮನೆ-ಮಕ್ಕಳು-ಕುಟುಂಬ ಪೋಷಣೆ

ಆಕೆಯ ಜವಾಬ್ದಾರಿಗಳೆಂದೂ, ಹೊರಗೆ ದುಡಿದು ಮನೆಗೆ ಬೇಕಾದ್ದನ್ನು ಒದಗಿಸುವುದು ಪುರುಷನ ಜವಾಬ್ದಾರಿಯೆಂದು ನಿರ್ಧರಿತವಾಗಿಬಿಟ್ಟಿತು. ಆದರೆ ಕಾಲಕ್ರಮದಲ್ಲಿ ಈ ಭಾವನೆಗಳು ಹೀಗೆ ಉಳಿಯಲಿಲ್ಲ. ಕಾಲಕ್ಕೆ ತಕ್ಕಂತೆ ಬದಲಾಗುತ್ತಿದ್ದ ಸಾಮಾಜಿಕ-ಆರ್ಥಿಕ ವ್ಯವಸ್ಥೆಯ ಹಿನ್ನೆಲೆಯಲ್ಲಿ ಮಹಿಳೆ ಮನೆ ಮಕ್ಕಳನ್ನುಳಿದು ತಾನು ಮತ್ತೇನನ್ನಾದರೂ ಸಾಧಿಸಬೇಕೆಂದು ಬಯಸಿದಳು. ಆಗಲೆ, ಪುರುಷ ಮತ್ತು ಮಹಿಳೆಯರ ಜವಾಬ್ದಾರಿ ಮತ್ತು ಅಸ್ತಿತ್ವ ಹೇಗಿರಬೇಕೆಂಬುದರ ಬಗೆಗೆ ಚರ್ಚೆ ಪ್ರಾರಂಭವಾದದ್ದು. ಈ ಹೊತ್ತಿಗಾಗಲೆ ಪುರುಷ ಆರ್ಥಿಕವಾಗಿ ಸ್ವತಂತ್ರನಾಗಿದ್ದು, ಮಹಿಳೆಗೆ ಆರ್ಥಿಕ ಸ್ವಾತಂತ್ರ್ಯವಿಲ್ಲದೆ ಇದ್ದುದರಿಂದ, ಸಾಮಾಜಿಕ ಅಧಿಕಾರ ಸಹಜವಾಗಿ ಪುರುಷನಲ್ಲಿ ಕೇಂದ್ರೀಕೃತವಾಗಿತ್ತು. ಆದ್ದರಿಂದ ಪುರುಷ-ಮಹಿಳೆಯರ ಜವಾಬ್ದಾರಿಗಳನ್ನು ನಿರ್ಧರಿಸುವವನು ಪುರುಷನೇ ಆಗಿಬಿಟ್ಟಿದ್ದರಿಂದ ಮಹಿಳೆಯರ ಬಗ್ಗೆ ಅವನ ಧೋರಣೆ ''ನ ಸ್ತ್ರೀ ಸ್ವಾತಂತ್ರ ಮರ್ಹತಿ'' ಆಗಿತ್ತು. ಅಂದರೆ ಸ್ತ್ರೀ ಸ್ವಾತಂತ್ರ್ಯಕ್ಕೆ ಅರ್ಹಳಲ್ಲ ಎಂಬ ತೀರ್ಪನ್ನು ನೀಡಿಬಿಟ್ಟ. ಅಸಮಾನತೆ ಅನಿವಾರ್ಯ, ಪುರುಷನಾಗಿ ಹುಟ್ಟಿದ್ದರಿಂದ ತಾನು ಹೆಚ್ಚು ಎಂಬ ಅಹಂಗೆ ಮುದ್ರೆಯನ್ನೊತ್ತಿದ. ಅಸಮಾನತೆ ಅಂದಿನಿಂದ ಇಂದಿನವರೆಗೂ ಉಳಿದುಕೊಂಡು ಬಂದಿದೆ. ಆದರೆ ಅಸಮಾನತೆಯ ತೀವ್ರತೆ ಮತ್ತು ರೂಪ ಬದಲಾಗಿರಬಹುದಷ್ಟೆ.

ಇಂದಿನ ಪರಿಸ್ಥಿತಿಯನ್ನು ಈಗ ನೋಡೋಣ. ಇಂದಿನ ಮಹಿಳೆ ಸಮಾಜದ ಎಲ್ಲ ರಂಗಗಳಲ್ಲೂ ತನಗಾಗಿ ತನ್ನದೇ ಒಂದು ಸ್ಥಾನವನ್ನು ಕಷ್ಟಪಟ್ಟು ಸಂಪಾದಿಸಿದ್ದಾಳೆ. ಆದರೆ ಸಮಾಜದಲ್ಲಿ ಈ ಸ್ಥಾನಮಾನ ಪಡೆಯುವಲ್ಲಿ ಅವಳ ಹಾದಿ ಸುಗಮವಾಗಿ ಇರಲಿಲ್ಲ ಎಂಬುದು ವಾಸ್ತವದ ಸಂಗತಿ.

ವಿಜ್ಞಾನ ಸಮುದಾಯದಲ್ಲಿಯೂ ಮಹಿಳೆ ಇಂದು ಅಸಮಾನತೆಯನ್ನು ಭೇದಿಸಿ ಮುನ್ನಡೆಯುತ್ತಿದ್ದಾಳೆ. ನಿಜ ಸಂಗತಿಯೆಂದರೆ ಇಲ್ಲಿಯೂ ಆಕೆ ತೀವ್ರಕರವಾದ ಅಸಮಾನತೆಯನ್ನು ಎದುರಿಸಬೇಕಾಯಿತು. ಉದಾಹರಣೆಗೆ ಅನೇಕ ಪ್ರಸಂಗಗಳಿವೆಯಾದರೂ ಇಲ್ಲಿ ಎರಡು ಪ್ರಸಂಗಗಳನ್ನು ನೋಡೋಣ.

ಮೇಡಂ ಕ್ಯೂರಿ ಪ್ಲಿಚ್ ಬ್ಲೆಂಡಿನಿಂದ ಯುರೇನಿಯಂ ಅದುರನ್ನು ತೆಗೆದದ್ದು ನಮ್ಮೆಲ್ಲರಿಗೂ ತಿಳಿದಿದೆಯಷ್ಟೆ. ಆಕೆ ಜೀವನದಲ್ಲಿ ನೊಂದಿದ್ದಾಕೆ, ಪುರುಷನಿಂದಾಗಿ ಖಿನ್ನತೆಯನ್ನು ಅನುಭವಿಸಿದ್ದಳು. ಆಕೆ ತನ್ನ ನೋವನ್ನು ಮರೆಯಲು ತಾನು ಪ್ರೀತಿಸುತ್ತಿದ್ದ ಭೌತಶಾಸ್ತ್ರ ವಿಷಯದ ಸಂಶೋಧನೆಯಲ್ಲಿ ತೊಡಗಿದಳು. ತನ್ನ ಸಂಶೋಧನೆಯಲ್ಲಿ ಯಶಸ್ವಿಯೂ ಆದಳು. ನಿಜ. ಆದರೆ ಆಕೆಯ ಸಂಶೋಧನೆ ಉನ್ನತ ಸ್ಥಾನಮಾನ ನೀಡಲು ಅಂದಿನ ಪುರುಷ ವಿಜ್ಞಾನಿಗಳ ಸಮುದಾಯ ತಯಾರಿರಲಿಲ್ಲ ಎಂಬುದೂ ವಾಸ್ತವ. ಆಕೆ ಅಡಿಗೆ ಮನೆಯಲ್ಲಿ ಮಾಡಿದ ಪ್ರಯೋಗಕ್ಕೆ ನೊಬೆಲ್ ಪುರುಸ್ಕಾರ ಅಗತ್ಯವಿಲ್ಲವೆಂದು ಕಟಕಿಯಾಡಿದರು. ಕೊನೆಗೂ ನೊಬೆಲ್ ಬಹುಮಾನಕ್ಕೆ ಅನುಮೋದಿಸುವಾಗ ಆಕೆಯ ಪತಿ ಪಿಯರಿ ಕ್ಯೂರಿಯ ಹೆಸರನ್ನಷ್ಟೇ ಸೂಚಿಸಲಾಗಿತ್ತು. ಆದರೆ ತನ್ನ ಪತ್ನಿಯ ಸಂಶೋಧನೆ

ಉನ್ನತಮಟ್ಟದ್ದಾಗಿದ್ದು, ಆಕೆಗೂ ನೊಬೆಲ್ ಬಹುಮಾನ ನೀಡದ ಹೊರತು ತನಗೆ ಬೇಡವೆಂದು ಪಿಯರಿಕ್ಯೂರಿ ತಿರಸ್ಕರಿಸುತ್ತಾರೆ. ಆಗ ಇಬ್ಬರಿಗೂ ಜಂಟಿಯಾಗಿ ನೊಬೆಲ್ ಬಹುಮಾನ ನೀಡಲಾಯಿತು(೧೯೩೦). ಆದರೆ ಎಷ್ಟು ಜನ ಮಹಿಳಾ ವಿಜ್ಞಾನಿಗಳಿಗೆ ಈ ಭಾಗ್ಯ ಇರಲು ಸಾಧ್ಯ.

ವಿಜ್ಞಾನ ಕ್ಷೇತ್ರದಲ್ಲಿನ ಅಸಮಾನತೆ-ಪುರುಷ ಪ್ರಾಧ್ಯಾನತೆಯ ಮತ್ತೊಂದು ಉದಾಹರಣೆಯೆಂದರೆ ಮಹಿಳಾ ಜೀವವಿಜ್ಞಾನಿಯಾದ ಡಾರತಿ ಹಾಡ್ ಕಿನ್ ಅವರಿಗೆ ಆಗಿರುವ ಅನುಭವ(Dorothy Crowfoot Hodgkin) ಈಕೆ ಪೆನ್ಸುಲಿನ್ ಹರಳುಗಳ ರಚನೆಯನ್ನು ಕಂಡುಹಿಡಿದಾಕೆ. ತನ್ನ ಈ ಸಾಧನೆಯ ನಂತರ ಆಕೆ ಇಂಗ್ಲೆಂಡಿನ ಪ್ರತಿಷ್ಟಿತ ರಾಯಲ್ ಸೊಸೈಟಿಯ ಸದಸ್ಯತ್ವವನ್ನು ಪಡೆಯಲು ಬಯಸಿದಳು. ಏಕೆಂದರೆ, ರಾಯಲ್ ಸೊಸೈಟಿಯ ಸದಸ್ಯತ್ವ ನೊಬೆಲ್ ಪ್ರಶಸ್ತಿಗೂ ಮಿಗಿಲೆಂದು ವಿಜ್ಞಾನಿಗಳು ಪರಿಗಣಿಸುತ್ತಿದ್ದರು.

ರಾಯಲ್ ಸೊಸೈಟಿಯ ಇತಿಹಾಸದಲ್ಲಿ ಸುಮಾರು ಇನ್ನೂರ ಐವತ್ತು ವರುಷಗಳ ಕಾಲ ಮಹಿಳೆಯರಿಗೆ ಅಲ್ಲಿ ಪ್ರವೇಶವಿರಲಿಲ್ಲ ಮಹಿಳಾ ವಿಜ್ಞಾನಿಗಳು ಇಲ್ಲಿ ಪ್ರವೇಶವನ್ನು ಪಡೆಯಲು ಹೋರಾಟವನ್ನೇ ಮಾಡುತ್ತಾರೆ. ಇಂತಹ ಹೋರಾಟದಲ್ಲಿ ಹಾಡ್ ಕಿನ್ ಅವರ ಪಾತ್ರವು ಪ್ರಮುಖವಾದದ್ದು. ಹಾಡ್ ಕಿನ್ ರಾಯಲ್ ಸೊಸೈಟಿಯ ಮೆಟ್ಟಿಲ ಮೇಲೆ ಕುಳಿತು ಬರ್ನಾಲ್ ಅವರ ಜೊತೆ ಮಾತನಾಡುತ್ತ "ನಾನು ಪೆನ್ಸುಲಿನ್ ಹರಳುಗಳ ರಚನೆಯನ್ನು ಕಂಡುಹಿಡಿದೆ" ಎಂದು ಹೇಳುತ್ತಾಳೆ. ಆಗ ಬರ್ನಾಲ್ "ಹಾಗಾದರೆ ನಿಮಗೆ ನೊಬೆಲ್ ಪ್ರಶಸ್ತಿ ಸಿಕ್ಕುವುದು ಖಚಿತ"ಎಂದು ಉತ್ತರಿಸಿದರು. ಆಗ ಹಾಡ್ ಕಿನ್ "ನೋಬೆಲ್ ಪುರುಸ್ಕಾರಕ್ಕಿಂತ ನನಗೆ ರಾಯಲ್ ಸೊಸೈಟಿಯ ಸದಸ್ಯತ್ವ ಹೆಚ್ಚು ಬೆಲೆ ಉಳ್ಳದು"ಎನ್ನುವರು. ಬರ್ನಾಲ್ ಆಗ ಹೇಳುತ್ತಾರೆ "ಹಾಡ್ ಕಿನ್ ಅವರೇ ರಾಯಲ್ ಸೊಸೈಟಿಯ ಸದಸ್ಯತ್ವ ನಿಮಗೆ ದೊರಕುವುದು ತುಸು ಕಷ್ಟವಾಗಬಹುದು"ಎಂದು ಹೇಳುತ್ತಾರೆ.

ಈ ಮೇಲಿನ ಎರಡೂ ಘಟನೆಗಳಲ್ಲಿ ಗಮನಿಸಬೇಕಾದ ಮುಖ್ಯ ಅಂಶ ಎಂದರೆ ವಿದ್ಯಾವಂತರು, ಪ್ರತಿಭಾವಂತರು, ಉನ್ನತ ಮಟ್ಟದ ವಿಜ್ಞಾನಿಗಳು ಆಗಿದ್ದ ಮೇರಿ ಕ್ಯೂರಿ, ಡಾರತಿ ಹಾಡ್ ಕಿನ್ ಅವರಿಗೆ ಇಂತಹ ಪರಿಸ್ಥಿತಿಯಾದರೆ ಇನ್ನು ಸಾಮಾನ್ಯ ಮಹಿಳೆಯರ ಪರಿಸ್ಥಿತಿ ಏನೆಂದು ಊಹಿಸುವುದು ಕಷ್ಟವಲ್ಲವೇ?

ಡಾರತಿ ಹಾಡ್ ಕಿನ್‌ಗೆ ಕ್ರಿ.ಶ.೧೯೪೭ರಲ್ಲಿ ಕೊನೆಗೂ ರಾಯಲ್ ಸೊಸೈಟಿಯ ಸದಸ್ಯತ್ವ ದೊರಕುತ್ತದೆ ಮತ್ತು ೧೯೬೪ರಲ್ಲಿ ನೊಬೆಲ್ ಪ್ರಶಸ್ತಿಯು ಪ್ರದಾನವಾಗುತ್ತದೆ.

ಪುರುಷ ಮತ್ತು ಮಹಿಳೆ ಈ ಸಮಾಜದ ಅವಿಭಾಜ್ಯ ಅಂಗಗಳು, ಅಯಾಯಾ ಕಾಲದ ಸಾಮಾಜಿಕ ಆರ್ಥಿಕ ವ್ಯವಸ್ಥೆಯ ಪುರುಷ ಮತ್ತು ಮಹಿಳೆಯರ ಸಾಮಾಜಿಕ ಸ್ಥಾನಮಾನ ಮತ್ತು ಪರಸ್ಪರ ಹೊಣೆಗಾರಿಕೆಯನ್ನು ನಿರ್ಧರಿಸಿದೆ. ಈ ವಿಂಗಡಣೆಯಲ್ಲಿ ಅಸಮಾನತೆಯು ಇದೆ. ಈ ಅಸಮಾನತೆಯ ತೀವ್ರತೆ ವಿವಿಧ ಸಾಮಾಜಿಕ ವ್ಯವಸ್ಥೆಗಳಲ್ಲಿ ಬದಲಾಗುತ್ತಾ

ಬಂದಿದೆ ಅಷ್ಟೆ. ಇಂದು ನಾವು ವೈಜ್ಞಾನಿಕವಾಗಿ ಮುನ್ನಡೆದಿದ್ದೇವೆ ನಿಜ. ಆದರೆ ಈ ವೈಜ್ಞಾನಿಕ ಮುನ್ನಡೆ ಅಸಮಾನತೆಯನ್ನು ಹೋಗಲಾಡಿಸಿದೆಯೇ? ತಟಸ್ಥಗೊಳಸಿದೆಯೇ ಅಥವಾ ಹೆಚ್ಚಿಸಿದೆಯೇ?

**ವಿಜ್ಞಾನ ತಂತ್ರಜ್ಞಾನದ ಬೆಳವಣಿಗೆ-ಮಹಿಳೆಯ ಮೇಲೆ ಅದರ ಪರಿಣಾಮ. ಜೀವವಿಜ್ಞಾನ-ತಂತ್ರಜ್ಞಾನದ ಹಿನ್ನೆಲೆಯಲ್ಲಿ :**

ಇಪ್ಪತ್ತನೆಯ ಶತಮಾನ ಮಾನವ ಇತಿಹಾಸದ ಪರ್ವಕಾಲ. ಏಕೆಂದರೆ, ಈ. ಶತಮಾನದ ವೈಜ್ಞಾನಿಕ ಸಂಶೋಧನೆಗಳ ಮೂಲಕ ಮಾನವ ಸೃಷ್ಟಿಯ ಅನೇಕ ರಹಸ್ಯಗಳನ್ನು ಅರಿಯುತ್ತಾನೆ. ಇದರಿಂದ ಸೃಷ್ಟಿಯನ್ನು ಆತ ಹೊಸ ದೃಷ್ಟಿಯಿಂದ ನೋಡಲು ಸಾಧ್ಯವಾಗುತ್ತದೆ. ಮಾನವನಿಗೆ ಈ ಹೊಸ ದೃಷ್ಟಿ ಕೊಡುವಲ್ಲಿ ನೆರವಾಗಿರುವ, ನೆರವಾಗುತ್ತಿರುವ ಇಪ್ಪತ್ತನೇ ಶತಮಾನದ ಜೀವವಿಜ್ಞಾನದ ಕೆಲವು ಪ್ರಮುಖ ಸಂಶೋಧನೆಗಳಾವುವೆಂದು ನೋಡೋಣ.

೧. ಕ್ರಿ.ಶ.೧೯೦೦ರಲ್ಲಿ ಪುನರಾವಿಷ್ಕಾರಗೊಂಡ ಮಂಡನನ ತಳಿ ವಿಜ್ಞಾನ
೨. ೧೯೫೩ರಲ್ಲಿ ವ್ಯಾಟ್ಸ್ ನ ಮತ್ತು ಕ್ರಿಕ್ ವರ್ಣತಂತುವಿನ ರಚನೆಯನ್ನು ಕಂಡುಹಿಡಿದದ್ದು.
೩. ೧೯೭೩ರಲ್ಲಿ ಅವಿಷ್ಕಾರಗೊಂಡ ವರ್ಣತಂತುವಿನ ಕಸಿ ವಿಜ್ಞಾನ (Recombinent DNA)

ಕ್ರಿ.ಶ.೧೯೮೦ಂಕ್ಕೂ ಮುಂಚಿನ ಸಂಶೋಧನೆಗಳು ಇವಾದರೆ ೧೯೮೦ರ ನಂತರದ ಸಂಶೋಧನೆಗಳನ್ನು ಎರಡು ಪ್ರಮುಖ ವಿಭಾಗಗಳನ್ನಾಗಿ ವಿಂಡಿಸಬಹುದು. ಅವುಗಳೆಂದರೆ:

೧. ತಳಿ ವಿಜ್ಞಾನ ಮತ್ತು
೨. ಜೀವ ತಂತ್ರಜ್ಞಾನ

ಈ ಸಂಶೋಧನೆಗಳು ಮಾನವ ಜನಾಂಗದ ಮೇಲೆ ಅನೇಕ ಪ್ರತ್ಯಕ್ಷ ಮತ್ತು ಪರೋಕ್ಷ ಪರಿಣಾಮಗಳನ್ನು ಬೀರಿವೆ. ಇವೇ ಅಲ್ಲದೆ ಇನ್ನು ಅನೇಕ ಅನೇಕ ಸಂಶೋಧನೆಗಳು ಮಾನವ ಜನಾಂಗದ ಮೇಲೆ ಅದರಲ್ಲೂ ಮಹಿಳೆಯರ ಮೇಲೆ ನೇರ ಪರಿಣಾಮಗಳನ್ನು ಬೀರಿದೆ. ಈಗ ನಾವು ಈ ಕೆಳಕಂಡ ಜೀವ ವಿಜ್ಞಾನದ ಅವಿಷ್ಕಾರಗಳು ಮಾನವ ಜನಾಂಗ-ಮಹಿಳೆ-ತನ್ಮೂಲಕ ಸಮಾಜದ ಮೇಲೆ ಬೀರಿರುವ, ಬೀರುತ್ತಿರುವ, ಬೀರಬಹುದಾದ ಪರಿಣಾಮಗಳ ಬಗ್ಗೆ ಸ್ಥೂಲವಾಗಿ ನೋಡೋಣ.

ನಾವು ವಿಶ್ಲೇಷಿಸಲಿಚ್ಛಿಸಿರುವ ಅವಿಷ್ಕಾರಗಳೆಂದರೆ

೧. ಅಮ್ನಿಯೋ ಸೆಂಥಿಸಿಸ್ ಮತ್ತು ಇನ್ ವಿಟ್ರೊ ಫರ್ಟಿಲೈಸೇಷನ್ (IVF )
೨. ತಳಿ ವಿಜ್ಞಾನ-ತಂತ್ರಜ್ಞಾನ ಮತ್ತು ಜೀವ ತಂತ್ರಜ್ಞಾನ

**ಅಮ್ನಿಯೋ ಸಿಂಥಿಸಿಸ್ ಮತ್ತು ಇನ್ ವಿಟ್ರೊ ಫರ್ಟಿಲೈಸೇಷನ್**

ಅಮ್ನಿಯೋ ಸಿಂಥೆಸಿಸ್ : ಭ್ರೂಣವನ್ನು ಆವರಿಸಿರುವ ದ್ರವವನ್ನು ಹೊರತೆಗೆದು ಅದರ ವರ್ಣತಂತುಗಳನ್ನು ಪರೀಕ್ಷಿಸಿ ಭ್ರೂಣದ ಗುಣ-ದೋಷ-ಲಿಂಗವನ್ನು ಪತ್ತೆಹಚ್ಚುವ ವಿಧಾನಕ್ಕೆ ಅಮ್ನಿಯೋ ಸಿಂಥೆಸಿಸ್ ಎಂದು ಹೆಸರು.

ಆರಂಭಿಕ ಹಂತದ ಭ್ರೂಣದಲ್ಲಿರುವ ಗುಣ ದೋಷಗಳನ್ನು ಪತ್ತೆ ಹಚ್ಚುವ ಮೂಲ ಉದ್ದೇಶದಿಂದ ಅವಿಷ್ಕಾರಗೊಂಡ ಈ ವಿಧಾನ ಆ ಉದ್ದೇಶಕ್ಕೆ ಬಳಕೆಯಾದದ್ದಕ್ಕಿಂತಲೂ ಲಿಂಗ ಪತ್ತೆಹಚ್ಚಲು, ನಂತರ ಹೆಣ್ಣು ಭ್ರೂಣ ಹತ್ಯೆಗೆ ಬಳಕೆಯಾದದ್ದೇ ಹೆಚ್ಚು. ಆದ್ದರಿಂದ ಆರಂಭಿಕ ಹಂತದ ಹೆಣ್ಣು ಭ್ರೂಣಗಳ ಗರ್ಭಪಾತ ಹೆಚ್ಚಿತು. ಕೆಲವು ಹಂತಗಳಲ್ಲಿ ಬಲವಂತದ ಗರ್ಭಪಾತಗಳೂ ಆದವು. (Steven Rose, God's Organism) ಭಾರತದಂತಹ ದೇಶಗಳಲ್ಲಂತೂ ಹೆಣ್ಣುಭ್ರೂಣ ಹತ್ಯೆಯ ಪರಿಣಾಮವಾಗಿ ಪುರುಷ ಮತ್ತು ಮಹಿಳೆಯರ ಅನುಪಾತದಲ್ಲಿ ಏರುಪೇರಾಗಿದೆ. ಇದು ಆರೋಗ್ಯಕಾರಿ ಸಮಾಜದ ಲಕ್ಷಣವಲ್ಲ. ಇದು ಈ ಸಂಶೋಧನೆ ಮಹಿಳೆಯರ, ಆ ಮೂಲಕ ಸಮಾಜದ ಮೇಲೆ ಬೀರಿರುವ ನೇರ ಹಾಗೂ ಆತಂಕಕಾರಿ ಪರಿಣಾಮವಾಗಿದೆ.

ಈ ಸಂಶೋಧನೆಯ ಧನಾತ್ಮಕ ಪರಿಣಾಮಗಳು ಸಮಾಜದ ಮೇಲಾಗಿದೆ. ಅತಿಯಾದ ದೋಷವಿರುವ ಭ್ರೂಣವನ್ನು ತನ್ನೊಡಲಿನಲ್ಲಿರಿಸಿ ಅದಕ್ಕೆ ಜನ್ಮ ನೀಡಿ ಸಾಕುವುದು ಸಾಮಾನ್ಯ ವಿಷಯವೇನೂ ಅಲ್ಲ. ಭಾವನಾತ್ಮಕವಾಗಿ ಆಕೆ ಅದಕ್ಕಾಗಿ ಸಾಕಷ್ಟು ತಯಾರಿರಬೇಕಾಗುತ್ತದೆ. ಆದ್ದರಿಂದ ಅಮ್ನಿಯೋ ಸಿಂಥೆಸಿಸ್ ವಿಧಾನದಿಂದ ಗರ್ಭವತಿಗೆ ತನ್ನೊಡಲಿನಲ್ಲಿರುವುದು ದೋಷಪೂರ್ಣ ಭ್ರೂಣ ಎಂದು ಆರಂಭಿಕ ಹಂತದಲ್ಲೇ ತಿಳಿದರೆ ಆಕೆಯು ಆ ಭ್ರೂಣವನ್ನು ತನ್ನಲ್ಲಿರಿಸಿಕೊಳ್ಳಲು ಭಾವನಾತ್ಮಕವಾಗಿ ತಯಾರಿರುತ್ತಾಳೆ. ಅಥವಾ ಗರ್ಭಪಾತ ಮಾಡಿಸಿಕೊಳ್ಳಲು ಮುಂದಾಗುತ್ತಾಳೆ. ಈ ಅವಕಾಶ ಆಕೆಗೆ ಹಿಂದೆ ಇರಲಿಲ್ಲ. ಆದರೆ ಇಂದು ದೊರಕಿದೆ. ಇದನ್ನು ಧನಾತ್ಮಕ ಪರಿಣಾಮ ಎಂದು ಪರಿಗಣಿಸಬಹುದು. ಆದರೆ ಒಟ್ಟಾರೆಯಾಗಿ ನೋಡಿದಾಗ ಈ ಅವಿಷ್ಕಾರ ಮಹಿಳೆಯ ಮೆಲೆ- ಸಮಾಜದ ಮೇಲೆ ಹೆಚ್ಚಾದ ಋಣಾತ್ಮಕ ಪರಿಣಾಮವನ್ನು ಬೀರಿದೆ.

ಇನ್ ವಿಟ್ರೊ ಫರ್ಟಿಲೈಸೇಷನ್ (Invitro Fertilisatio- IVF) : ಗರ್ಭಾಶಯದ ಹೊರಗೆ ಅಂಡಾಣು ಮತ್ತು ವೀರ್ಯಾಣುವನ್ನು ಫಲಿಸುವಂತೆ ಮಾಡಿ ನಂತರ ಗರ್ಭಾಶಯಕ್ಕೆ ವರ್ಗಾಯಿಸಿ ಭ್ರೂಣವನ್ನು ಬೆಳೆಯಲು ಅನುವು ಮಾಡಿಕೊಡುವ ಈ ವಿಧಾನಕ್ಕೆ ಇನ್ ವಿಟ್ರೊ ಫರ್ಟಿಲೈಸೇಷನ್ ಎಂದು ಹೆಸರು.

ಈ ವಿಧಾನದಲ್ಲಿ ಅಂಡಾಣು ಮತ್ತು ವೀರ್ಯಾಣುಗಳನ್ನು ಗರ್ಭಾಶಯದ ಹೊರಗೆ ಗಾಜಿನ ತಟ್ಟೆಯೊಂದರಲ್ಲಿ ಫಲಿಸುವಂತೆ ಮಾಡುತ್ತಾರೆ. ಅನಂತರ ತಾಯಿ ಗರ್ಭಕ್ಕೆ ಅದನ್ನು ವರ್ಗಾಯಿಸಲಾಗುತ್ತದೆ. ಈ ವಿಧಾನವು ವಿಜ್ಞಾನ ಮತ್ತು ತಂತ್ರಜ್ಞಾನದ ಸೂಕ್ಷ್ಮ ಸಂಯೋಗವಾಗಿದೆ. ಈ ವಿಧಾನ ಅವಿಷ್ಕಾರವಾದದ್ದೇ ತಡ ಪಾಶ್ಚಿಮಾತ್ಯ ದೇಶಗಳಲ್ಲಿ (ಇದೀಗ ಭಾರತದಲ್ಲೂ) ಮಹಿಳೆಯರು ಇದನ್ನು ಒಂದು ಸಾಧನ ಎಂದೇ ಭಾವಿಸಿದರು. ಪುರುಷನೊಂದಿಗೆ ಸಂಯೋಗವಿಲ್ಲದೆ ತಾನು ಮಕ್ಕಳನ್ನು ಪಡೆಯಬಹುದಾದರೆ ಆ ಮಟ್ಟಿಗೆ ಮದುವೆ ಸಂಸಾರ ಎಂಬ ಬಂಧನದಿಂದ ತಾನು ಮುಕ್ತಳಾದಂತೆ ಎಂದು ಭಾವಿಸಿದಳು. ಇದು ವ್ಯಕ್ತಿ ಕೇಂದ್ರೀತ ಸಮಾಜದ ನಿರ್ಮಾಣಕ್ಕೆ ನಾಂದಿಯಾಯಿತು. ಮಹಿಳೆ ಮಕ್ಕಳನ್ನು ಆರಿಸಿ

ಪಡೆಯುವುದು ತನ್ನ ಹಕ್ಕು ಎಂದು ಭಾವಿಸಿದಳು. ಮಹಿಳೆ ತನ್ನ ದೇಹ ಮತ್ತು ಜೀವನದ ಬಗ್ಗೆ ಭಾವನಾತ್ಮಕವಾಗಿ ಯೋಚಿಸಲು ಪ್ರಾರಂಭಿಸಿದಳು(S.Harding, whose Science? Whose Knowledge?) ಇದರಿಂದ ಏಕಪೋಷಕ ಕುಟುಂಬಗಳು ಹೆಚ್ಚಾದವು. ಜೊತೆಗೆ ಹೆಣ್ಣೊಬ್ಬಳು ತನ್ನ ಸೌಂದರ್ಯವನ್ನು ಕಾಯ್ದುಕೊಳ್ಳುವ ಸಲುವಾಗಿಯೋ, ಮತ್ತಾವುದೋ ಕಾರಣಕ್ಕೋ ತನ್ನ ಮಗುವನ್ನು ಬೇರೆಯವರ ಗರ್ಭದಲ್ಲಿರಿಸಿ ಬೆಳೆಸುವ ಅವಕಾಶವೂ ದೊರೆಯಿತು. ಇದು ಐತಿಹಾಸಿಕವಾಗಿ ಹೊಸ ರೀತಿಯ ತಾಯಿಯನ್ನು ಸೃಷ್ಟಿ ಮಾಡಿತು. ಅದುವರೆಗೆ ಇದ್ದ ಹೆತ್ತ ತಾಯಿ ಮತ್ತು ಸಾಕು ತಾಯಿಯ ಜೊತೆಗೆ ಬಾಡಿಗೆ ತಾಯಂದಿರೂ ಸೇರಿಕೊಂಡರು(Stonworth, Reproductive technologies and De construction of mother hood, (ed) Re productive techonologies).

IVF ತಂತ್ರಜ್ಞಾನ ಹೆಚ್ಚೆಚ್ಚು ಜನಪ್ರಿಯಗೊಂಡಂತೆ ವ್ಯಾಪರೀಕರಣಗೊಳ್ಳುವ ಸೂಚನೆಗಳು ಕಾಣತೊಡಗಿದವು. ಮಾನ್ನವನ ಅಂಗಾಂಗಳಿಗಾಗಿ ದಾನಿಗಳನ್ನು ಹುಡುಕುವ ಬದಲು IVF ವಿಧಾನದಿಂದ ಬಾಡಿಗೆ ತಾಯಂದಿರಲ್ಲಿ ಅಥವಾ ಸ್ವತಃ ಅದರ ತಾಯಿಯೇ ಗರ್ಭಧರಿಸಿ ಜನಿಸಿದ ಮಗುವಿನ ಅಂಗಾಂಗಗಳನ್ನು ಬದಲಿ ಅಂಗ ಜೋಡಣೆಯ ಶಸ್ತ್ರ ಚಿಕಿತ್ಸೆಯಲ್ಲಿ ಬಳಸಲು ಪ್ರಾರಂಭಿಸಿದರು.

ಕಂದಮ್ಮನಿಲ್ಲದ ತಾಯಿಗೆ, ಮನೆಗೆ, ತಂತ್ರಜ್ಞಾನದ ಸಹಾಯದಿಂದ ಪುಟ್ಟ ಕಂದಮ್ಮನನ್ನು ಒದಗಿಸಿ ಕೊಡುವುದಷ್ಟೇ ಈ IVF ತಂತ್ರಜ್ಞಾನದಿಂದ ಆಗಬೇಕಿತ್ತು. ಆಗ ಪ್ರಾಯಶಃ ಈ ವಿಧಾನದ ಸಾಫಲ್ಯತೆ ನೈತಿಕತೆಯ ಮಟ್ಟವನ್ನು ಮೀರುತ್ತಿರಲಿಲ್ಲ. ಈ ವಿಧಾನದ ಸಾಫಲ್ಯ ವೈಫಲ್ಯಗಳಿಗಿಂತ ಇದರಿಂದುಂಟಾಗುವ ನೈತಿಕತೆಯ ಪ್ರಶ್ನೆ ಬಹಳ ಗಂಭೀರವಾದುದಾಗಿದೆ. ಉದಾ: ಒಂದು ಸಮಸ್ಯೆಯನ್ನು ವಿಶ್ಲೇಷಿಸುವುದಾದರೆ, IVF ವಿಧಾನದಿಂದ ದಂಪತಿಗಳ ಮೂರ್ನಾಲ್ಕು ಅಂಡಾಣುಗಳು ಪ್ರಯೋಗ ಶಾಲೆಯಲ್ಲಿ ಒಟ್ಟಿಗೆ ಫಲಿಸಿರುವೆಂದು ತಿಳಿಯಿರಿ. ಕೇವಲ ಒಂದೇ ಒಂದು ಫಲಿತ ಅಂಡಾಣುವನ್ನು ಮಹಿಳೆ ತನ್ನಲ್ಲಿರಿಸಿಕೊಳ್ಳಲು ಬಯಸಿದರೆ ಮಿಕ್ಕ ಎರಡನ್ನೇನು ಮಾಡುವುದು, ಬಿಸಾಡುವುದೇ? ಅಥವಾ ಹಾಗೇ ಇಡುವುದೇ? ಹಾಗೆಯೇ ಇಟ್ಟರೆ ಎಷ್ಟು ದಿನ ಹಾಗೇ ಇಡುವುದು? ನಂತರವಾದರೂ ಮಾಡುವುದೇನನ್ನು ಇಂಥಹವೇ ಹತ್ತು ಹಲವು ಪ್ರಶ್ನೆಗಳು ಜ್ವಲಂತವಾಗಿದೆ.

ಈ ಮೇಲಿನ ಎರಡೂ ಅವಿಷ್ಕಾರಗಳ ಪರಿಣಾಮಗಳನ್ನು ಸ್ಥೂಲವಾಗಿ ನೋಡಿದಾಗ ಕಂಡುಬರುವುದಿಷ್ಟೆ. ಈ ಅವಿಷ್ಕಾರಗಳು ಯಾವ ಉತ್ತಮ ಉದ್ದೇಶಕ್ಕೆ ಬಳಕೆಯಾಗ ಬೇಕಾಗಿತ್ತೋ ಆ ಉದ್ದೇಶಗಳಿಗೆ ಬಳಕೆಯಾದದ್ದಕ್ಕಿಂತ ಬೇರೆಯದಕ್ಕೆ ಮಹಿಳೆಯರು ಇದನ್ನು ಉಪಯೋಗಿಸಿದರು. ಕೆಲವು ವೇಳೆ ಮಹಿಳೆಯರ ಮೇಲೆ ಇದನ್ನು ಪ್ರಯೋಗಿಸಿದರು. ಇದರಿಂದ ಮಹಿಳೆ ತಾಯಿ-ಹೆಂಡತಿ ಎಂಬ ಭಾವನಾತ್ಮಕ ಸಂಬಂಧಕ್ಕಿಂತ ಹೆಚ್ಚಾಗಿ ಜೀವಶಾಸ್ತ್ರದ ಒಂದು ಅಂಗವಾಗಿ ಪರಿಗಣಿಸಲ್ಪಟ್ಟಳು.

**ತಳಿ ವಿಜ್ಞಾನ-ತಂತ್ರಜ್ಞಾನ ಮತ್ತು ಜೀವತಂತ್ರಜ್ಞಾನ**

ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ಮಾನವನ ಗುಣಧರ್ಮಗಳು ವಂಶವಾಹಿನಿಗಳ ಮೂಲಕ ಹರಿದು ಬರುತ್ತವೆಂದು ಮೆಂಡಲ್ ಮೊದಲಿಗೆ ತೋರಿಸಿಕೊಟ್ಟನು. ಈ ವಂಶವಾಹಿನಿಗಳಿಗೆ ಸಂಬಂಧಿಸಿದ ವಿಜ್ಞಾನ-ತಂತ್ರಜ್ಞಾನವನ್ನು ತಳಿ ವಿಜ್ಞಾನ-ತಂತ್ರಜ್ಞಾನ ಎನ್ನುತ್ತೇವೆ. ಅಥವಾ ಜೆನೆಟಿಕ್ ಇಂಜನೀರಿಂಗ್ ಎಂದು ಕರೆಯುತ್ತೇವೆ. ಜೆನೆಟಿಕ್ ಇಂಜನಿಯರಿಂಗ್‌ನ ಅನ್ವಿತ ರೂಪವೇ ಜೀವತಂತ್ರಜ್ಞಾನ.

ಸೃಷ್ಟಿಯ ಈ ರಹಸ್ಯ ವಾಹಕಗಳ ರೂಪ-ರಚನೆಯನ್ನು ವಿಜ್ಞಾನಿಗಳು ಅರಿಯ ಬಯಸಿದರು. ಶ್ರಮಪಟ್ಟು ಅದನ್ನು ಅರಿಯುವಲ್ಲಿ ಯಶಸ್ವಿಯೂ ಆದರು. ಇಷ್ಟಕ್ಕೆ ಮುಗಿಯಿತೇ ಇವರ ಕುತೂಹಲ? ದೋಷವಿರುವ ವಂಶವಾಹಿನಿಯನ್ನು ರಿಪೇರಿ ಮಾಡಲು (ವಂಶವಾಹಿನಿ ಚಿಕಿತ್ಸೆ) ಕಸಿ ಮಾಡಲೂ ಕಲಿತರು. ಇದರಿಂದ ನಾನಾ ರೀತಿಯ ಪರಿಣಾಮಗಳು ಸಮಾಜದಲ್ಲಿ ಉಂಟಾದವು.

ವಂಶವಾಹಿನಿಗಳು ಒಂದು ತಲೆಮಾರಿನಿಂದ ಇನ್ನೊಂದು ತಲೆಮಾರಿಗೆ ರವಾನೆಯಾಗುತ್ತವೆ. ಹೀಗೆ ಆಗುವಾಗ ಒಂದು ಎಳೆ ತಂದೆಯಿಂದಲೂ ಮತ್ತೊಂದು ಎಳೆ ತಾಯಿಯ ಮೂಲಕವೂ ಮಗುವಿಗೆ ರವಾನೆಯಾಗಿರುತ್ತದೆ. ಆದ್ದರಿಂದ ಯಾವುದಾದರೊಂದು ದೋಷ ತಂದೆ-ತಾಯಿ ಇಬ್ಬರಲ್ಲೂ ಇದ್ದರೆ ಹುಟ್ಟುವ ಮಗುವಿನಲ್ಲಿ ಆ ದೋಷ ಕಂಡು ಬರುವ ಪ್ರಮಾಣ ಹೆಚ್ಚಾಗಿರುತ್ತದೆ. ಆದರೆ ಯಾರಾದರೂ ಒಬ್ಬರಲ್ಲಿ ಮಾತ್ರ ಇದ್ದರೆ ಅದು ಮಗುವಿನಲ್ಲಿ ಪ್ರಕಟವಾಗುವ ಪ್ರಮಾಣ ಅಷ್ಟರಮಟ್ಟಿಗೆ ಕಡಿಮೆಯಾಗುತ್ತದೆ. ಈ ವಂಶವಾಹಿನಿಗಳನ್ನು ಅಭ್ಯಸಿಸುವುದರಿಂದ ಮಗುವಿಗೆ ಮುಂದೆ ಬರಬಹುದಾದ ಅನೇಕ ರೋಗಗಳ ಸಾಧ್ಯಸಾಧ್ಯತೆಗಳನ್ನು ಗುರುತಿಸಬಹುದು. ಇದರಿಂದ ಭ್ರೂಣದಲ್ಲಿ ಯಾವುದಾದರೂ ತೀವ್ರತರವಾದ ದೋಷಗಳಿದ್ದಲ್ಲಿ ಅಂತಹ ಭ್ರೂಣವನ್ನು ಗರ್ಭಪಾತ ಮಾಡಿ ತೆಗೆಯಬಹುದು. ಆದರೆ ಅಲ್ಪ ಪ್ರಮಾಣದ ದೋಷಗಳಿರುವ ವಂಶವಾಹಿನಿಗಳು ಪತ್ತೆಯಾದಾಗಲೂ ಈ ವಿಧಾನವನ್ನು ಅನುಸರಿಸುವುದು ಸೂಕ್ತವಲ್ಲ. ಅದಾಗ್ಯೂ ವಂಶವಾಹಿನಿಗಳಲ್ಲಿರುವ ಗುಣ-ದೋಷಗಳು ಪ್ರಕಟವಾಗಲು ಆ ವ್ಯಕ್ತಿಯು ಬೆಳೆಯುತ್ತಿರುವ ಪರಿಸರ ಪ್ರಮುಖ ಕಾರಣವಾಗುತ್ತದೆ. ಉದಾಹರಣೆಗೆ ಒಂದೇ ರೀತಿಯ ಎರಡು ಬೀಜಗಳು ಬೇರೆ ಬೇರೆ ಮಣ್ಣಿನಲ್ಲಿ ಬೆಳೆಯುವ ಪರಿ ಬೇರೆ ಬೇರೆಯಾಗಿರುತ್ತದೆ.

ಆದ್ದರಿಂದ ವ್ಯಕ್ತಿಯೊಬ್ಬನಲ್ಲಿ ದೋಷಗಳಿರುವ ವಂಶವಾಹಿನಿಗಳು ಪತ್ತೆಯಾದರೂ, ಅದು ಪ್ರಕಟವಾಗಬಹುದು ಅಥವಾ ಆಗದೇ ಇರಲೂಬಹುದು. ಆದ್ದರಿಂದ ವೈಜ್ಞಾನಿಕವಾಗಿ ವಂಶವಾಹಿನಿಯಲ್ಲಿ ಕೆಲವು ದೋಷಗಳು ಕಂಡುಬಂದರೂ, ವಂಶವಾಹಿನಿ ಕಳಂಕಿತವಾಗಿದೆಯೆಂದು ಭಾವಿಸಿ ಅವರನ್ನು ಕಳಂಕಿತರಂತೆ ಕಾಣಬೇಕಾಗಿಲ್ಲ. ಆದರೆ ದುರಾದೃಷ್ಟವಶಾತ್ ಇತಿಹಾಸದಲ್ಲಿ ಇಂಥಹ ಪ್ರಸಂಗ ನಡೆದೇ ಹೋಯಿತು. ನಿಕ್ಸನ್

ರವರ ಕಾಲದಲ್ಲಿ ಕಪ್ಪು ಅಮೆರಿಕನ್ನರ ವಂಶವಾಹಿನಿ ಪರೀಕ್ಷೆಯನ್ನು ನಡೆಸಿದರು. ಈ ಪರೀಕ್ಷೆಯ ಪ್ರಕಾರ ಪ್ರತಿ ಹನ್ನೆರಡು ಜನ ಕಪ್ಪು ಅಮೆರಿಕನ್ನರಲ್ಲಿ ಒಬ್ಬರಿಗೆ ಅವರ ವಂಶವಾಹಿನಿಯಲ್ಲಿ ಸಿಕಲ್ ಸೆಲ್ ಅನೀಮಿಯಾ ಎಂಬ ರೋಗದ ಪ್ರಬಲವಾದ ದೋಷವಿದೆ ಎಂದು ತಿಳಿಸಲಾಯಿತು. ಆ ಮೂಲಕ ಕಪ್ಪು ಅಮೆರಿಕನ್ನರ ವಂಶವಾಹಿನಿಯ ಬಗ್ಗೆ ಕಳಂಕವನ್ನು ಹಚ್ಚಲಾಗಿತ್ತು (D. Wilkinson, for whose benefit? Polities and Sickel cell; The black scholar, ೫(೮)೧೯೭೪).

ಈ ವಂಶವಾಹಿನಿಗಳ ಜ್ಞಾನವು ಎಷ್ಟೋವೇಳೆ ಬಹಳ ಉಪಯುಕ್ತವೂ ಆಗಿ ಪರಿಣಮಿಸಿದೆ. ಉದಾಹರಣೆಗೆ ಬುದ್ಧಿಮಾಂದ್ಯತೆಯಿಂದ ಕೂಡಿರುವ ಮಕ್ಕಳಿಗೆ ಸಂಬಂಧಿಸಿದ ಕಾಯಿಲೆಯಾದ ಡೌನ್ಸ್ ಸಿಂಡ್ರೋಮ್ ಎಂಬ ಕಾಯಿಲೆಯನ್ನು ಭ್ರೂಣದ ವಂಶವಾಹಿನಿಯನ್ನು ಪರೀಕ್ಷಿಸುವುದರ ಮೂಲಕ ಪತ್ತೆ ಹಚ್ಚಬಹುದು.ಆದರೆ ಇಲ್ಲಿ ಕಾಯಿಲೆಯ ತೀವ್ರತೆಯನ್ನು ತಿಳಿಯಲು ಸಾಧ್ಯವಾಗುವುದಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಆ ಮಗುವನ್ನು ಹೊತ್ತಿರುವ ಮಹಿಳೆಯೊಬ್ಬಳು ಅದನ್ನು ಉಳಿಸಿಕೊಳ್ಳಬೇಕೆ ಅಥವಾ ಬೇಡವೆ ಎಂದು ನಿರ್ಧರಿಸುತ್ತಾಳೆ. ಉಳಿಸಿಕೊಳ್ಳಲು ತಯಾರಾದಲ್ಲಿ ಅದಕ್ಕಾಗಿ ಮಾನಸಿಕವಾಗಿ ತಯಾರಾಗುತ್ತಾಳೆ. ಇಲ್ಲಿ ಸಂಪೂರ್ಣ ಸ್ವಾತಂತ್ರ್ಯವನ್ನು ಮಹಿಳೆಗೆ ನೀಡಲಾಗಿದೆ. ಇಂತಹ ಸಂದರ್ಭಗಳೇನೋ ಸರಿ, ಆದರೆ ಕ್ರಿಮಿನಲ್ ವರ್ತನೆಗಳಿಗೂ ವಂಶವಾಹಿನಿಗಳೇ ಪೂರ್ಣಜವಾಬ್ದಾರಿ ಎಂದು ಹೇಳುವುದು ಎಷ್ಟರ ಮಟ್ಟಿಗೆ ಸಮಂಜಸ? ಕ್ರಿಮಿನಲ್ ವ್ಯಕ್ತಿಗಳಲ್ಲಿ ಕೆಲವು ದೋಷಪೂರ್ಣ ವಂಶವಾಹಿನಿಗಳಿದ್ದರೂ ಅವುಗಳು ತಾನೇ ತಾನಾಗಿ ಪ್ರಕಟವಾಗುವುದಿಲ್ಲ. ಬದಲಿಗೆ ಸಂದರ್ಭೋಚಿತವಾಗಿ ಪ್ರಕಟವಾಗಬಹುದು. ಅಥವಾ ಆಗದೇ ಇರಲೂಬಹುದು. ಕ್ರಿಮಿನಲ್ ವರ್ತನೆಯು ವ್ಯಕ್ತಿಯೊಬ್ಬನು ಒತ್ತಡದ ಸನ್ನಿವೇಶದಲ್ಲಿದ್ದಾಗ ನಡೆಯುತ್ತದೆ. ಅಥವಾ ಹಣದಾಸೆಗಾಗಿ ಆತ ಪ್ರಜ್ಞಾಪೂರ್ವಕವಾಗಿಯೂ ಮಾಡಿರಬಹುದು. ಆದ್ದರಿಂದ ವ್ಯಕ್ತಿಯೊಬ್ಬನ ಕ್ರಿಮಿನಲ್ ವರ್ತನೆಗೆ ವಂಶವಾಹಿನಿಗಳೇ ಕಾರಣ ಎನ್ನುವುದು ಸರಿಯಲ್ಲ. ಹೀಗೆ ವಂಶವಾಹಿನಿಗಳ ಬಗ್ಗೆ ಚರ್ಚಿಸುತ್ತಾ ಹೋದಲ್ಲಿ ಅನೇಕ ಪ್ರಸಂಗಗಳನ್ನು ಚರ್ಚಿಸಬಹುದು.

ವಂಶವಾಹಿನಿಗಳ ಬಗ್ಗೆ ನಮ್ಮ ಜ್ಞಾನ ಮತ್ತು ಅರಿವು ಹೆಚ್ಚಾದಂತೆ, ವಂಶ ಸಂಬಂಧಿ ಗುಣ ದೋಷಗಳ ಬಗ್ಗೆ ತಿಳಿಯಬಹುದು ನಿಜ, ಆದರೆ ನಮ್ಮಲ್ಲನೇಕರು ಈಗಾಗಲೇ ಈ ದೋಷಗಳಿರುವ ವಂಶವಾಹಿನಿಗಳನ್ನು ಹೊತ್ತಿದ್ದೇವೆ ನಿಜ. ಆದರೆ ಅವು ನಮಗೆ ಯಾವ ತೊಂದರೆಯನ್ನು ಮಾಡಿಲ್ಲ ಎಂಬುದೂ ನಿಜ.

ವಂಶವಾಹಿನಿಯ ಬಗ್ಗೆ ಜಾಗರೂಕತೆ ಇರಬೇಕೆಂಬುದು ನಿಜವಾದರೂ ಅತಿಯಾದ ಜಾಗರೂಕತೆಯಾದಲ್ಲಿ ಜಗತ್ತಿನ ಯಾವ ಮಹಿಳೆಯೂ ಒಂಬತ್ತು ತಿಂಗಳು ಪೂರ್ಣವಾಗಿ ಗರ್ಭವನ್ನು ತನ್ನೊಡಲಿನಲ್ಲಿರಿಸಿಕೊಳ್ಳುವುದು ಸಾಧ್ಯವಿಲ್ಲವೆಂಬುದು ನಿಜ.

ವಂಶವಾಹಿನಿ ಅಧ್ಯಯನದ ಮುಂದುವರಿದ ಭಾಗ ವಂಶವಾಹಿನಿ ಚಿಕಿತ್ಸೆ(Gene theraphy) ವಂಶವಾಹಿನಿಯಲ್ಲಿ ದೋಷಗಳಿರುವುದನ್ನು ಪತ್ತೆ ಹಚ್ಚಲು ಕಲಿತ ಮಾನವ ಮುಂದಿನ ಹಂತಕ್ಕೆ ಯೋಚಿಸಿದ. ಈ ದೋಷಗಳನ್ನು ಸರಿಪಡಿಸಬಹುದೇ? ಸರಿಪಡಿಸ ಬಹುದಾದಲ್ಲಿ ಅದು ಯಾವ ರೀತಿಯಲ್ಲಿ ಮತ್ತು ಹೇಗೆ? ಮಾನವನ ಕುತೂಹಲ ಮತ್ತು ಅವಿರತ ಅಧ್ಯಯನದ ಫಲವೇ ವಂಶವಾಹಿನಿ ಚಿಕಿತ್ಸೆ. ಈ ವಿಧಾನದಲ್ಲಿ ತಾಯಿ ಗರ್ಭದಲ್ಲಿ ಭ್ರೂಣ ಫಲಿತ ಕೆಲ ದಿನಗಳಲ್ಲೇ ಆ ಭ್ರೂಣದಲ್ಲಿರುವ ವಂಶವಾಹಿನಿಗಳನ್ನು ಕೂಲಂಕುಶವಾಗಿ ಅಧ್ಯಯನ ನಡೆಸಲಾಗುವುದು. ಅಥವಾ ಬದಲಾಯಿಸಲಾಗುವುದು. ಇದರಿಂದ ಭ್ರೂಣವು ಉತ್ತಮವಾಗಿ ಬೆಳೆಯಲು ಅವಕಾಶ ಕಲ್ಪಿಸಲಾಗುವುದು. ಮೇಲ್ನೋಟಕ್ಕೆ ಈ ಚಿಕಿತ್ಸೆ ಬಹಳ ಸುಲಭವಾಗಿ ಕಂಡರೂ, ಇದು ಬಹಳ ದುಬಾರಿಯೂ, ಕಷ್ಟಕರವೂ ಅದುದಾಗಿದೆ. ಆದರೂ ಪ್ರಯೋಗಗಳು ಮುಂದುವರಿದೇ ಇವೆ. ಈ ಪ್ರಯೋಗಗಳಿಗೆ ಖಾಸಗಿ ಉದ್ಯಮಗಳು ಹಣಕಾಸನ್ನು ಒದಗಿಸುತ್ತಿರುವುದು ಬಹಳ ಆತಂಕಕಾರಿ ಸಂಗತಿಯಾಗಿದೆ. ಏಕೆಂದರೆ, ಯಾವುದೇ ಉದ್ಯಮ ತನಗೆ ಲಾಭವಿಲ್ಲದ ಸಂಶೋಧನೆಗಳಲ್ಲಿ ತೊಡಗಿಸಿಕೊಳ್ಳಲು ಇಷ್ಟಪಡುವುದಿಲ್ಲ. ಅದು ಅವರ ವಾಣಿಜ್ಯ ಧರ್ಮ. ಇದು ಹೀಗೆ ಮುಂದುವರೆದಲ್ಲಿ ಮಾನವ ಜನಾಂಗದ ಗುಣ ದೋಷಗಳು ಉದ್ಯಮದವರ, ಪಟ್ಟಭದ್ರರ ಕೈಯಲ್ಲಿ ಸಿಲುಕುವ ದಿನ ದೂರ ಇಲ್ಲ. ಏಕೆಂದರೆ, ಈ ವಿಧಾನ ಈಗಾಗಲೇ ಸಸ್ಯಗಳ ಸಂತಾನಾಭಿವೃದ್ಧಿಯಲ್ಲಿ ಯಶಸ್ಸನ್ನು ಕಂಡಿದ್ದು, ಬೀಜಗಳ ಉತ್ಪಾದನೆಯಲ್ಲಿ ಈ ವಿಧಾನವನ್ನು ಈಗಾಗಲೇ ಯಶಸ್ವಿಯಾಗಿ ಬಳಸಲಾಗುತ್ತದೆ. ಕೆಲವು ತಳಿಗಳನ್ನು ಪೇಟೆಂಟ್ (ತಮ್ಮ ಕಂಪನಿಯ ಹೆಸರಿನಲ್ಲಿ ದೃಢೀಕರಿಕೊಳ್ಳುವುದು ಮತ್ತು ಕಂಪನಿಯ ಅನುಮತಿ ಇಲ್ಲದೆ ಬೇರೆಯವರು ಬಳಸುವಂತಿಲ್ಲ) ಮಾಡಿಸಿಯೂ ಆಗಿದೆ. ಇದು ಮಾನವ ಜನಾಂಗಕ್ಕೂ ಮುಂದುವರಿದರೆ? ಇದು ಯೋಚಿಸಬೇಕಾದ ಪ್ರಶ್ನೆಯಲ್ಲವೇ?

ಜೀವ ತಂತ್ರಜ್ಞಾನ: ತಳಿ ವಿಜ್ಞಾನ ಮತ್ತು ತಂತ್ರಜ್ಞಾನದ ಅನ್ವಿತ ರೂಪವೇ ಜೀವ ತಂತ್ರಜ್ಞಾನ. ಜೀವ ತಂತ್ರಜ್ಞಾನ ಏನನ್ನು ಸಾಧಿಸಬಹುದು ಎನ್ನುವುದಕ್ಕೆ ಉದಾ: ಡಾಲಿ ಕುರಿಮರಿಯ ಸೃಷ್ಟಿ. ಡಾಲಿ ಈಗ ಸಾಕಷ್ಟು ಸುದ್ದಿ ಮಾಡಿದೆ. ನೈತಿಕ ಪ್ರಶ್ನೆಗಳನ್ನೂ ನಮ್ಮ ಮುಂದಿರಿಸಿದೆ. ಗಿಡ ಪ್ರಾಣಿಗಳಲ್ಲಿ ಯಶಸ್ಸನ್ನು ಕಂಡಿರುವ ಈ ವಿಧಾನ ಮನುಷ್ಯ ಮಾತ್ರರಲ್ಲಿ ಯಶಸ್ಸನ್ನು ಕಾಣುವ ದಿನಗಳು ದೂರವಿಲ್ಲ.

**ಮುಕ್ತಾಯ**

ಸೃಷ್ಟಿಯ ಬಗೆಗಿನ ಮಾನವನ ಕುತೂಹಲದಿಂದಾಗಿ ನಿಸರ್ಗ ತತ್ವಜ್ಞಾನ ಹುಟ್ಟಿಕೊಂಡಿತು. (Natural Philosophy) ನಂತರ ಇದು ವಿಜ್ಞಾನವಾಯಿತು. ವಿಜ್ಞಾನ ಬೆಳೆದಂತೆ ವಿವಿಧ ಶಾಖೆಗಳಾಯಿತು. ಪ್ರಾಚೀನ ಕಾಲದಲ್ಲಿ ವಿಜ್ಞಾನ ಮತ್ತು ಧರ್ಮ ಜೊತೆಯಾಗಿದ್ದವು. ಆದರೆ ಮಧ್ಯಕಾಲದ ಹೊತ್ತಿಗೆ ಯಾವುದೇ ಒಂದು ಚಿಂತನೆಯನ್ನು ಪ್ರಶ್ನೆ ಮಾಡುವುದು, ಪ್ರಯೋಗದ ಒರೆಗಲ್ಲಿಗೆ ಹಚ್ಚುವುದು ಪ್ರಾರಂಭವಾಯಿತು. ಇಲ್ಲಿ ವಿಜ್ಞಾನ ಮತ್ತು

ಧರ್ಮಗಳು ಬೇರೆಯಾಗಲು ಪ್ರಾರಂಭಿಸಿದವು. ಜೊತೆಗೆ ತಾಂತ್ರಿಕತೆಯು ಬೆಳೆಯಲಾರಂಭಿಸಿತು. ಕೈಗಾರಿಕಾಕ್ರಾಂತಿ ವಿಜ್ಞಾನದಿಂದ ತಂತ್ರಜ್ಞಾನ ಹುಟ್ಟಿದ್ದರ ಪ್ರತೀಕವಾಯಿತು. ಈ ಸಮಯದಲ್ಲಿ ಮಾನವನ ಅಭ್ಯುದಯಕ್ಕೆ ವಿಜ್ಞಾನ ಒಂದು ಸಾಧನ ಎಂದು ಭಾವಿಸಲಾಯಿತು. ಫ್ರೆಂಚ್ ತಾತ್ವಿಕ ಚಿಂತನೆಯ ಹಿನ್ನೆಲೆಯಲ್ಲಿ ವಿಜ್ಞಾನವೇ ಜ್ಞಾನ ಮತ್ತು ಇದರಿಂದಲೇ ಮನುಷ್ಯನ ಸರ್ವತೋಮುಖ ಅಭಿವೃದ್ಧಿ ಸಾಧ್ಯ ಎಂದು ಬಲವಾಗಿ ನಂಬಲಾಗಿತ್ತು.

ಮಧ್ಯಕಾಲ ಮಾನವ ಇತಿಹಾಸದ, ವಿಜ್ಞಾನ ಇತಿಹಾಸದ ಪ್ರಮುಖ ಘಟ್ಟ. ಏಕೆಂದರೆ ಅಲ್ಲಿಯವರಗೆ ಮಾನವನ ಕುತೂಹಲವನ್ನು ತಣಿಸಲು ಮಾತ್ರ ವಿಜ್ಞಾನ ಅನ್ವೇಷಣೆಗಳನ್ನು ಕೈಗೊಳ್ಳಲಾಗುತ್ತಿತ್ತು. ಆದರೆ ಇಲ್ಲಿಂದ ಮುಂದೆ ವಿಜ್ಞಾನದ ಆವಿಷ್ಕಾರಗಳು ತಂತ್ರಜ್ಞಾನದ ವಾಣಿಜ್ಯ ಉದ್ದೇಶಗಳನ್ನು ಗಮನದಲ್ಲಿರಿಸಿಕೊಂಡು ಮಾಡಲು ಪ್ರಾರಂಭವಾದವು. ಆದರೂ ವಿಜ್ಞಾನವನ್ನು ಬರೀ ಜಗತ್ತನ್ನರಿಯುವ ಕುತೂಹಲದಿಂದ ಬಳಸುತ್ತಿದ್ದವರೂ ಇದ್ದರು. ಉದಾಹರಣೆಗೆ ಮೈಕಲ್ ಫ್ಯಾರದೆ, ಮೇಡಂ ಕ್ಯೂರಿ ಮತ್ತು ನಮ್ಮವರೇ ಆದ ಜೆ.ಸಿ.ಬೋಸ್ ಮತ್ತಿತರರನ್ನು ಹೆಸರಿಸಬಹುದು.

ಆದರೆ ಇಂದಿನ ಪರಿಸ್ಥಿತಿ ವಿಭಿನ್ನವಾಗಿದೆ. ತಂತ್ರಜ್ಞಾನಕ್ಕಾಗಿ ವಿಜ್ಞಾನ ಎಂಬಂತಾಗಿದೆ. ವೈಜ್ಞಾನಿಕ ಸಂಶೋಧನೆಗಳು ಖಾಸಗಿ ಉದ್ಯಮಗಳಿಂದ ಪ್ರಾಯೋಜನಗೊಳ್ಳಬೇಕಾಗಿದೆ. ಏಕೆಂದರೆ ವೈಜ್ಞಾನಿಕ ಸಂಶೋಧನೆಗಳ ಯೋಜನೆ ಮತ್ತು ಗಾತ್ರ ಬಹಳ ದೊಡ್ಡದಾಗಿದೆ. ಆದ್ದರಿಂದ ಖಾಸಗಿ ಉದ್ಯಮಗಳಿಗೆ ಪ್ರಾಯೋಜನಗೊಳ್ಳುವುದು ಅನಿವಾರ್ಯವಾಗಿದೆ.

ಇದುವರೆಗೆ ವಿಜ್ಞಾನ- ತಂತ್ರಜ್ಞಾನ ತನ್ನ ಒಳಿತು ಕೆಡಕುಗಳೊಂದಿಗೆ ಬೆಳೆಯುತ್ತಾ ಬಂದಿದೆ. ಈ ಒಳಿತು ಕೆಡಕುಗಳ ಸಂಯೋಗವನ್ನು ಜೀವವಿಜ್ಞಾನ-ತಂತ್ರಜ್ಞಾನದ ಬೆಳವಣಿಗೆಯಲ್ಲೂ ಕಾಣುತ್ತೇವೆ. ಅಮ್ನಿಯೋ ಸಿಂಥಿಸಿಸ್, ಇನ್ ವಿಟ್ರೋ ಫರ್ಟಿಲೈಸೇಷನ್, ವಂಶವಾಹಿ ವಿಜ್ಞಾನ-ತಂತ್ರಜ್ಞಾನ-ಚಿಕಿತ್ಸೆ ಇವು ಮಾನವ ಸಮುದಾಯಕ್ಕೆ ಅದರಲ್ಲೂ ಮಹಿಳೆಯರಿಗೆ ಮಹೋನ್ನತ ಉಪಕಾರಗಳನ್ನು ಮಾಡಿವೆ. ಹಾಗೂ ಅಷ್ಟೇ ತೀವ್ರವಾದ ಸವಾಲನ್ನು ಒಡ್ಡಿವೆ.

ಹೆಣ್ಣು ಕೂಸೊಂದು ಜನಿಸಿದಾಗ ನಮ್ಮ ಸಮಾಜದಲ್ಲಿ ಹೆತ್ತ ತಾಯಿಯನ್ನು ಬಹಳ ಕೀಳಾಗಿ ಕಾಣಲಾಗುತ್ತಿತ್ತು. ಆಕೆ ಹೆಣ್ಣು ಹೆತ್ತಳೆಂದು ಅದಕ್ಕೆ ಆಕೆಯೇ ಕಾರಣವೆಂದು ಅತ್ತೆಯ ಕೈಯಲ್ಲಿ ಮೂದಲಿಕೆಯನ್ನು ಕೇಳಬೇಕಿತ್ತು. ತಮ್ಮ ವಂಶಕ್ಕೆ ಗಂಡು ಕೂಸೊಂದು ಬೇಕೆ ಬೇಕೆಂದು ಬಯಸಿ ಮಗನಿಗೆ ಎರಡನೇ ಮದುವೆ ಮಾಡಿದ ತಾಯಂದಿರಿಗೇನು ನಮ್ಮ ಸಮಾಜದಲ್ಲಿ ಕೊರತೆ ಇಲ್ಲ. ಆದರೆ, ಇಂದು ವೈಜ್ಞಾನಿಕ ಪ್ರಗತಿಯ ಹಿನ್ನೆಲೆಯಲ್ಲಿ ಹೆಣ್ಣು ಕೂಸಿನ ಜನನಕ್ಕೆ ಪುರುಷನೇ ಕಾರಣನೆಂದು ತಿಳಿದುಬಂದಿದೆ. ಹಾಗೂ ಈ ವಿಷಯ ಹಳ್ಳಿಯ ಮಟ್ಟದಲ್ಲೂ ತಿಳಿದಿದೆ. ಆದ್ದರಿಂದ ಹಳ್ಳಿಗಳಲ್ಲಿ ಈಗ ಸ್ವಲ್ಪ ಪ್ರಮಾಣದಲ್ಲಾದರೂ ಈ ಮೂದಲಿಕೆ ಕಡಿಮೆಯಾಗಿದೆ.

ಬಂಜೆತನ ಶಾಪ ಎಂದು ನಂಬಲಾಗುತ್ತಿತ್ತು. ಮಕ್ಕಳಾಗದ ಹೆಣ್ಣಂತೂ ಮಾನಸಿಕವಾಗಿ ನಲುಗುತ್ತಿದ್ದಳು. ಆಕೆಯ ಶೋಷಣೆಯ ಪ್ರಮಾಣ ತೀವ್ರವಾಗಿರುತ್ತಿತ್ತು. ಆದರೆ ಇಂದು IVF ತಂತ್ರಜ್ಞಾನದ ಸಹಾಯದಿಂದ ನೈಸರ್ಗಿಕವಾಗಿ ಮಕ್ಕಳಾಗದ ಎಷ್ಟೋ ದಂಪತಿಗಳ ಮನೆಗೆ ಕಂದಮ್ಮಗಳು ಬಂದಿವೆ. ಈ ತಂತ್ರಜ್ಞಾನ ದುಬಾರಿಯಾದುದರಿಂದ ಹಳ್ಳಿಗಳ ಮಟ್ಟದಲ್ಲಿ ಇದು ಇನ್ನೂ ಯಶಸ್ಸು ಕಂಡಿಲ್ಲವೆಂದು ಹೇಳಬಹುದು.

ಈ IVF ತಂತ್ರಜ್ಞಾನ ಮಕ್ಕಳಿಲ್ಲದ ದಂಪತಿಗಳಿಗೆ ಮಕ್ಕಳನ್ನು ಒದಗಿಸುವುದಿರಲಿ, ಸಮಾಜದಲ್ಲಿ ಇದು ಅವಿವಾಹಿತ ತಾಯಂದಿರ ಸಂಖ್ಯೆಯನ್ನು ಹೆಚ್ಚಿಸಿವೆ. ಮಹಿಳೆ, ಮದುವೆ ಎಂಬ ಸಾಮಾಜಿಕ ಒಪ್ಪಿಗೆಗೆ ಅರ್ಹವಾದ ಬಂಧನದಲ್ಲಿ ಕೂಡಿ ಮಕ್ಕಳನ್ನು ಪಡೆದು ಸುಖಸಂಸಾರಕ್ಕೆ ದಾರಿ ದೀಪವಾಗಬೇಕಾಗಿದ್ದವಳು ಇಂದು ತನಗೆ ಇದಾವ ಬಂಧನವೂ ಬೇಡ ಆದರೆ ತಾಯಿಯಾಗಬೇಕೆಂದು ಬಯಸುವ ಆಕೆಯ ಬಯಕೆಯನ್ನು ಹಕ್ಕೆಂದು ಪರಿಗಣಿಸಬಹುದೇ? ಪರಿಗಣಿಸುವುದಾದರೆ ಅದು ಸರಿಯೇ? ತಪ್ಪೇ? ಎಂಬುದು ಕೊನೆ ಮೊದಲಿಲ್ಲದ ಚರ್ಚೆಯ ವಿಷಯವಾಗಿ ಒಂದು ಸಮಸ್ಯೆಯೇ ಆಗಿದೆ.

ವಂಶವಾಹಿನಿ ವಿಜ್ಞಾನ-ತಂತ್ರಜ್ಞಾನ-ಚಿಕಿತ್ಸೆ ಇವುಗಳಿಂದ ಭ್ರೂಣಕ್ಕೆ ಮುಂದೊದಗ ಬಹುದಾದ ನಾನಾ ರೀತಿಯ ದೋಷಗಳನ್ನು ಸರಿಪಡಿಸಬಹುದು. ಆರೋಗ್ಯಪೂರ್ಣ ಶಿಶುವನ್ನು ಈ ಜಗತ್ತಿಗೆ ನೀಡಬಹುದು. ಆದರೆ ಈ ಮೇಲೆ ತಿಳಿಸಿದ ಕಲ್ಯಾಣ ಕಾರ್ಯಗಳಿಗಷ್ಟೇ ವಿಜ್ಞಾನ ಉಪಯೋಗವಾಗಿದ್ದಿದ್ದರೆ ಇಂದು ನಾವೆಲ್ಲರೂ ಸೇರಿ ವಿಷಯವನ್ನು ಚರ್ಚಿಸುವ ಅಗತ್ಯವೇ ಇರುತ್ತಿರಲಿಲ್ಲ. ಪ್ರಾಯಶಃ ಜಗತ್ತಿನಾದ್ಯಂತ ಇಂದು ರಾಮರಾಜ್ಯ ನಿರ್ಮಾಣವಾಗುತ್ತಿತ್ತು. ಆದರೆ ವಿಜ್ಞಾನ-ತಂತ್ರಜ್ಞಾನದ ವಾಣಿಜ್ಯ ಪ್ರಚ್ಛನ್ನತೆ (Commercial Potentiality) ಆಗಾಧವಾದದ್ದು. ಆದ್ದರಿಂದಲೇ ಇಂದು ವಿಜ್ಞಾನ ವಾಣಿಜ್ಯೀಕರಣಗೊಳ್ಳುತ್ತಿದೆ.

ಇನ್ನು ಈ ವಂಶವಾಹಿವಿಜ್ಞಾನ-ತಂತ್ರಜ್ಞಾನವಂತೂ ಸೃಷ್ಟಿಯ ಮೂಲಕ್ಕೆ ಕೈಹಾಕಿವೆ. ಹಾಗೂ ಯಶಕಂಡಿವೆ. ವಂಶವಾಹಿ ತಂತ್ರಜ್ಞಾನವನ್ನು ಬಳಸಿ ಈಗಾಗಲೇ ಒಮ್ಮೆ ಮೊಳಕೆಯೊಡೆದು ಗಿಡವಾದ ಮೇಲೆ ಆ ಗಿಡದಲ್ಲಿ ಹುಟ್ಟುವ ಬೀಜಗಳು ಮತ್ತೆ ಮೊಳಕೆಯೊಡೆಯದಂತೆ ತಡೆಗಟ್ಟುವಲ್ಲಿ (Terminator Gene Technology) ಬೀಜೋತ್ಪಾದನಾ ಸಂಸ್ಥೆಗಳು ಯಶಸ್ವಿಯಾಗಿವೆ. ಇದು ಈಗಾಗಲೇ ಅನ್ವಿತಗೊಂಡಿರುವ ಒಂದು ಉದಾಹರಣೆಯಷ್ಟೆ. ಆದರೆ ಇಂಥಹ, ಇದಕ್ಕೂ ಹೆಚ್ಚಿನ ತೀವ್ರತೆಯನ್ನು ಹೊಂದಿರುವ ಇನ್ನೂ ಹಲವು ಹತ್ತು ಪ್ರಯೋಗಗಳು ಸಾಕಾರಗೊಂಡಿವೆ.

ಜೀವ ತಂತ್ರಜ್ಞಾನದ ಸಾಧ್ಯ ಸಾಧ್ಯತೆಗಳ ಒಂದು ಉದಾಹರಣೆಯಾಗಿ ಡಾಲಿಯ ಸೃಷ್ಟಿಯ ಬಗ್ಗೆ ಈಗಾಗಲೇ ತಿಳಿಸಲಾಗಿದೆ. ಡಾಲಿಯನ್ನು ಸೃಷ್ಟಿಸಿದ ವಿಧಾನಕ್ಕೆ ಕ್ಲೋನಿಂಗ್ ಎನ್ನುತ್ತೇವೆ. ಸಸ್ಯ ಪ್ರಾಣಿಗಳಲ್ಲಿ ಈ ಕ್ಲೋನಿಂಗ್ ಯಶಸ್ಸು ಕಂಡಿದೆ. ಮಾನವರಲ್ಲಿ ಯಶ

ಕಾಣುವ ದಿನಗಳು ದೂರ ಇಲ್ಲ. ಹಾಗೇನಾದರೂ ಆಗಿಬಿಟ್ಟಲ್ಲಿ ಶಿಶು ಜನನಕ್ಕೆ ಇದುವರೆಗೆ ಅನಿವಾರ್ಯವಾಗಿರುವ ಅಂಡಾಣು-ವಿರ್ಯಾಣುವಿನ ಮಿಲನದ ಅಗತ್ಯತೆಯೂ ಇರುವುದಿಲ್ಲ.

ವಂಶವಾಹಿನಿಗಳ ಬಗೆಗಿನ ಜ್ಞಾನ ಹಾಗೂ ಅದನ್ನು ಕಸಿ ಮಾಡುವ ತಂತ್ರಜ್ಞಾನದಿಂದ ಬ್ರಹ್ಮ ಹಣೆಬರಹ ಬರೆಯುವ ದಿನಗಳು ದೂರವಾಗಿ ಒಬ್ಬ ಮಾನವ ಮತ್ತೊಬ್ಬ ಮಾನವನ ಹಣೆಬರಹ ಬರೆಯುವ ಕುಶಲತೆಯನ್ನು ಪಡೆಯುತ್ತಾನೆ. ಆಗ ಪುರುಷ ಮತ್ತು ಮಹಿಳೆ ಜೀವಂತ ಬೊಂಬೆಗಳಾಗುತ್ತಾರೆ ಅಥವಾ ಜೀವಶಾಸ್ತ್ರದ ಒಂದು ಅಂಗವಷ್ಟೇ ಆಗುತ್ತಾರೆ.

ವಂಶವಾಹಿನಿಗಳು ನಮ್ಮ ವಂಶದ ಇತಿಹಾಸ-ಗುಣ-ದೋಷಗಳನ್ನು ತಿಳಿಸುತ್ತವೆ. ಅದನ್ನು ಕಸಿಮಾಡುವ ತಂತ್ರಜ್ಞಾನದಿಂದ ಮುಂದಿನದು ಹೇಗಿರಬೇಕೆಂದು ನಾವೇ ನಿರ್ಧಾರಿಸುವಂತಾಗಿಬಿಟ್ಟರೆ ಭೂತ-ವರ್ತಮಾನ-ಭವಿಷ್ಯತ್ತುಗಳ ಕಲ್ಪನೆ ಕನಸುಗಳಿಗೆ ಬೆಲೆಯೇ ಇಲ್ಲದಂತಾಗಿ ಬಿಡುತ್ತದೆ. ನೈಸರ್ಗಿಕ ಮತ್ತು ಕೃತಕತೆಗಳ ಅಂತರ ಅಳಿಸಿ ಹೋಗುತ್ತದೆ. ಮಹಿಳೆ ತನ್ನ ಬಾಲ್ಯದಿಂದ ತಾಯ್ತನದ ಹಂತಕ್ಕೇರುವ ತನಕವು ವಿಜ್ಞಾನ ಮಧ್ಯ ಪ್ರವೇಶ ಮಾಡಬಹುದಾಗಿದೆ. ಅಂದರೆ ವಿಜ್ಞಾನದ ಪ್ರಗತಿಯ ಚೌಕಟ್ಟಿನಲ್ಲಿ ತಾಯ್ತನ ಮತ್ತು ಕುಟುಂಬ ವ್ಯವಸ್ಥೆ ಬೇರೆಯಾಗುತ್ತಿದೆಯೇ?

ಇದುವರೆಗಿನ ನಮ್ಮ ಚರ್ಚೆ, ವಿಶ್ಲೇಷಣೆಗಳನ್ನು ಒಟ್ಟಾರೆಯಾಗಿ ಕ್ರೋಢೀಕರಿಸುವುದಾದರೆ ಅದನ್ನು ಈ ಕೆಳಕಂಡಂತೆ ಹೇಳಲು ಇಚ್ಛಿಸುತ್ತೇವೆ.

೧. ನಮ್ಮ ನಿಲುವು ವಿಜ್ಞಾನದ ಪ್ರಗತಿಯಾಗಿದೆ. ಆದರೆ ಈ ಪ್ರಗತಿ ಸವಾಲುಗಳನ್ನೊಡ್ಡಿದೆ.
೨. ಹಿಂದಿನ ಮತ್ತು ಇಂದಿನ ಸವಾಲುಗಳಿಗೆ ಬಹಳ ವ್ಯತ್ಯಾಸವಿದೆ.
೩. ಹಿಂದೆಂದಿಗಿಂತಲೂ ಇಂದು ವಿಜ್ಞಾನ-ತಂತ್ರಜ್ಞಾನ ಮತ್ತು ಸಮಾಜದ ಸಂಬಂಧಗಳ ಬಗ್ಗೆ ಗಂಭೀರವಾಗಿ ಪರಿಗಣಿಸಬೇಕಾಗಿದೆ.

ಕೊನೆಯದಾಗಿ,

ವಿಜ್ಞಾನದಿಂದಾಗುವ ಒಳಿತನ್ನು ನಾವು ಹರ್ಷದಿಂದ ಸ್ವಾಗತಿಸುವಂತೆಯೇ ಅದರಿಂದಾಗುವ ಸಮಸ್ಯೆಗಳೆಡೆಗೂ ಗಂಭೀರವಾಗಿ ಚಿಂತಿಸುವುದು ಇಂದಿನ ಅತಿ ಅಗತ್ಯಗಳಲ್ಲಿ ಒಂದಾಗಿದೆ.

# ವಿಜ್ಞಾನ-ತಂತ್ರಜ್ಞಾನ ಮತ್ತು ಮಹಿಳೆ : ಒಂದು ಟಿಪ್ಪಣಿ

*ಜಿ. ರಾಮಕೃಷ್ಣ*

ಬಹಳ ವ್ಯಾಪಕವಾಗಿ ಚರ್ಚೆಗೆ ಬರಬಹುದಾದ ಈ ವಿಷಯದ ಮುಖ್ಯ ಆಶಯವನ್ನು ಒಂದೆರಡು ಕ್ಷೇತ್ರಗಳ ಸೀಮಿತ ಅಧ್ಯಯನ-ವಿವೇಚನೆಗಳಿಂದ ಶ್ರೀಮತಿ ಕಮಲ ಅವರು ಸಮಗ್ರವಾಗಿಯೇ ಚಿತ್ರಿಸಿದ್ದಾರೆ. ಮತ್ತು ಚರ್ಚೆಗೆ ಉತ್ಕೃಷ್ಟ ಗ್ರಾಸವನ್ನೊದಗಿಸಿದ್ದಾರೆ.

ಇಲ್ಲಿ ಸಾಮಾನ್ಯವಾಗಿ ಉದ್ಭವಿಸುವ ಒಂದು ಪ್ರಶ್ನೆಯೆಂದರೆ ವಿಜ್ಞಾನ-ತಂತ್ರಜ್ಞಾನಗಳ ಬೆಳವಣಿಗೆ ಮತ್ತು ಬಳಕೆಗೆ ಎಲ್ಲಿ ಮುಕ್ತಾಯ ಹಾಡಬೇಕು ಎನ್ನುವುದು. ಯಾವ ಹಂತದಲ್ಲಿ ಅದು ಅಪಾಯಕಾರಿಯಾಗುತ್ತದೆ ಮತ್ತು ಎಲ್ಲಿಯವರೆಗೆ ಅದು ಉಪಕಾರಿ ಸಾಧನವಾಗಿರುತ್ತದೆ ಎಂಬುದನ್ನು ಎಲ್ಲರೂ ಒಂದೇ ರೀತಿಯಲ್ಲಿ ವ್ಯಾಖ್ಯಾನಿಸುವುದಿಲ್ಲ. ಬೀಸುವ ಕಲ್ಲಿನಲ್ಲಿ ರಾಗಿ ಬೀಸಿ ಅನುಭವ ಇರುವವರು ಹಿಟ್ಟಿನ ಗಿರಣಿಯನ್ನು ಅಹಿತವೆಂದು ಮೂದಲಿಸುವುದು ಅಸಂಭವ. ಭತ್ತ ಕುಟ್ಟಿ ಅಭ್ಯಾಸವಿರುವವರು ಅಕ್ಕಿ ಮಾಡುವ ಯಂತ್ರದಿಂದ ದೂರವಿರಲೇಬೇಕೆಂಬ ಹಟ ತೊಡುವುದಿಲ್ಲ. ಚಿಕ್ಕವನಿದ್ದಾಗ ಅವೆರಡನ್ನೂ ಅಲ್ಪಸ್ವಲ್ಪ ಮಾಡಿರುವ ನನಗೆ ಥೇರೀಗಾಥಾದ ಥೇರಿಯರ ಬಿಡುಗಡೆಯ ಸಂಭ್ರಮದ ಮಾತುಗಳು ಅರ್ಥವಾಗುತ್ತವೆ. ಬೀಸುವಕಲ್ಲಿನ ಬವಣೆ, ಅಡಿಗೆಮನೆಯ ಹೊಗೆ ಮತ್ತು ಗೂನುಬೆನ್ನಿನ ಗಂಡನ ಭಾರದಿಂದ ಮುಕ್ತಳಾದ ಒಬ್ಬ ಥೇರೀ ಬೌದ್ಧ ಸಂಘವನ್ನು ಹೊಗಳುವಂತೆ ಇಂದಿನ ಮಹಿಳೆಯರು ಆಧುನಿಕ ತಂತ್ರಜ್ಞಾನದ ಹಲವು ಸಾಧನೆಗಳಿಗೆ ಮೆಚ್ಚಿಗೆ ತೋರಿದರೆ ಆಶ್ಚರ್ಯವೇನೂ ಇಲ್ಲ.

ವಿಜ್ಞಾನ-ತಂತ್ರಜ್ಞಾನಗಳ ಆವಿಷ್ಕಾರಗಳ ದುರುಪಯೋಗವು ಕೇವಲ ಮಹಿಳೆಯರ ವಲಯಕ್ಕೆ ಸೀಮಿತವಾಗಿಲ್ಲ. ಪೋಖ್ರಾನ್ ಅಣು ಆಸ್ಫೋಟದಂತಹ ಕರಾಳ ಪ್ರಯೋಗ ನಡೆದಿರುವ ಸಂದರ್ಭದಲ್ಲಿ ಇದಕ್ಕೆ ಹೆಚ್ಚಿನ ವಿವರಣೆ ಅಗತ್ಯವಿಲ್ಲ. ಎಲ್ಲವನ್ನೂ ಅಧಿಕವಾಗಿ ಮತ್ತು ಜಾಗ್ರತೆಯಾಗಿ ಉತ್ಪಾದಿಸಿಬಿಡಬೇಕೆಂಬ ಗುರಿ ಕೃಷಿ ಕ್ಷೇತ್ರದಲ್ಲಿ ಹೆಚ್ಚಾಗಿರುವುದನ್ನು ನಾವು ಗಮನಿಸಿಲ್ಲವೆ? ಹಾಲು, ಹತ್ತಿ, ಗೋಧಿ, ಎಲ್ಲವನ್ನೂ ಹೊಸ ತಂತ್ರಜ್ಞಾನದ ಅಳವಡಿಕೆಯಿಂದ ಹೆಚ್ಚಾಗಿ ಉತ್ಪಾದಿಸಬೇಕು; ಮೂರು ವರ್ಷದೊಳಗಾಗಿ ತೆಂಗಿನಮರ ಫಲ ನೀಡುವಂತಾಗಬೇಕು. ಅದು ಲಾಭದ ಪ್ರಶ್ನೆ. ಅದರಿಂದ ಉಂಟಾಗುವ ಬೇರೆ ಪರಿಣಾಮಗಳನ್ನು ಗಂಭೀರವಾಗಿ ಪರಿಗಣಿಸುವಷ್ಟು ವ್ಯವಧಾನ ಮತ್ತು ಸಹನೆ ಇಲ್ಲ- ಉದಾಹರಣೆಗೆ, ಅಧಿಕ ಹಾಲಿನ ಉತ್ಪಾದನೆ; ಹಸು-ಎಮ್ಮೆಗಳಲ್ಲಿ ಹೆಚ್ಚಿನ ಹಾಲು

ಉತ್ಪಾದಿಸಲು ಆಕ್ಸಿಟಾಸಿನ್ ಎಂಬ ರಾಸಾಯನಿಕದ ಬಳಕೆ ಇದೆ. ದೆಹಲಿ ಉಚ್ಚನ್ಯಾಯಾಲಯವು ಒಂದು ತಜ್ಞರ ಸಮಿತಿಯನ್ನು ನೇಮಿಸಿ ಇದರ ಪರಿಣಾಮವನ್ನು ಅಧ್ಯಯನ ಮಾಡಲು ತಿಳಿಸಿತ್ತು. ಆ ವರದಿಯ ಪ್ರಕಾರ ಹಾಲಿನಲ್ಲಿ ಉಳಿದು ಬಿಡುವ ಆಕ್ಸಿಟಾಸಿನ್ ಒಂದು "ನಿಧಾನ ವಿಷ". ಅದನ್ನು ತಯಾರಿಸುವುದು ಹಾರ್ಮೋನುಗಳ ಸಂಕಲನದಿಂದ. ಹಾಲಿನಲ್ಲಿ ಅದು ಸೇರದೆಯೇ ಇರಲು ಸಾಧ್ಯವಿಲ್ಲ. ಅದರ ಸೇವನೆಯಿಂದ ಗರ್ಭಕೋಶ, ಪಿತ್ತಜನಕಾಂಗ ಮತ್ತು ಮೂತ್ರಕೋಶಗಳಿಗೆ ಕ್ರಮೇಣ ರೋಗ ಅಂಟುತ್ತದೆಂದು ವರದಿಯು ತಿಳಿಸಿತು. ಆದರೆ ಅಧಿಕ ಉತ್ಪಾದನೆಯ ಕಾಹಿಲೆ ನಮ್ಮನ್ನು ಆವರಿಸಿದಾಗ ಬೇರೆ ರೋಗಗಳ ಬಗೆಗಿನ ಚಿಂತೆ ಅಷ್ಟಾಗಿ ಕಾಡುವುದಿಲ್ಲವೇನೊ!

ಮಹಿಳೆಯರೆಂಬ ಒಂದೇ ಕಾರಣದಿಂದ ಪ್ರತಿಕೂಲ ಸನ್ನಿವೇಶಗಳನ್ನು ಎದುರಿಸ ಬೇಕಾಗಿಬಂದ ಮಹಿಳಾ ಸಂಶೋಧಕರ ದೊಡ್ಡ ಪಟ್ಟಿಯನ್ನು ಮಂಡಿಸಲು ಸಾಧ್ಯವಿದೆ. ಸಸ್ಯಜೀವಶಾಸ್ತ್ರಜ್ಞೆ ಬಾರ್ಬರಾ ಮ್ಯಾಕ್ಲಿಂಟಾಕ್ ಅಂಥವರಲ್ಲಿ ಒಬ್ಬಳು. ೧೯೨೩ರಷ್ಟು ಹಿಂದೆಯೇ ಆಕೆ ಮೆಕ್ಕೆಜೋಳದ ಅಧ್ಯಯನ ಮಾಡಿ ಅದರ ಜೀನ್ ಬಗ್ಗೆ ವಿವರಗಳನ್ನು ನೀಡಿದ್ದಳು. "ಪ್ಲಾಂಟ್ ಬ್ರೀಡರ್ ಟೆಕ್ನಾಲಜಿ"ಎಂದು ಈಗ ಹೆಸರುವಾಸಿಯಾಗಿರುವ ತಂತ್ರಜ್ಞಾನದ ಮೊಳಕೆ ಆಕೆಯ ಸಂಶೋಧನೆಯಲ್ಲಿ ಪ್ರಾಪ್ತವಾಗಿತ್ತು. ಆದರೆ ಆಕೆಗೆ ಅಮೆರಿಕಾದ ಕಾರ್ನೆಲ್ ವಿಶ್ವವಿದ್ಯಾಲಯವು ಕಾಯಂ ಸ್ಥಾನ ನೀಡಲು ನಿರಾಕರಿಸಿತ್ತಂತೆ. ಆಕೆಯ ಸಂಶೋಧನೆಗಳನ್ನು ಮುಂದುವರಿಸಲು ಎಲ್ಲೆಲ್ಲೋ ಫೆಲೋಷಿಪ್ ಅರಸಿಕೊಂಡು ಹೋಗುವುದು ಆಕೆಗೆ ಅನಿವಾರ್ಯವಾಯಿತಂತೆ. ಆದರೆ ೧೯೪೪ರಲ್ಲಿ ಜೆನೆಟಿಕ್ ಸೊಸೈಟಿಯ ಅಧ್ಯಕ್ಷೆಯನ್ನಾಗಿ ಆಕೆಯನ್ನು ಆಯ್ಕೆ ಮಾಡಿದರು. ೧೯೪೦ಕ್ಕೂ ಮುಂಚೆಯೇ ಆಕೆ ಡಿಎನ್ಎ ಬಗೆಗೆ ಹತ್ತಾರು ಕುತೂಹಲಕಾರಿ ಸಂಗತಿಗಳನ್ನು ಹೊರಗೆಡಹಿದ್ದಳಂತೆ. ಮಹಿಳೆಯೆಂಬ ಒಂದೇ ಪೂರ್ವಗ್ರಹವು ಆಕೆಯ ಸಂಶೋಧನೆಗಳಿಗೆ ಪುಷ್ಟಿ ದೊರೆಯಲು ವಿಳಂಬವನ್ನುಂಟು ಮಾಡಿತು.

ತಂತ್ರಜ್ಞಾನದ ಪ್ರಯೋಗವನ್ನು ಕುರಿತಂತೆ ತಿಳಿವಳಿಕೆಯ ಅಭಾವವೇನೂ ಇಲ್ಲ; ಆದರೆ ಅದಕ್ಕೆ ಗುರಿಯಾಗುತ್ತಿರುವವರು ಮಹಿಳೆಯರು, ಅವರಲ್ಲೂ ಬಡ, ಅನಕ್ಷರಸ್ಥ, ಕೆಳಜಾತಿಯ ಮಹಿಳೆಯರು ಎಂಬ ಕಾರಣದಿಂದ ಅದನ್ನು ಉಪೇಕ್ಷಿಸಲಾಗುತ್ತಿದೆ. ೧೯೭೫ರ ಅವಧಿಯಲ್ಲಿ ಸಂಜಯಗಾಂಧಿ ನೇತೃತ್ವದಲ್ಲಿ ಮುಸಲ್ಮಾನ ಮಹಿಳೆಯರ ಮೇಲೆ ಸಂತಾನ ನಿಯಂತ್ರಣ ಕ್ರಮಗಳನ್ನು ಬಲವಂತವಾಗಿ, ಅನಾರೋಗ್ಯಕರ ಹಿನ್ನೆಲೆಯಲ್ಲಿ ಹೇಗೆ ಹೇರಲಾಯಿತೆಂದು ಸ್ಮರಿಸಿದರೆ ಅದರ ಒಂದು ಚಿತ್ರಣ ದೊರೆಯುತ್ತದೆ. ಈಚಿನ ವರ್ಷಗಳಲ್ಲಿ ಕ್ವಿನಾಕ್ರೀನ್ ನ ಬಳಕೆ ಹೇಗೆ ಸಾಗುತ್ತಿದೆಯೆಂದು ಗಮನಿಸಿದರೆ ಅದೇ ಚಿತ್ರ ಮರುಕಳಿಸುತ್ತಿರುವುದು ಚೆನ್ನಾಗಿ ಗೊತ್ತಾಗುತ್ತದೆ. ೧೯೨೦ರ ಸುಮಾರಿನಲ್ಲಿ ಈ ಗುಳಿಗೆ ಗಳನ್ನು ಮಲೇರಿಯಾದ ಉಪಶಮನಕ್ಕಾಗಿ ಬಳಸಲಾಗುತ್ತಿತ್ತೆಂದು ಹೇಳುತ್ತಾರೆ. ಅದನ್ನು

೯೦ರ ದಶಕದಲ್ಲಿ ಗರ್ಭನಿರೋಧಕ ತಂತ್ರಕ್ಕೆ ಅಳವಡಿಸಿಕೊಳ್ಳಲಾಯಿತು. ಅದನ್ನು ಹಾಗೆ ಬಳಸಬಹುದೇ ಎಂದು ಡಾ. ಅಶೋಕ ಮಿತ್ರ ಪಾರ್ಲಿಮೆಂಟಿನಲ್ಲಿ ಕೇಳಿದ ಒಂದು ಪ್ರಶ್ನೆಗೆ ಸರ್ಕಾರ ಕೊಟ್ಟಿದ್ದ ಉತ್ತರ ಇದು: "ಭಾರತದ ಡ್ರಗ್ ಕಂಟ್ರೋಲರ್ ಜನರಲ್ ರು ಇದರ ಪ್ರಾಯೋಗಿಕ ಬಳಕೆಗೆ ಯಾರಿಗೂ ಪರವಾನಗಿ ನೀಡಿಲ್ಲ, ಅದನ್ನು ಉತ್ಪಾದಿಸಲು ಯಾವ ಔಷಧಿ ತಯಾರಿಕೆಯ ಕಂಪೆನಿಗೂ ಲೈಸೆನ್ಸ್ ನೀಡಲಾಗಿಲ್ಲ ಮತ್ತು ಅದನ್ನು ಆಮದು ಮಾಡಿಕೊಳ್ಳಲಾಗುತ್ತಿಲ್ಲ". ಹಾಗಿದ್ದರೆ ಅದು ಬಂದದ್ದೆಲ್ಲಿಂದ? ಆಕಾಶದಿಂದ ಉದುರಿತೆ? ಅದನ್ನು ಬಳಸುತ್ತಿರುವವರ ಮೇಲೆ ಯಾವ ಕ್ರಮ ಜರುಗಿಸಲಾಗಿದೆ? ಅದನ್ನು ಪ್ರಯೋಗಿಸುತ್ತಿರುವುದು ಯಾರ ಮೇಲೆ? ಮಹಿಳೆಯರ ಮೇಲೆ, ಬಡ-ಅನಕ್ಷರಸ್ಥ ಮಹಿಳೆಯರ ಮೇಲೆ. ೬೦ರ ದಶಕದ ಅಂತ್ಯದ ವೇಳೆಗೆ ಜೈಮ್ ಜಿಪ್ಪರ್ ಎಂಬ ಚಿಲಿ ದೇಶದ ಒಬ್ಬ ವಿಜ್ಞಾನಿ ಅದನ್ನು ಗರ್ಭಕೋಶದೊಳಕ್ಕೆ ಅಳವಡಿಸುವುದರಿಂದ ಗರ್ಭನಾಳ ಮುಚ್ಚಿಕೊಳ್ಳುತ್ತದೆಂಬ ಸಾಧ್ಯತೆಯನ್ನು ಸಂಶೋಧನೆಯ ಮೂಲಕ ತಿಳಿಸಿಕೊಟ್ಟನಂತೆ. ಅದಕ್ಕೆ ಮುಂಚೆ ಇದೇ ಪರಿಣಾಮವನ್ನು ಪಡೆಯಲು ಫಾರ್ಮಲಿನ್, ಟೆಟ್ರಟಸೈಕ್ಲಿನ್, ಮುಂತಾದ ಗುಳಿಗೆಗಳನ್ನು ಬಳಸುತ್ತಿದ್ದರಂತೆ. ಅವುಗಳ ಬಳಕೆಯಿಂದಾಗಿ ಗರ್ಭಕೋಶದಲ್ಲಿ ಉರಿ, ಕೊರೆತ ಉಂಟಾಗುತ್ತದೆಂದು ಕಂಡುಕೊಳ್ಳಲಾಗಿತ್ತು. ಮ್ಯೂಕಸ್ ಪದರಗಳಲ್ಲಿ ಊರಿಯೂತ ಕಂಡುಬಂದು ಕ್ರಮೇಣ ಅದು ಗಾಯದ ಗಡ್ಡೆಯಾಗಿ ಪರಿಣಮಿಸುತ್ತಿತ್ತು. ಕ್ವಿನಾಕ್ರೀನ್‌ನ ಬಳಕೆಯೂ ಇದೇ ಪರಿಣಾಮಗಳನ್ನು ನೀಡಿದೆ. ಆದರೂ ಸಂತಾನ ನಿರೋಧವು ಪ್ರಮುಖ ಆಶಯವಾದ್ದರಿಂದ ಬಡ-ಅನಕ್ಷರಸ್ಥ ಮಹಿಳೆಯರ ನೋವು-ಗಾಯಗಳು ಗೌಣವಾಗಿಬಿಟ್ಟಿತು. ನಮ್ಮ ಅನೇಕ ವೈದ್ಯರು ದೇಶದ ಸೇವೆಗಾಗಿ ಈ ಮಹಿಳೆಯರ ಆರೋಗ್ಯವನ್ನು ಬಲಿ ಕೊಡಲು ಹಿಂಜರಿಯಲಿಲ್ಲ. ಕ್ವಿನಾಕ್ರೀನ್ ನ ಬಳಕೆಯು ಹೀಗೆ ನೋವು-ಗಾಯಗಳಿಗೆ ಎಡೆಮಾಡಿಕೊಡುತ್ತದೆಂದು ಎಕ್ಸ್ -ರೇ ಸಾಧನಗಳಿಂದ ಡಾ.ಮರ್ಚೆಂಟ್ ಎಂಬ ವೈದ್ಯರು ಪ್ರಕಾಶಪಡಿಸಿದ್ದರು. ಆದರೂ ಬೇರೆ ಅಧ್ಯಯನ-ಪ್ರಯೋಗಗಳಿಗೆ ಹೋಗದೆ ಕ್ವಿನಾಕ್ರೀನಿನ ಬಳಕೆಯನ್ನು ಕಾನೂನಿಗೆ ವಿರೋಧವಾಗಿ ಜಾರಿಗೆ ತರಲಾಯಿತು! ಇದು ಹಳೆಯ ಔಷಧಿ, ಇದಕ್ಕೇಕೆ ಹೊಸ ಸಂಶೋಧನೆ ಬೇಕು ಎನ್ನುತ್ತಾರೆ ನಮ್ಮ ಕೆಲವು ವೈದ್ಯರು. ದೆಹಲಿಯ ಡಾ.ಜೆ.ಕೆ.ಜೈನ್, ಬೆಂಗಳೂರಿನ ಡಾ.ಪ್ರವೀಣ ಕಿಣಿ, ಡಾ.ಸೀತಾ ಭತೀಜಾ ಮುಂತಾದವರು 'ಚಿಪ್ ಟ್ರಸ್ಟ್' ಎಂಬ ಒಂದು ಸಂಸ್ಥೆಯನ್ನು ಹುಟ್ಟಿಹಾಕಿಕೊಂಡು ಈ ಪ್ರಯೋಗವನ್ನು ಮಾಡುತ್ತಿದ್ದರೆಂದು ಸ್ವತಃ ಅವರ ಹೇಳಿಕೆಗಳಿಂದಲೇ ತಿಳಿದುಕೊಂಡದ್ದಾಗಿದೆ.(ಸಂತಾನ ನಿರೋಧಕ, ಆರೋಗ್ಯಕರ, ನವೀನ ಮಾದರಿ ಪ್ರಯೋಗ ಎಂಬುದು 'ಚಿಪ್ 'ಎಂಬುದರ ವಿಶಾಲಾರ್ಥ). ಒಟ್ಟಿನಲ್ಲಿ ಸಂತಾನ ನಿಯಂತ್ರಣವಾದರೆ ಸರಿ, ಕೆಲವು ಅಮಾಯಕ ಮಹಿಳೆಯರಿಗೆ ನೋವುಂಟಾದರೆ ಏನು ದೊಡ್ಡ ವಿಷಯ ಎಂಬುದು ಇವರ ವಾದದ ತಿರುಳು. ತಂತ್ರಜ್ಞಾನವನ್ನು ಮಹಿಳೆಯ ವಿರುದ್ಧ ಬಳಸುವುದರಲ್ಲಿ ಇದು ಒಂದು ಜೀವಂತ ಸಮಕಾಲೀನ ನಿದರ್ಶನ ಅಷ್ಟೆ.

ನಮ್ಮ ಕಾನೂನು ಮಹಿಳೆಯರಿಗೆ ಎಂತಹ ರಕ್ಷಣೆಯನ್ನೊದಗಿಸುತ್ತದೆ ಎಂಬುದನ್ನು ಹೆಚ್ಚಿಗೆ ಪ್ರಸ್ತಾಪಿಸಬೇಕಾಗಿಲ್ಲ. ದಿನನಿತ್ಯದ ಅನುಭವದಿಂದ ಅದನ್ನು ತಿಳಿಯಬಹುದು. ನ್ಯಾಯಾಲಯಗಳು ಕಾನೂನನ್ನು ಎತ್ತಿಹಿಡಿದಿರುವ ವೈಖರಿಯನ್ನು ನೋಡಿದರೆ ಅಷ್ಟೇನೂ ಆಶಾದಾಯಕವಾದ ಭವಿಷ್ಯ ಕಾಣುವುದಿಲ್ಲ. ಒಂದೆರಡು ನಿದರ್ಶನಗಳನ್ನು ನೋಡೋಣ:(ಅ) ದೆಹಲಿಯ ಉಚ್ಚನ್ಯಾಯಾಲಯದಲ್ಲಿ ೧೯೫೫ರ ಹಿಂದು ವಿವಾಹ ಕಾಯ್ದೆಯಡಿಯಲ್ಲಿ ಒಂದು ವಿವಾದ ದಾಖಲಾಗಿತ್ತು. ೧೯೮೪ರಲ್ಲಿ ಒಬ್ಬ ವಿವಾಹಿತ ಮಹಿಳೆಯು ತನ್ನ ಗಂಡನ ಅನುಮತಿಯಿಲ್ಲದೆ ಗರ್ಭಪಾತ ಮಾಡಿಸಿಕೊಂಡಿದ್ದಳು. ಅದು ಗಂಡನ ಬಗೆಗೆ ಆಕೆಯ ಕ್ರೂರ ನಡತೆಯನ್ನು ತೋರಿಸುತ್ತದೆಯೆಂಬ ಕಾರಣದಿಂದ ನ್ಯಾಯಾಲಯವು ವಿವಾಹ ವಿಚ್ಛೇದನೆಯನ್ನು ಜಾರಿ ಮಾಡಿತು. ಅದು ಆ ಮಹಿಳೆಗೆ ತಕ್ಕ ಶಿಕ್ಷೆಯೆಂದು ನ್ಯಾಯಾಲಯ ಅಭಿಪ್ರಾಯಪಟ್ಟಿತು. (ಆ) ೧೯೭೩ರಲ್ಲಿ ಮದ್ರಾಸ್ ಉಚ್ಚನ್ಯಾಯಾಲಯದೆದುರು ಒಬ್ಬ ೧೬ ವರ್ಷದ ಬಾಲಕಿಯ ತಂದೆ ದೂರನ್ನು ದಾಖಲು ಮಾಡಿದ್ದ. ಅವಳು ಅವಿವಾಹಿತ ಬಾಲಕಿ. ಅವಳು ಮಗುವನ್ನು ಹೆರಲು ಇನ್ನೂ ಬಹಳ ಚಿಕ್ಕವಳಾದ್ದರಿಂದ ಗರ್ಭಪಾತ ಮಾಡಿಸಿಕೊಳ್ಳಲು ಆದೇಶಿಸಬೇಕೆಂದು ಅವನು ನ್ಯಾಯಾಲಯವನ್ನು ಕೋರಿದ್ದ. ಬಾಲಕಿಯು ತನ್ನ ವಕೀಲರ ಮೂಲಕ ಅದನ್ನು ವಿರೋಧಿಸಿ ತನ್ನ ಜೀವ ಮತ್ತು ಸ್ವಾತಂತ್ರ್ಯದ ಹಕ್ಕುಗಳು ಮೂಲಭೂತ ಹಕ್ಕುಗಳಾದ್ದರಿಂದ ತಾನು ಮಗುವನ್ನು ಹೆರುವುದನ್ನು ಯಾರೂ ತಪ್ಪಿಸುವಂತಿಲ್ಲವೆಂದು ವಾದಿಸಿದಳು. ಸಂವಿಧಾನದಲ್ಲಿ ಮೂಲಭೂತ ಹಕ್ಕುಗಳ ಅನುಭೋಗಕ್ಕೆ ವಯಸ್ಸಿನ ಪರಿಮಿತಿಯನ್ನೇನೂ ವಿಧಿಸಿಲ್ಲವಾದ್ದರಿಂದ ಮಗುವನ್ನು ಹೆರಲು ಅಡ್ಡಿಪಡಿಸುವಂತಿಲ್ಲವೆಂದೂ ಅವಳು ವಾದಿಸಿದಳು. ಬಾಲಕಿಯ ಅಭಿಪ್ರಾಯವನ್ನು ನ್ಯಾಯಾಲಯವು ಎತ್ತಿ ಹಿಡಿಯಿತು. ಆದರೆ ಹಾಗೆ ಮಾಡುವಾಗ ಎರಡು ಹೇಳಿಕೆಗಳನ್ನು ನೀಡಿತು: ೧. ತಾಯಿಯು ಚಿಕ್ಕವಳಿದ್ದಷ್ಟು ಹೆರುವ ಕ್ರಿಯೆ ಸಾಂಗವಾಗಿ ನೆರವೇರುತ್ತದಾದ್ದರಿಂದ ಅಪ್ರಾಪ್ತ ವಯಸ್ಸಿನವಳೆಂದು ವಾದ ಹೂಡಿದ ತಂದೆಯ ಅಭಿಪ್ರಾಯಕ್ಕೆ ಮನ್ನಣೆ ನೀಡಲಾಗುವುದಿಲ್ಲ ಮತ್ತು ೨. ತಾಯಿಯ ಗರ್ಭದಲ್ಲಿರುವ ಜೀವವನ್ನು ನಾಶಪಡಿಸಲು ಯಾವ ನೈತಿಕ ಪರವಾನಗಿಯೂ ಇರಲು ಸಾಧ್ಯವಿಲ್ಲ.

ಅಂದರೆ, ಪೋಪನ ಮಾದರಿಯಲ್ಲಿ ಗರ್ಭಪಾತವನ್ನು ವಿರೋಧಿಸಿದ ನ್ಯಾಯಾಲಯವು ನೂತನ ತಂತ್ರಜ್ಞಾನಕ್ಕೆ ಯಾವ ಬೆಲೆಯನ್ನೂ ನೀಡಲಿಲ್ಲ. ಎರಡನೆಯದಾಗಿ, ಒಬ್ಬ ವ್ಯಕ್ತಿಯ ಹಕ್ಕನ್ನು ಮಾನ್ಯ ಮಾಡಲು ನ್ಯಾಯಾಲಯವು ತಾಯಿತನದ ಬಗೆಗಿನ ಸಾಂಪ್ರದಾಯಿಕ ನಂಬಿಕೆಯನ್ನೇ ಸಂಪೂರ್ಣವಾಗಿ ಅವಲಂಬಿಸಿತು. ವಿಜ್ಞಾನ-ತಂತ್ರಜ್ಞಾನಗಳ ಉಪಯೋಗವನ್ನು ಭಾರತೀಯ ಮಹಿಳೆ ಯಾವ ರೀತಿಯಲ್ಲೇ ಆಗಲಿ ಪಡೆಯಬೇಕಾದರೆ ಮೊದಲು ಸಂಪ್ರದಾಯದ ಚೌಕಟ್ಟನ್ನು ಮುರಿದು ಹೊರಗೆ ಬರಬೇಕಾದ ಅಗತ್ಯವನ್ನು ಇದು ಒತ್ತಿ ಹೇಳುತ್ತದೆ.

ದೆಹಲಿಯ ಒಂದು ಮಹಿಳಾ ಸಂಘಟನೆಯು ೧೯೮೬ರಲ್ಲಿ ಸರ್ವೋಚ್ಚ ನ್ಯಾಯಾಲಯದ ಮುಂದೆ ಅಹವಾಲೊಂದನ್ನು ಸಲ್ಲಿಸಿ ಆಗ್ಗೆ ಗರ್ಭನಿರೋಧಕವಾಗಿ ನೀಡಲಾಗುತ್ತಿದ್ದ ನೆಟ್ ಎನ್ ಚುಚ್ಚುಮದ್ದನ್ನು ಪ್ರತಿಬಂಧಿಸಬೇಕೆಂದು ಕೇಳಿಕೊಂಡಿತು. ಬೇರೆಷ್ಟೋ ದೇಶಗಳಲ್ಲಿ ಅದು ಅಸಮರ್ಪಕ ಹಾಗೂ ಅಪಾಯಕಾರಿ ಚುಚ್ಚುಮದ್ದೆಂದು ನಿರಾಕರಿಸಲ್ಪಟ್ಟಿತ್ತಾದ್ದರಿಂದ ಭಾರತದಲ್ಲೂ ಅಂತಹ ನಿಷೇಧವನ್ನು ಜಾರಿಗೊಳಿಸಬೇಕೆಂಬುದು ಇದರ ಆಶಯ. ಆದರೆ ನ್ಯಾಯಾಲಯವು ಅದಕ್ಕೆ ಸೊಪ್ಪು ಹಾಕಲಿಲ್ಲ. ಇದರಿಂದ ಒಂದು ದೊಡ್ಡ ಪೆಟ್ಟು ಬಿದ್ದು ಮುಂದೆ ತಂತ್ರಜ್ಞಾನದ ದುರ್ಬಳಕೆಯು ಮಹಿಳೆಯರ ವಿರುದ್ಧ ಪರಾಕಾಷ್ಠೆಯನ್ನು ಮುಟ್ಟಿತು. ಆಮ್ನಿಯೋಸೆಂಟಿಸಿಸ್ ನ ವಿಧಾನದಿಂದ ಹೆಣ್ಣುಮಕ್ಕಳ ಭ್ರೂಣ ಹತ್ಯೆಯು ವಿಪರೀತವಾಗಿ ಹೆಚ್ಚಿದ್ದು ಈ ಹಿನ್ನೆಲೆಯಲ್ಲಿ. ಪರಿಣಾಮವಾಗಿ ೧೯೮೮ರಲ್ಲಿ ಆ ವಿಧಾನವನ್ನು ಕೈಬಿಡ ಬೇಕೆಂಬ ಆಜ್ಞೆಯನ್ನು ಮಹಾರಾಷ್ಟ್ರ, ಪಂಜಾಬ್ ಮತ್ತು ಹರಿಯಾಣ ರಾಜ್ಯಗಳಲ್ಲಿ ಹೊರಡಿಸಲಾಯಿತು ಮತ್ತು ರಾಷ್ಟ್ರಮಟ್ಟದಲ್ಲಿ ಅಂಥದೇ ಆಜ್ಞೆಯನ್ನು ೧೯೯೨ರಲ್ಲಿ ಹೊರಡಿಸಲಾಯಿತು. ಮಹಿಳೆಯ ಬಗ್ಗೆ ಎಂತಹ ಉಪೇಕ್ಷೆ ಇದೆಯೆಂಬುದಕ್ಕೆ ಇದೊಂದು ನಿದರ್ಶನ ಸಾಕು. ಆ ವಿಧಾನವು ಕಾನೂನುಬಾಹಿರವಾಗಿ ಎಲ್ಲೆಲ್ಲೂ ಜಾರಿಯಲ್ಲಿರುವುದು ಲೋಕಕ್ಕೆ ತಿಳಿದಿದೆ; ಆದರೆ ೧೯೯೮ರವರೆಗೆ ಆ ನಿಯಮ ಉಲ್ಲಂಘನೆಗಾಗಿ ಇಡೀ ರಾಷ್ಟ್ರದಲ್ಲಿ ಒಂದೇ ಒಂದು ದೂರು ಸಹ ಯಾವ ನ್ಯಾಯಾಲಯದಲ್ಲೂ ದಾಖಲಾಗಲಿಲ್ಲ! ಈಗಲೂ ಆ ವಿಧಾನ ವ್ಯಾಪಕವಾಗಿಯೇ ಬಳಕೆಯಲ್ಲಿದೆಯೆಂಬುದು ಕಾನೂನು ರಕ್ಷಕರಿಗೆ ತಿಳಿಯದೆ ಇಲ್ಲ.

ಈ ವಿಧಾನವು ಗರ್ಭಪಾತದ ಪೂರ್ಣವಿರೋಧಿಯಲ್ಲ. ಏಕೆಂದರೆ ಒಂದು ಲಿಂಗದ ಮಗು ಗರ್ಭದಲ್ಲಿದ್ದರೆ ಮಾತ್ರ ಗರ್ಭಪಾತವನ್ನು ವಿರೋಧಿಸುವ ಕ್ರಮ ಇದು. ಗಂಡು ಮಗುವಿದ್ದರೆ ಗರ್ಭಪಾತ ಬೇಡ. ಹೆಣ್ಣು ಮಗುವಾದರೆ ಅದು ನಿರ್ದಾಕ್ಷಿಣ್ಯವಾಗಿ ನಡೆಯಲಿ! ಇದಕ್ಕೆ ಒಂದು ಬುದ್ಧಿವಂತ ತರ್ಕವನ್ನೂ ಬೆಳಸಲಾಗಿದೆ. ತಾಯಿಗೆ ಗರ್ಭಪಾತದ ಹಕ್ಕನ್ನು ಮಾನ್ಯ ಮಾಡಬೇಕೆಂದು ಹೇಳುವವರು ಭ್ರೂಣದ ಹಕ್ಕಿನತ್ತ ಏಕೆ ಗಮನಹರಿಸುವುದಿಲ್ಲ? ಅರ್ಥಾತ್, ಇಲ್ಲಿ ಕಾನೂನಿನ ಪ್ರಶ್ನೆ ಉದ್ಭವಿಸುವುದಿಲ್ಲ; ತಂತ್ರ ಜ್ಞಾನವನ್ನು ಸಾಂಪ್ರದಾಯಿಕ ಪೂರ್ವಗ್ರಹಗಳ ಬಲಪಡಿಸುವಿಕೆಗೆ ಬಳಸಲಾಗಲಿ. ಹೆಣ್ಣು ತಂದೆಯ ಹೃದಯವನ್ನು ಹಿಂಡುವವಳು (ದಾರಿಕಾ ಹೃದಯದಾರಿಕಾ ಪಿತೃಃ - ಇದು ವೈದಿಕ ಸಾಹಿತ್ಯದ ಭಾಗವಾದ ಐತರೇಯ ಬ್ರಾಹ್ಮಣದ ಮಾತು); ಆದ್ದರಿಂದ ಆಮ್ನಿಯೋಸೆಂಟಿಸಿಸ್ ತಂತ್ರಜ್ಞಾನವು ಹೆಣ್ಣು ಭ್ರೂಣವನ್ನು ಸಂಹರಿಸಲು ಸಹಾಯ ಮಾಡಲಿ!

ಮುಂಬೈನಲ್ಲಿ ಈ ವಿಧಾನದ ಬಳಕೆಯ ಬಗ್ಗೆ ಡಾ. ಸಂಜೀವ ಕುಲಕರ್ಣಿಯವರು ಆಳವಾದ ಅಧ್ಯಯನ ಮಾಡಿ ಮಾಹಿತಿಯನ್ನು ಕಲೆಹಾಕಿದ್ದಾರೆ. ಅವರ ಪ್ರಕಾರ ೧೯೭೮ರಿಂದ ೮೨ರವರೆಗಿನ ನಾಲ್ಕು ವರ್ಷಗಳ ಅವಧಿಯಲ್ಲಿ ೭೮,೦೦೦ ಹೆಣ್ಣು ಭ್ರೂಣಗಳನ್ನು ಸಂಹರಿಸಲಾಗಿದೆ. ಈ ವಿಧಾನವನ್ನು ಬಳಸುವ ಐವತ್ತು ವೈದ್ಯರು ಅದನ್ನು

ಶೇ.೮೪ರಷ್ಟು ಮಟ್ಟದಲ್ಲಿ ಬಳಸಿದ್ದು ಭ್ರೂಣಹತ್ಯೆಗಾಗಿಯೇ ವಿನಾ ಜನನ ಪೂರ್ವದಲ್ಲಿ ಮಗುವಿನಲ್ಲಿರಬಹುದಾದ ವ್ಯತ್ಯಯಗಳನ್ನು ಗುರುತಿಸಲು ಅಲ್ಲ. ಇದು ನಾವು ತಂತ್ರಜ್ಞಾನವನ್ನು ಅಳವಡಿಸಿಕೊಳ್ಳುತ್ತಿರುವುದಕ್ಕೆ ಹಿಡಿದ ಕನ್ನಡಿಯಾಗಿದೆ.

ಇಂತಹ ಸನ್ನಿವೇಶದಲ್ಲಿ ವಿಜ್ಞಾನ-ತಂತ್ರಜ್ಞಾನಗಳ ದುರ್ಬಳಕೆಯೇ ಆಗಿಲ್ಲವೇನೋ ಎಂಬ ರೀತಿಯಲ್ಲಿ ಅಥವಾ ಆಗಿದ್ದರೂ ಅಂತಹ ಪ್ರಮಾದವಲ್ಲ ಎಂಬ ರೀತಿಯಲ್ಲಿ ವ್ಯಾಖ್ಯಾನ ನೀಡುವವರೂ ಇದ್ದಾರೆಂದರೆ ಅದು ಕೌತುಕದ ಸಂಗತಿ. ಧರ್ಮಾ ಕುಮಾರ್ ಎಂಬ ಮಹಿಳಾ ಬುದ್ಧಿ ಜೀವಿಯು ೧೯೮೩ರಷ್ಟು ಹಿಂದೆಯೇ ತನ್ನ ಕೆಲವು ಪ್ರಬಂಧಗಳಲ್ಲಿ ಇಂತಹ ಮನೋಭಾವವನ್ನು ಪ್ರಕಟಿಸಿದ್ದುದುಂಟು. ಆಕೆಯ ಅಸಾಧರಣ ತರ್ಕವನ್ನು ಸರಳವಾಗಿ ನಿರೂಪಿಸುವುದಾದರೆ ಅದು ಹೀಗಿರುತ್ತದೆ:

ಆಮ್ನಿಯೋಸೆಂಟಿಸಿಸ್ ನಂತಹ ವಿಧಾನಗಳಿಂದ ಲಿಂಗವನ್ನಾಧರಿಸಿ ಮಕ್ಕಳನ್ನು ಪಡೆಯುವುದರಿಂದ (ಅಂದರೆ, ಹೆಣ್ಣು ಭ್ರೂಣವನ್ನು ಸಂಹರಿಸಿ ಕೇವಲ ಗಂಡು ಮಕ್ಕಳನ್ನೇ ಆಯ್ಕೆ ಮಾಡಿಕೊಳ್ಳುವುದರಿಂದ) ಬದುಕಿರುವ ಹೆಣ್ಣುಮಕ್ಕಳ ಮೌಲ್ಯ, ಸ್ಥಾನಮಾನ ಹೆಚ್ಚುತ್ತದೆ; ಏಕೆಂದರೆ ದೇಶದಲ್ಲಿ ಹೆಣ್ಣುಮಕ್ಕಳ ಸಂಖ್ಯೆ ಕಡಿಮೆಯಾಗಿ ಗಂಡು-ಹೆಣ್ಣುಗಳ ಪ್ರಮಾಣ ಹೆಣ್ಣಿಗೆ ಅನುಕೂಲವಾಗುವಂತಿರುತ್ತದೆ. ಆದ್ದರಿಂದ ಆಗ ವರದಕ್ಷಿಣೆಯ ಪಿಡುಗು ಕಡಿಮೆಯಾಗುತ್ತದೆ. ಹೆಣ್ಣು ಸಿಕ್ಕಿದರೆ ಸಾಕೆಂಬ ತವಕವಿರುವಾಗ ಯಾರು ತಾನೆ ವರದಕ್ಷಿಣೆ ನಿರೀಕ್ಷಿಸುತ್ತಾರೆ? ಹೀಗಾಗಿ, ಹೆಣ್ಣಿನ ಸ್ಥಾನಮಾನ ಉತ್ತಮಗೊಳ್ಳುತ್ತದೆ. ಎರಡನೆಯದಾಗಿ, ಇಂತಹ ಭ್ರೂಣ ಪರೀಕ್ಷೆಯಲ್ಲಿ ಹೆಚ್ಚಾಗಿ ತೊಡಗುವವರು ಯಾರು?- ಶ್ರೀಮಂತರು (ಇದು ನಿಜವೆಂಬುದಕ್ಕೆ ಧರ್ಮಾ ಯಾವ ಅಂಕಿ-ಸಂಖ್ಯೆಯ ಆಧಾರವನ್ನೂ ನೀಡಿಲ್ಲ) ಅದರ ಪರಿಣಾಮವೇನು? ಶ್ರೀಮಂತ ಕುಟುಂಬಗಳವರು ಮುಂದೆ ಶ್ರೀಮಂತರಲ್ಲದ ಕುಟುಂಬಗಳಿಂದ ಹೆಣ್ಣನ್ನು ಪಡೆಯಬೇಕಾಗುತ್ತದೆ. ಅಂದರೆ, ಬಡ ಕುಟುಂಬಗಳವರನ್ನು ಅವರು ಆಶ್ರಯಿಸುತ್ತಾರೆ. ತಮ್ಮ ಪಂಗಡದಲ್ಲೇ ಹೆಣ್ಣು ದೊರಕದಿದ್ದರೆ ಬೇರೆ ಪಂಗಡಗಳಿಂದ, ಪ್ರದೇಶಗಳಿಂದ ಪಡೆಯಬೇಕು. ಇದರಿಂದಾಗಿ ಬಡವ-ಶ್ರೀಮಂತ ಎಂಬುದು ಕೌಟುಂಬಿಕ ಸಂಬಂಧಗಳಲ್ಲಿ ಕಡಿಮೆಯಾಗುತ್ತದೆ, ಜಾತಿಯ ನಿರ್ಬಂಧವೂ ಕಡಿಮೆಯಾಗುತ್ತದೆ. ವರಮಾನದ ವಿತರಣೆ ಸಮಾಜವನ್ನು ನಿಧಾನವಾಗಿ ಸಮಾನತೆಯತ್ತ ಕೊಂಡೊಯ್ಯುತ್ತದೆ. ಆದ್ದರಿಂದ ಲಿಂಗದ ಆಯ್ಕೆಯನ್ನು ತಂತ್ರಜ್ಞಾನವು ಪೋಷಿಸುವ ಪ್ರಕ್ರಿಯೆ ಸ್ವಾಗತಾರ್ಹವಾದದ್ದು.

ತರ್ಕವು ಮನೋಹರವಾಗಿ ಕಾಣಿಸುತ್ತದಲ್ಲವೆ? ಆದರೆ ಅದು ಶುದ್ಧತರ್ಕವಲ್ಲ ಏಕೆಂದರೆ, ಕಾರ್ಯ-ಕಾರಣಗಳ ಲೆಕ್ಕಾಚಾರದಲ್ಲಿ ಧರ್ಮಾ ಅವರು ಹತ್ತಾರು ಅಂಶಗಳನ್ನು, ಸಾಧ್ಯತೆಗಳನ್ನು ಪರಾಮರ್ಶಿಸುವ ಬದಲು ತಮಗೆ ಅನುಕೂಲವೆಂದು ಕಂಡುಬಂದ ಒಂದು ದಿಕ್ಕಿನಲ್ಲಿ ಧಾವಿಸಿದ್ದಾರೆ. ಇದನ್ನು ಲೀಲಾ ದುಬೆ ಅವರು ಬಹಳ ಹಿಂದೆಯೇ ವಿಶ್ಲೇಷಣೆ ಮಾಡಿ ತೋರಿಸಿದ್ದರು. ಉದಾಹರಣೆಗೆ, ಗಂಡು-ಹೆಣ್ಣುಗಳ ಪ್ರಮಾಣವು ಧರ್ಮಾ ಅವರು

ನಿರೀಕ್ಷಿಸುವ ಮಟ್ಟಕ್ಕೆ ಇಳಿದರೆ ಆಗ ಶ್ರೀಮಂತರು ಬಡಕುಟುಂಬದಿಂದ ಹೆಣ್ಣು ತಂದುಕೊಳ್ಳುತ್ತಾರೋ, ಅಥವಾ ಶ್ರೀಮಂತ ಯುವಕ ಗುಂಡಾಗಳು ಮನಸೋ ಇಚ್ಛೆ ಬೇರೆ ಹೆಣ್ಣುಗಳನ್ನು ಅಪಹರಿಸುತ್ತಾರೋ ಹೇಗೆ ಹೇಳುವುದು? ಅಥವಾ, ಹೆಣ್ಣುಗಳ ಪ್ರಚ್ಛನ್ನ ಮಾರಾಟ ಆಗುವ ಪ್ರಮೇಯವೂ ಇರುತ್ತದೆ. ಅಥವಾ ಬಹುಪತಿತ್ವದ ಸನ್ನಿವೇಶ ಏಕೆ ಹುಟ್ಟಿಕೊಳ್ಳಬಾರದು?

ಇದರರ್ಥವಿಷ್ಟೆ: ವಿಜ್ಞಾನ-ತಂತ್ರಜ್ಞಾನಗಳ ಪರಿಣಾಮವನ್ನು ಸರಳೀಕರಿಸಿ ಹೆಣ್ಣಿನ ಸ್ಥಾನಮಾನವನ್ನು ಹೀಗೆಯೇ ಇರುತ್ತದೆಂದು ನಿರ್ಧರಿಸಿ ಹೇಳಲಾಗುವುದಿಲ್ಲ. ಹಿಂದಿನದನ್ನಾಗಲಿ ಇಂದಿನ ಯಾವುದಾದರೊಂದು ಭಾವಿತ ಸನ್ನಿವೇಶವನ್ನಾಗಲಿ ವೈಭವೀಕರಿಸದೆ ವಸ್ತುನಿಷ್ಠವಾಗಿ ವೀಕ್ಷಿಸಿದರೆ, ವಿಶ್ಲೇಷಿಸಿದರೆ ಯಾವುದು ಮೂರ್ತ, ಯಾವುದು ಸಂಭಾವ್ಯ, ಯಾವುದು ಸ್ವಾಗತಾರ್ಹ ಎಂಬುದು ತಿಳಿಯುತ್ತದೆ. ಅಸಹಜವಾದ ಮತ್ತು ಅಪ್ರಾಯೋಗಿಕವಾದ ಮಾತುಗಳನ್ನಾಡದಿರುವುದು ಮಹಿಳೆಗೆ ನಾವು ತೋರಬೇಕಾದ ಕನಿಷ್ಠ ಸೌಜನ್ಯ.

ಸೆಪ್ಟೆಂಬರ್ ೧೯೯೯ರಲ್ಲಿ ಭಾರತಕ್ಕೆ ಭೇಟಿ ನೀಡಿದ್ದ ನೊಬೆಲ್ ಪುರಸ್ಕೃತ ವಿಜ್ಞಾನಿ ರಿಚರ್ಡ್ ಅರ್ನ್‌ಸ್ಟ್ ಎಂಬುವವನ ಕೆಲವು ಅಭಿಪ್ರಾಯಗಳನ್ನು ಗಮನಿಸಿ ವಿಷಯವನ್ನು ಚರ್ಚೆಗೆ ಬಿಡೋಣ:

ಜೀವತಂತ್ರಜ್ಞಾನದ ಸಂಶೋಧನೆಗಳನ್ನು ಸಂಪೂರ್ಣವಾಗಿ ನಿಷೇಧಿಸಬೇಕೆನ್ನುವುದು ಅವಿವೇಕದ ಮಾತು. ಭವಿಷ್ಯದ ಜನಾಂಗಗಳಿಗೆ ಅಸ್ತಿತ್ವವನ್ನು ನಿರಾಕರಿಸುವ ಅಪಾಯ ಅದರಲ್ಲಿ ಅಡಗಿದೆ. ಹಾಗೆಂದ ಮಾತ್ರಕ್ಕೆ ಇಂತಹ ಸಂಶೋಧನೆಗಳಲ್ಲಿ ತೊಡಗಿರುವವರಿಗೆ ಯಾವ ನಿರ್ಬಂಧವೂ ಇರಬಾರದೆಂದಲ್ಲ. ಮಾನವ ಜನಾಂಗಕ್ಕೆ ಅಹಿತವಾಗುವ ಸಂಶೋಧನಾ ಪ್ರಯೋಗವು ಖಂಡಿತ ಸಾಧುವಲ್ಲ. ಜೀವತಂತ್ರಜ್ಞಾನವು ಸ್ವತಃ ಕೆಡುಕನ್ನೇನೂ ತರಲಾರದು; ಅದನ್ನು ದುರಪಯೋಗಪಡಿಸಿಕೊಳ್ಳದಿದ್ದರೆ ಸಾಕು, ಅಷ್ಟೆ. ಹಾಗೆಂದು ಸಂಶೋಧನೆಗೆ ಕಡಿವಾಣ ಹಾಕಿದರೆ ಅದೂ ಸರಿಹೋಗದು. ವಿಜ್ಞಾನ-ತಂತ್ರಜ್ಞಾನಗಳಿಂದ ಅಪಾರ ಹಣ ಸೂರೆ ಮಾಡುವ ಪ್ರವೃತ್ತಿ ಜಗತ್ತಿನಲ್ಲೆಲ್ಲಾ ಇತ್ತೀಚೆಗೆ ಹೆಚ್ಚಾಗಿದೆ. ಅದರಿಂದಾಗಿ ವಿಜ್ಞಾನಿಗಳ ನೈತಿಕ ಪ್ರಜ್ಞೆ ಕಪ್ಪಾಗಿದೆ. ಜೀವತಂತ್ರಜ್ಞಾನದಂತಹ ಕ್ಷೇತ್ರದ ವಿಜ್ಞಾನಿಗೆ ಸಾಮಾಜಿಕ ಜವಾಬ್ದಾರಿ ಇಲ್ಲದಿದ್ದರೆ ಅದೊಂದು ದುರಂತದ ಸನ್ನಿವೇಶ. ಭೂಕಂಪದ ಸುಳಿವಾದರೂ ದೊರೆತೀತೇನೋ, ಆದರೆ ಜೀವತಂತ್ರಜ್ಞಾನದ ಆಳ ಅರಿವಿಗೆ ಬರಲಾರದು. ಆದ್ದರಿಂದ ನಾವು ಜವಾಬ್ದಾರಿಯುತವಾಗಿ ಸಂಶೋಧನೆಗಳಲ್ಲಿ ತೊಡಗುವುದು ಅತ್ಯವಶ್ಯಕ.

# ಕುಟುಂಬ ಮತ್ತು ಮಹಿಳೆ

*ವೆಂ. ವನಜ*

ಕುಟುಂಬ ಒಂದು ಮೂಲ ಸಾಮಾಜಿಕ ಘಟಕ ಎಂದು ನಾವೆಲ್ಲರೂ ತಿಳಿದಿದ್ದೇವೆ. ಇದರಲ್ಲಿ ಪುರುಷರು, ಮಹಿಳೆಯರು, ಮಕ್ಕಳು, ಮುದುಕರು ಪರಸ್ಪರ ಬಾಂಧವ್ಯ ಮತ್ತು ಕರ್ತವ್ಯಗಳ ಜಾಲದಲ್ಲಿ ಬದುಕುತ್ತಾರೆ. ಕುಟುಂಬ ತನ್ನ ಸದಸ್ಯರ ಮೂಲಭೂತ ಅಗತ್ಯಗಳನ್ನಲ್ಲದೆ ಒಂದು ರೀತಿಯ ಪರಸ್ಪರ ಸಂಬಂಧ ಮತ್ತು ಏಕತೆಯ ಭಾವನೆಗಳನ್ನು ಒದಗಿಸುತ್ತದೆ; ಕಷ್ಟ-ತೊಂದರೆಗಳು ಬಂದಾಗ ತನ್ನ ಸದಸ್ಯರಿಗೆ ರಕ್ಷಣೆಯನ್ನು ನೀಡುತ್ತದೆ. ಇಲ್ಲಿ ವ್ಯಕ್ತಿಯೊಂದು ಸಂತಸ-ದುಃಖ, ರಾಗ-ದ್ವೇಷಗಳ ಅನುಭವಗಳನ್ನು ಮೊದಲಿಗೆ ಪಡೆಯುತ್ತಾನೆ/ಳೆ; ಸಮಾಜದಲ್ಲಿ ತಾನು ಹೇಗೆ ಬದುಕಬೇಕೆನ್ನುವ ತಿಳಿವಳಿಕೆಯನ್ನು ತರಬೇತಿಯನ್ನು ಪಡೆಯುತ್ತಾನೆ/ಳೆ. ಆಯಾ ಸಮಾಜದ ಸಾಂಸ್ಕೃತಿಕ, ನೈತಿಕ ಮತ್ತು ಅಧ್ಯಾತ್ಮಿಕ ಮೌಲ್ಯಗಳನ್ನು ಪೀಳಿಗೆಯಿಂದ ಪೀಳಿಗೆಗೆ ಇದು ವರ್ಗಾಯಿಸುತ್ತದೆ(ಟಾಲ್‌ಕಾಟ್ ಪಾರ್ಸನ್ಸ್ ಮತ್ತು ರಾಬರ್ಟ್ ಎಫ್. ಬೇಲ್ಸ್, ೧೯೫೫) ಯಾವುದೇ ಸಮಾಜದಲ್ಲಿರುವ ಶ್ರಮವಿಭಜನೆ, ವೈವಾಹಿಕ ನೀತಿ ನಿಯಮಗಳು, ಅದರ ಸದಸ್ಯರ ಸಂಪನ್ಮೂಲಗಳು, ಹಕ್ಕುಗಳು, ಕರ್ತವ್ಯಗಳು ಮತ್ತು ಸವಲತ್ತುಗಳ ಮೇಲಿನ ನಿಯಂತ್ರಣ ವ್ಯವಸ್ಥೆಗೆ ಕುಟುಂಬ ಒಂದು ಆಧಾರ ಸ್ತಂಭವಾಗಿದೆ ಎನ್ನಬಹುದು.

ಕುಟುಂಬ ಒಂದು ಚಲನಶೀಲ ಸಂಸ್ಥೆ; ಇದು ಒಂದು ಪ್ರಕ್ರಿಯೆ. ಇದರ ಮುಖ್ಯ ಲಕ್ಷಣಗಳೆಂದರೆ, ಲೈಂಗಿಕ ಸಂಬಂಧ, ವಿವಾಹದ ಮಾದರಿ, ಮತ್ತದಕ್ಕೆ ಸಂಬಂಧಿಸಿದ ನೀತಿ ನಿಯಮಗಳ ನಿರ್ವಹಣೆ, ಮನೆತನ ಮತ್ತು ವಂಶವನ್ನು ನಿರ್ದಿಷ್ಟಪಡಿಸುವಿಕೆ, ಆರ್ಥಿಕ ಅವಕಾಶಗಳ ಹಂಚಿಕೆ, ಮಕ್ಕಳನ್ನು ಪಡೆಯುವ ಮತ್ತು ಪಾಲನೆ-ಪೋಷಣೆಗೆ ಸಂಬಂಧಿಸಿದ ನಿಯಮಗಳು ಮತ್ತು ಸಾಮಾನ್ಯ ವಾಸಸ್ಥಳಗಳು ಎಂದು ಮೆಕೈವರ್ ಮತ್ತು ಪೇಜ್ ರಂಥ ಸಮಾಜಶಾಸ್ತ್ರಜ್ಞರು ಹೇಳುತ್ತಾರೆ.

**ಕುಟುಂಬ ಮತ್ತು ಮಹಿಳೆ**

ಕುಟುಂಬ ಪುರುಷನಿಗಿಂತ ಮಹಿಳೆಗೆ ಹೆಚ್ಚು ಮಹತ್ವಪೂರ್ಣವಾಗುತ್ತದೆ. ಮಹಿಳೆಗೆ ಸಂಬಂಧಿಸಿದ ಯಾವುದೇ ಚರ್ಚೆ ಕುಟುಂಬವನ್ನು ಹೊರತುಪಡಿಸಿ ನಡೆಯುವುದು ಅಸಾಧ್ಯ. ಕಾರಣ, ಅವಳ ಎಲ್ಲಾ ಚಟುವಟಿಕೆಗಳು ಕುಟುಂಬದ ಪರಿಧಿಯಲ್ಲೇ ಹೆಚ್ಚಾಗಿ

ನಡೆಯುತ್ತವೆ. ಅವಳ ಬದುಕು ಕುಟುಂಬದ ಆಗುಹೋಗುಗಳೊಂದಿಗೆ ಬೆರೆತು ಹೋಗಿರುತ್ತದೆ. ಅದಿಲ್ಲದೆ ಅವಳ ಬದುಕಿಲ್ಲ. ಅಂದ ಮೇಲೆ ಮಹಿಳೆಯನ್ನು ಕುರಿತ ಯಾವುದೇ ಅಧ್ಯಯನ ಕುಟುಂಬದ ಅಧ್ಯಯನದೊಂದಿಗೇ ಆರಂಭವಾಗಬೇಕಾದುದು ಅನಿವಾರ್ಯವಾಗಿದೆ.

ಭಾರತದಲ್ಲಿ ಎರಡು ಮುಖ್ಯವಾದ ವಂಶ ಮೂಲದ(Descent) ಕುಟುಂಬ ವಿಧಾನಗಳಿವೆ. ಅವೆಂದರೆ, ೧. ಪಿತೃವಂಶೀಯ ಮೂಲ ಮತ್ತು ೨. ಮಾತೃವಂಶೀಯ ಮೂಲ ಕುಟುಂಬಗಳು. ಇಂಥ ಕುಟುಂಬಗಳ ಕಾರ್ಯ ಚಟುವಟಿಕೆಗಳು ಮತ್ತು ಪ್ರಕ್ರಿಯೆಗಳು ಮಹಿಳೆಯರ ಸ್ಥಾನಮಾನಗಳ ಅಧ್ಯಯನದ ದೃಷ್ಟಿಯಿಂದ ಹೆಚ್ಚು ಮಹತ್ವದ್ದಾಗಿರುತ್ತದೆ. ಆದ್ದರಿಂದ ಪಿತೃವಂಶೀಯ ಮತ್ತು ಮಾತೃವಂಶೀಯ ಕುಟುಂಬಗಳು, ಅದರ ಕಾರ್ಯಚಟುವಟಿಕೆಗಳು, ಮಹಿಳೆಯರ ಸ್ಥಾನಮಾನಗಳನ್ನು ಕುರಿತ ಒಂದುಸ್ಥೂಲ ನೋಟವನ್ನು ಕೊಡುವ ಪ್ರಯತ್ನ ಇಲ್ಲಿ ಮಾಡಲಾಗಿದೆ.

**ಮಾತೃವಂಶೀಯ ಕುಟುಂಬ (Matrilineal Family)**

ಮಾತೃವಂಶೀಯ ಕುಟುಂಬಗಳಲ್ಲಿ ಮಹಿಳೆ ವಂಶವನ್ನು ಮುಂದುವರಿಸುತ್ತಾಳೆ. ಮಕ್ಕಳು ತಾಯಿಯ ಮೂಲಕ ಸಾಮಾಜಿಕವಾಗಿ ಗುರುತಿಸಲ್ಪಡುತ್ತಾರೆ. ಅವಳು ಗಂಡು ಅಥವಾ ಹೆಣ್ಣು ಮಕ್ಕಳನ್ನು ಪಡೆಯಲೇಬೇಕೆಂದಿಲ್ಲ. ವಿವಾಹ ಅವಳನ್ನು ತನ್ನ ಕುಟುಂಬದಿಂದ ಬೇರ್ಪಡಿಸುವುದಿಲ್ಲ. ಈ ಕುಟುಂಬಗಳು ಮಾತೃ ಸ್ಥಳೀಯ ಕುಟುಂಬಗಳೂ ಆಗಿರುತ್ತವೆಯಾದ್ದರಿಂದ ಅವಳು ಅದರ ಸಂಪೂರ್ಣ ಸದಸ್ಯಳಾಗಿಯೇ ಉಳಿಯುತ್ತಾಳೆ. ಮಹಿಳೆ ಚರ ಮತ್ತು ಸ್ಥಿರ ಆಸ್ತಿಗಳ ಮೇಲಿನ ಹಕ್ಕುಗಳನ್ನು ಪಡೆಯುತ್ತಾಳಾದರೂ ಅಧಿಕಾರ ಅವಳ ಕೈಯಲ್ಲೇ ಇರಬೇಕೆಂಬ ನಿಯಮವೇನಿಲ್ಲ. ರಾಜಕೀಯ ಅಧಿಕಾರ ಆಸ್ತಿವಹಿವಾಟುಗಳಿಗೆ ಸಂಬಂಧಿಸಿದಂತೆ ನಿರ್ಧಾರದ ಅಧಿಕಾರ ಮಹಿಳೆಯ ಸೋದರರ ಕೈಯಲ್ಲಿರುತ್ತದೆ.

ಇಂಥ ಕುಟುಂಬ ವ್ಯವಸ್ಥೆಯಲ್ಲಿ ಮಹಿಳೆಯರು ಪರಾವಲಂಬಿಗಳಲ್ಲ; ತಮ್ಮ ದಿನ ನಿತ್ಯದ ವ್ಯವಹಾರಗಳನ್ನು ತಾವೇ ನೋಡಿಕೊಳ್ಳುತ್ತಾರೆ. ಪುರುಷರು ಅವರಿಗೆ ನೆರವಾಗುತ್ತಾರೆ. ಪುರುಷರು ಮೀನುಗಾರಿಕೆ, ಬೇಟೆ, ವ್ಯಾಪಾರ ಮುಂತಾದವುಗಳಲ್ಲಿ ತೊಡಗಿದ್ದರೆ, ಮಹಿಳೆಯರು ಬೇಸಾಯ ಮಾಡುತ್ತಾರೆ.

ಮಾತೃವಂಶೀಯ ಹಾಗೂ ಮಾತೃ ಸ್ಥಳೀಯ ಕುಟುಂಬಗಳಿರುವ ಗಾರೋ ಜನಾಂಗದಲ್ಲಿ (ಅಸ್ಸಾಂ ಮತ್ತು ಮೇಘಾಲಯ) ಹೆಣ್ಣು ಮಗುವಿನ ಜನನ ಸಂತಸವನ್ನು ತಂದರೆ, ಗಂಡು ಮಗು ಇತರರ ಜಮೀನಿನಲ್ಲಿ ದುಡಿಯುವವ ಎಂಬ ಭಾವನೆ ಅವರಲ್ಲಿದೆ. ಮಹಿಳೆಯರು ಉಳುಮೆ ಮಾಡುತ್ತಾರೆ.

ಖಾಸಿ ಜನಾಂಗದವರಲ್ಲಿ ಶ್ರಮವಿಭಜನೆ ಕೂಡ ಇದೆ. 'ಯುದ್ಧ ಮತ್ತು ರಾಜಕೀಯಗಳು ಪುರುಷರಿಗೆ; ಆಸ್ತಿ ಮತ್ತು ಮಕ್ಕಳು ಮಹಿಳೆಯರಿಗೆ'ಎಂಬ ಗಾದೆ ಇವರಲ್ಲಿದೆ. ನಾಚಿಕೆ ಹೆಣ್ಣಿನ ಗುಣ, ದೈಹಿಕ ಬಲ ಗಂಡಿನ ಗುಣ ಎಂಬ ನಂಬಿಕೆಯೂ ಇದೆ. ಆಡಳಿತಗಾರರು,

ಜನಾಂಗದ-ಕುಟುಂಬಗಳ ಹಿರಿಯರು ಪುರುಷರೇ ಆಗಿರುತ್ತಾರೆ. ಆಸ್ತಿಯ ನಿರ್ವಹಣೆಯ ಜವಾಬ್ದಾರಿ ಮಹಿಳೆಯ ಸೋದರ ಅಥವಾ ಪತಿಯ ಕೈಯಲ್ಲಿರುತ್ತದೆ.

ಇಲ್ಲಿ ಎಲ್ಲಾ ಹೆಣ್ಣು ಮಕ್ಕಳೂ ಆಸ್ತಿಯಲ್ಲಿ ಪಾಲುದಾರರು. ಎಲ್ಲರಿಗಿಂತ ಚಿಕ್ಕಮಗಳಿಗೆ ಆಸ್ತಿಯಲ್ಲಿ ಹೆಚ್ಚಿನ ಪಾಲು ದೊರೆಯುತ್ತದೆ. ಮನೆಯ ಸಾಂಪ್ರದಾಯಿಕ ಆಚರಣೆಗಳು, ಅಂತ್ಯ ಸಂಸ್ಕಾರ ಮುಂತಾದ ಕರ್ಮಾದಿಗಳು, ವೃದ್ಧ ತಂದೆ-ತಾಯಿಯರ ಯೋಗಕ್ಷೇಮದ ಹೊಣೆಗಾರಿಕೆಗಳು ಅವಳದಾಗಿರುತ್ತವೆ; ಅವಳ ಹೆಸರಿನಲ್ಲಿ ಸೋದರನ ಮೂಲಕ ನಡೆಯುತ್ತವೆ.

ಪತಿ ಪತ್ನಿಯ ಮನೆಗೆ ಬಂದು ವಾಸಿಸುತ್ತಾನೆ; ಆಸ್ತಿಯ ವಹಿವಾಟುಗಳನ್ನು ನೋಡಿ ಕೊಳ್ಳುತ್ತಾನೆ. ಪ್ರತಿ ಪೀಳಿಗೆಯ ಮಹಿಳೆಯರು ಅಧಿಕಾರ ನಡೆಸಲು ಅನುಕೂಲವಾಗುವಂತೆ ಪ್ರತ್ಯೇಕ ಕುಟುಂಬಗಳನ್ನು ಹೊಂದಿರುತ್ತಾರೆ. ಆಸ್ತಿಯ ಉಸ್ತುವಾರಿಯನ್ನು ನೋಡಿ ಕೊಳ್ಳುತ್ತಾರೆ. ಇವರ ಚಲನೆಯ ಸ್ವಾತಂತ್ರ್ಯ ಮತ್ತದರ ಬಳಕೆ ಅವರು ಆರ್ಥಿಕತೆಗೆ ಮಾಡುವ ಕೊಡುಗೆಯನ್ನವಲಂಬಿಸಿರುತ್ತದೆ.

ಕೇರಳದಲ್ಲಿ ನಾಯರ್ ಕುಟುಂಬಗಳು ಮಾತೃವಂಶೀಯ ಮತ್ತು ಮಾತೃಸ್ಥಳೀಯ ಕುಟುಂಬಗಳಾಗಿವೆ. ಇವರು ಪುರುಷರಂತೆ ಆಸ್ತಿಯಲ್ಲಿ ಸಮಪಾಲು ಪಡೆಯುತ್ತಾರೆ. ಆದರೆ ಉತ್ಪಾದಕ ಚಟುವಟಿಕೆಗಳಲ್ಲಿ ಭಾಗವಹಿಸುವುದಿಲ್ಲ.

ಉತ್ತರ ಕೇರಳ ಮತ್ತು ಲಕ್ಷದ್ವೀಪದ 'ಮೋಪ್ಲಾ' ಜನಾಂಗದ ಕುಟುಂಬಗಳು ಮಾತೃವಂಶೀಯ ಹಾಗೂ ಸ್ಥಳೀಯ ಕುಟುಂಬಗಳಾಗಿವೆ. ಅವಿಭಕ್ತ ಕುಟುಂಬದ ಮಾದರಿಯ 'ತರವಾಡು'ಗಳಲ್ಲಿ ಮಹಿಳೆ, ಮಕ್ಕಳು ಮತ್ತು ಮೊಮ್ಮಕ್ಕಳಿಂದ ಕೂಡಿರುತ್ತವೆ. ಪುರುಷರೆಂದೂ ಇಲ್ಲಿ ತಂಗುವುದಿಲ್ಲ. ಅವರು ಆಗಾಗ ಇಲ್ಲಿಗೆ ಭೇಟಿ ನೀಡುತ್ತಾರೆ. ವಿವಾಹದಿಂದ ಯಾರೂ ತಮ್ಮ ಸ್ಥಾನಗಳನ್ನು ಬದಲಿಸುವುದಿಲ್ಲ. ಯಾವ ಬಂಧುಗಳೂ ಕುಟುಂಬಕ್ಕೆ ಹೊಸದಾಗಿ ಸೇರ್ಪಡೆಯಾಗುವುದಿಲ್ಲ. ಮನೆ ಚಿಕ್ಕದಾಗಿ ಸದಸ್ಯರ ಸಂಖ್ಯೆ ಹೆಚ್ಚಾಗಿದ್ದರೆ ಮತ್ತೊಂದು 'ತರವಾಡು' ಹುಟ್ಟಿಕೊಳ್ಳುತ್ತದೆ. ಪತಿಗೆ ಮಾತ್ರ ಇಲ್ಲಿ ಸ್ಥಾನವಾಗಲೀ, ಆಸ್ತಿ ಮೇಲಿನ ಹಕ್ಕಾಗಲೀ ಇರುವುದಿಲ್ಲ.

ಸಂಕ್ಷಿಪ್ತವಾಗಿ ಹೇಳುವುದಾದರೆ, ಮಾತೃವಂಶೀಯ ಕುಟುಂಬಗಳು ಮಾತೃಸ್ಥಳೀಯ ಕುಟುಂಬಗಳೂ ಆಗಿದ್ದು, ಮಹಿಳೆ ಅವುಗಳ ಕೇಂದ್ರಬಿಂದುವಾಗಿರುತ್ತಾಳೆ. ವಂಶವನ್ನು ಮುಂದುವರೆಸುವ ಅವಳು ಬಂಧುಬಾಂಧವರು ಮತ್ತಿತರರೊಂದಿಗಿನ ಸಂಬಂಧಗಳನ್ನು ನಿರ್ವಹಿಸುಪವಳಾಗಿರುತ್ತಾಳೆ. ಪತಿಯಿಂದ ಯಾವುದೇ ಸ್ಥಾನಮಾನವನ್ನು ಪಡೆಯುವುದಿಲ್ಲ; ಅವನು ಅವಳ ಆಶ್ರಯದಾತನೂ ಅಲ್ಲ. ತನ್ನದೇ ಆದ ಸ್ಥಾನಮಾನಗಳನ್ನು ಹೊಂದಿರುವ ಅವಳು ವಿವಾಹ ವಿಚ್ಛೇದನದಿಂದ ತನ್ನ ಮಕ್ಕಳ ಮೇಲಿನ ಹಕ್ಕನ್ನು ಕಳೆದುಕೊಳ್ಳುವುದಿಲ್ಲ. ಪುತ್ರನಿಂದ ಗೌರವಿಸಲ್ಪಡುತ್ತಾಳೆ. ಆಸ್ತಿ ಹಕ್ಕು ಅವಳ ಬದುಕಿಗೆ ಘನತೆ-ಗೌರವಗಳನ್ನು ತಂದುಕೊಡುತ್ತದೆ.

ಇಂಥ ಕುಟುಂಬಗಳಲ್ಲಿ ಮಹಿಳೆಯರು ಹೆಚ್ಚು ಶಕ್ತಿಶಾಲಿಗಳು. ಸಾರ್ವಭೌಮರು ಎಂಬ ಭಾವನೆಯುಂಟು ಮಾಡುತ್ತದೆಯಾದರೂ ಮೇಲೆ ಹೇಳಿದ ಕೌಟುಂಬಿಕ ಪರಿಸ್ಥಿತಿ ಇಂದು ತೀವ್ರಗತಿಯ ಬದಲಾವಣೆಯತ್ತ ಸಾಗಿದೆ. ಇಂದು ದೊರೆಯುತ್ತಿರುವ ಶಿಕ್ಷಣ, ಉದ್ಯೋಗದ ಅವಕಾಶಗಳು, ಸೌಲಭ್ಯಗಳು ಸಾಂಪ್ರದಾಯಿಕ ಕುಟುಂಬಗಳಿಂದ ಪುರುಷರನ್ನು ದೂರ ಮಾಡುತ್ತಿವೆ. ಪರಿಣಾಮವಾಗಿ, ಚಿಕ್ಕ ಕುಟುಂಬಗಳಲ್ಲಿ ಅನಿವಾರ್ಯವಾಗಿ ಸಾಂಪ್ರದಾಯಿಕ ಮೌಲ್ಯಗಳು ಕಡಿಮೆಯಾಗುತ್ತಿವೆ. ಮಹಿಳೆಗಿರುವ ಆಸ್ತಿ ಹಕ್ಕು ಮಾತ್ರ ಅವಳಿಗೆ ರಕ್ಷೆಯಾಗಿದೆ.

**ಪಿತೃವಂಶೀಯ ಕುಟುಂಬ(Patrilineal Family)**

ಪಿತೃವಂಶೀಯ ಕುಟುಂಬವೆಂದರೆ, ಮೂರು ಪೀಳಿಗೆಗಳಿಗೆ ಸೇರಿದ, ಒಂದೇ ಸೂರಿನಡಿ ವಾಸಿಸುವ, ಸಹಪಂಕ್ತಿ ಭೋಜನ ಮಾಡುವ ವ್ಯಕ್ತಿಗಳನ್ನು ಹೊಂದಿರುತ್ತದೆ. ಇವರೆಲ್ಲಾ ಪುರುಷರ ಸಂಬಂಧಿಗಳು, ಅವರ ಪತ್ನಿಯರು, ಮಕ್ಕಳು, ಅವಿವಾಹಿತ ಹೆಣ್ಣುಮಕ್ಕಳು ಆಗಿರುತ್ತಾರೆ. ಇಲ್ಲಿ ಒಂದೇ ಆಯವ್ಯಯ ಪಟ್ಟಿ, ಒಂದೇ ವಾಸದ ಮನೆ, ಜಂಟಿ ಒಡೆತನದ ಆಸ್ತಿ, ಕುಟುಂಬದ ಒಂದೆಡೆ ಕ್ರೋಢೀಕರಣಗೊಂಡಿರುವ ಕೌಶಲ, ಶ್ರಮಿಕರು ಮತ್ತು ಸಂಪನ್ಮೂಲಗಳು ಕಂಡುಬರುತ್ತವೆ. ಒಂದೇ ಹೆಸರು, ಕುಲ, ಪೂರ್ವಜರ ಪೂಜೆ, ಒಂದೇ ದೇವರು, ಧಾರ್ಮಿಕ ಸಂಸ್ಕಾರಗಳು, ಹುಟ್ಟು-ಸಾವಿನಲ್ಲಿ ಮಡಿ-ಮೈಲಿಗೆಯ ಆಚರಣೆಗಳು ಮುಂತಾದವುಗಳಿರುತ್ತವೆ ಎಂದು ಸಮಾಜ ಶಾಸ್ತ್ರಜ್ಞರು ವಿವರಿಸುತ್ತಾರೆ.

ಭಾರತದಲ್ಲಿ ವ್ಯಾಪಕವಾಗಿರುವ ಕುಟುಂಬವೆಂದರೆ, ಪಿತೃವಂಶೀಯ ಮತ್ತು ಪಿತೃಕುಟುಂಬಗಳು. ಇವು ಪಿತೃಪ್ರಧಾನ ಕುಟುಂಬಗಳೂ ಆಗಿರುತ್ತವೆ. ಪಿತೃಪ್ರಧಾನ ವ್ಯವಸ್ಥೆಯನ್ನು ಹೈದಿ ಹಾರ್ಟಮನ್ ಎಂಬ ಸ್ತ್ರೀವಾದಿ ಮಹಿಳೆ ಹೀಗೆ ವಿವರಿಸುತ್ತಾರೆ:

"A set of social relations between men which have a material base and which though hierarchical, establish or create interdependence and solidarity among men that enable them to dominate women"(Heidi Hartmann: The Unhappy Marriage of Marxism and Feminism)

ಮಹಿಳೆಯರ ಲೈಂಗಿಕತೆ, ಸಂತಾನೋತ್ಪತ್ತಿಯ ಸಾಮರ್ಥ್ಯ, ಆರ್ಥಿಕ ಸಂಪನ್ಮೂಲಗಳ ಮೇಲೆ ನಿಯಂತ್ರಣ ಹೊಂದುವ ಮೂಲಕ ಮಹಿಳೆಯರನ್ನು ನಿಯಂತ್ರಿಸಲಾಗುತ್ತದೆ. ಇದು ಏಕಪತಿ ವಿವಾಹ ಪದ್ಧತಿ, ಮಕ್ಕಳ ಪೋಷಣೆ ಮತ್ತು ಮನೆಗೆಲಸದ ಜವಾಬ್ದಾರಿ, ಪುರುಷರು, ರಾಜಕೀಯ ವ್ಯವಸ್ಥೆ ಮತ್ತಿತರ ಸಂಘಸಂಸ್ಥೆಗಳ ಮೇಲಿನ ಆರ್ಥಿಕಾವಲಂಬನೆ ಮುಂತಾದವುಗಳಲ್ಲಿ ವ್ಯಕ್ತವಾಗುತ್ತದೆ ಎಂದು ಹೇಳಿದ್ದಾರೆ.

ಪಿತೃವಂಶೀಯ ಮತ್ತು ಪಿತೃಸ್ಥಳೀಯ ಕುಟುಂಬಗಳಲ್ಲಿ, ಮಗನನ್ನು ತಂದೆಯ ವಾರಸುದಾರ, ವೃದ್ಧಾಪ್ಯದಲ್ಲಿ ಆಶ್ರಯದಾತ, ಕುಟುಂಬದ ಘನತೆ-ಗೌರವಗಳನ್ನು ಕಾಪಾಡುವವನು, ಸಂಪತ್ತನ್ನು ವೃದ್ಧಿಸುವವನು, ವಂಶವನ್ನು ಮುಂದುವರೆಸುವವನು ಎಂದು ಭಾವಿಸಲಾಗುತ್ತದೆ. ಮಗ ತನ್ನ ತಂದೆಯ ಚಿತೆಗೆ ಬೆಂಕಿ ಇಡುವ ಮೂಲಕ

ಅವನನ್ನು 'ಪುತ್' ಎಂಬ ನರಕದಿಂದ ಪಾರು ಮಾಡಿ ಸ್ವರ್ಗಕ್ಕೆ ಸೇರಿಸುತ್ತಾನೆ ಎನ್ನುವ ನಂಬಿಕೆ ಇದೆ. ಇದು ಕುಟುಂಬದಲ್ಲಿ ಮಗನಿಗೆ ಇರುವ ವಿಶೇಷ ಸ್ಥಾನಮಾನಗಳನ್ನು ಸೂಚಿಸುತ್ತದೆ.

ಈ ಹಿನ್ನೆಲೆಯಲ್ಲಿ ಮಗಳಾಗಿ ಹೆಣ್ಣು ತನ್ನ ಹೆತ್ತವರ ಮನೆಯಲ್ಲಿ ಯಾವುದೇ ಸ್ಥಾನವನ್ನು ಹೊಂದಿರುವುದಿಲ್ಲ. ಅವಳ ಸ್ಥಾನ ಪತಿಯ ಮನೆಯಲ್ಲಿ ಮಾತ್ರ. ಹುಟ್ಟಿದ ಮನೆಯಲ್ಲಿ ಪೋಷಿಸಿ, ರಕ್ಷಿಸಿ ಪರರಿಗೆ ಒಪ್ಪಿಸಬೇಕಾದ ವಸ್ತುವಾಗಿರುತ್ತಾಳೆ. ಮಗಳನ್ನು ಪೋಷಿಸುವುದೆಂದರೆ, 'ಬೇರೊಬ್ಬರ ಮನೆಯ ಕಾಂಪೌಂಡಿನಲ್ಲಿರುವ ಗಿಡಕ್ಕೆ ಗೊಬ್ಬರ ಹಾಕಿ ನೀರೆರೆದಂತೆ'ಎಂಬ ಭಾವನೆ ಅವಳಿಗೆ ಕೊಡುವ ಆಹಾರ, ಶಿಕ್ಷಣ, ವೈದ್ಯಕೀಯ ಉಪಚಾರ, ಆಸ್ತಿಹಕ್ಕು, ಸಾಮಾಜೀಕರಣ ಮುಂತಾದ ವಿಷಯಗಳಲ್ಲಿ ವ್ಯಕ್ತವಾಗುತ್ತದೆ. ಕುಟುಂಬದಲ್ಲಿ ಅವಳ ಆಗಮನ ಎಲ್ಲರೂ ಬಯಸಿದುದಾಗಿರುವುದಿಲ್ಲ; ಎಲ್ಲರಿಗೂ ಸಂತಸ ತರುವುದಿಲ್ಲ.

'ಪರರ ಮನೆಯ ಒಡವೆ'ಯಾದ ಹೆಣ್ಣುಮಗುವಿನ ಸಾಮಾಜೀಕರಣ ಮತ್ತು ತರಬೇತಿಗಳು, ಹುಟ್ಟಿದ ಮನೆಯಲ್ಲೇ ಶಾಶ್ವತ ನೆಲೆಯನ್ನು ಹೊಂದಿರುವ, ವಂಶೋದ್ಧಾರಕನಾದ ಮಗನ ಸಾಮಾಜೀಕರಣ ಮತ್ತು ತರಬೇತಿಗಿಂತ ಭಿನ್ನವಾಗಿರುತ್ತವೆ. ಹೆಣ್ಣುಮಗುವಿನ ಸಾಮಾಜೀಕರಣದಲ್ಲಿ ಹೊಂದಾಣಿಕೆಯ ಗುಣಗಳಿಗೆ ಹೆಚ್ಚು ಒತ್ತು ನೀಡಲಾಗುತ್ತದೆ. ವಿನಯ, ವಿಧೇಯತೆ, ಸಹನೆ, ಕ್ಷಮೆ, ಪ್ರೀತಿ-ವಿಶ್ವಾಸಗಳ ಸಾಕಾರ ಮೂರ್ತಿಯೇ ಹೆಣ್ಣು ಎಂಬಂತೆ ಬೋಧಿಸಲಾಗುತ್ತದೆ. ಲೈಂಗಿಕ ಜೀವನ ಮತ್ತದಕ್ಕೆ ಸಂಬಂಧಿಸಿದ ಪಾತ್ರಗಳಿಗೆ ತರಬೇತಿ ನೀಡುವಾಗ ಅವಳು ಎದುರಿಸಬೇಕಾದ ಸಮಸ್ಯೆಗಳು, ಅನಿಶ್ಚಿತತೆಗಳ ಬಗ್ಗೆ ನೆನಪಿಸಲಾಗುತ್ತದೆ. ಅವಳ ಸೇವೆ ಮತ್ತು ಪ್ರೀತಿ ಇನ್ನೊಂದು ಮನೆಗೆ ಮೀಸಲು. ಅಂಥ ಮನೆಯೊಂದಕ್ಕೆ ಅವಳನ್ನು ಸೇರಿಸುವ ಹೊಣೆಗಾರಿಕೆ ಮಾತ್ರ ತಂದೆಯದು. ಅನಂತರದ ಆಗುಹೋಗುಗಳಿಗೆ ಹೆತ್ತವರು ಜವಾಬ್ದಾರರಲ್ಲ'ಎನ್ನುವುದನ್ನು 'ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ'ಎಂಬ ಉಕ್ತಿಯ ಮೂಲಕ ಸ್ಪಷ್ಟಪಡಿಸಲಾಗುತ್ತದೆ. ತರಬೇತಿಯಲ್ಲಿ ಕೂಡ ಅವಳು ಮುಂದೆ ವಹಿಸಬೇಕಾದ ಸೊಸೆ, ಹೆಂಡತಿ, ತಾಯಿಯ ಪಾತ್ರಗಳನ್ನು ಗಮನದಲ್ಲಿಟ್ಟುಕೊಳ್ಳಲಾಗುತ್ತದೆ. ಅದಕ್ಕೆ ಅಗತ್ಯವಾದ ಜವಾಬ್ದಾರಿಗಳನ್ನು ಬಾಲ್ಯದಿಂದಲೇ ವಹಿಸಿಕೊಡಲಾಗುತ್ತದೆ. ಒಟ್ಟಿನಲ್ಲಿ ಹೆಣ್ಣು ತನ್ನ ಬಾಲ್ಯದಿಂದಲೇ 'ಪರರ'ಮನೆಗೆ ಹೋಗಲು ಸಿದ್ಧತೆಗಳನ್ನು ನಡೆಸಿರುತ್ತಾಳೆ; ಗಂಡಿಗಿಂತ ಹೆಚ್ಚು ಜವಾಬ್ದಾರಿಗಳನ್ನು ಹೊರುತ್ತಾಳೆ. ಅವಳಿಗೆ ದೊರಕುವ ಕಡಿಮೆ ಸಮಯಾವಧಿಯಲ್ಲಿಯೇ ಸಿದ್ಧತೆಗಳು ಪರಿಪೂರ್ಣವಾಗಬೇಕಾದ ಅಗತ್ಯವಿರುತ್ತದೆ. ಇಲ್ಲವಾದಲ್ಲಿ ಪರರ ಮನೆಯವರ ಅವಹೇಳನಕ್ಕೆ ಗುರಿಯಾಗಬೇಕಾಗುತ್ತದೆ.

ವಿವಾಹ ಹಿಂದೂಗಳ ದೃಷ್ಟಿಯಲ್ಲಿ ಒಂದು ಪವಿತ್ರವಾದ ಕರ್ತವ್ಯ, ಧಾರ್ಮಿಕ ವಿಧಿ. ಮಹಿಳೆಗೆ ಇರುವ ಒಂದೇ ಒಂದು ಸಂಸ್ಕಾರ. ಇದರಿಂದ ಅವಳು ಪವಿತ್ರಳಾಗುತ್ತಾಳೆ. ಜೀವನದಲ್ಲಿ ಒಮ್ಮೆ ಮಾತ್ರ ಹೊಂದಬಹುದಾದ ಈ ಸಂಸ್ಕಾರ ಅವಳಿಗೆ ಅನಿವಾರ್ಯ.

ಇಲ್ಲವಾದಲ್ಲಿ ಕುಲಕ್ಕೆ ಕಳಂಕ ತಟ್ಟುತ್ತದೆ ಎಂಬ ನಂಬಿಕೆ ಇದೆ. ಮುಸ್ಲಿಮರಲ್ಲಿ ವಿವಾಹ ವನ್ನು ಕೇವಲ ಒಂದು ಒಪ್ಪಂದ ಎಂದು ಪರಿಗಣಿಸಲಾಗಿದೆ.

ಮಹಿಳೆ ವಿವಾಹದ ಮೂಲಕ ಅಪರಿಚಿತ ಕುಟುಂಬವೊಂದಕ್ಕೆ ಪ್ರವೇಶ ಪಡೆಯುತ್ತಾಳೆ. ಇದು ಅಪರಿಚಿತವೆನ್ನಲು ಕಾರಣ ಭಾರತದಲ್ಲಿ ವಿವಾಹದಲ್ಲಿ ಗಂಡುಹೆಣ್ಣಿನ ಆಯ್ಕೆಯ ಹಲವು ಮಾದರಿಗಳಿವೆ. ಗ್ರಾಮೀಣ ಹಾಗೂ ನಗರ ಪ್ರದೇಶಗಳಲ್ಲಿ ಹಿರಿಯರು-ಕುಟುಂಬದ ಹಿರಿಯರು, ಹೆಣ್ಣು-ಗಂಡಿನ ತಂದೆ ತಾಯಿಂದಿರು-ತಮ್ಮ ಮಕ್ಕಳ ವಿವಾಹ ಯಾರೊಂದಿಗೆ ಆಗಬೇಕೆನ್ನುವುದನ್ನು ನಿರ್ಧರಿಸುತ್ತಾರೆ. ಗಂಡು ಮತ್ತು ಹೆಣ್ಣು ವಿವಾಹಕ್ಕೆ ಮುನ್ನ ಪರಸ್ಪರರನ್ನು ನೋಡಿರುವ ಸಾಧ್ಯತೆ ಇರುವುದಾದರೂ ನಿಕಟ ಸಂಪರ್ಕ ಹೊಂದುವ ಅವಕಾಶವಿರುವುದಿಲ್ಲ. ಇಂಥ ವಿವಾಹಗಳಲ್ಲಿ ಪ್ರಮಾಣ, ಕುಟುಂಬದ ಸಾಮಾಜಿಕ ಸ್ಥಾನಮಾನಗಳು, ಹಾಗೆಯೇ ಗಂಡಿನ ಶಿಕ್ಷಣ ಉದ್ಯೋಗ, ಕುಟುಂಬದ ಆರ್ಥಿಕ ಪರಿಸ್ಥಿತಿ, ಹಿನ್ನೆಲೆ ಮುಂತಾದವುಗಳು ಸಂಬಂಧ ಕುದುರಿಸುವ ಅಂಶಗಳಾಗುತ್ತವೆ.

ದಕ್ಷಿಣ ಭಾರತ, ಮಧ್ಯಭಾರತ ಮತ್ತು ಹಿಮಾಲಯದ ಕೆಲವು ಜನಾಂಗಗಳಲ್ಲಿ 'ಸ್ತ್ರೀಧನ'ದ ಪದ್ಧತಿ ಆಚರಣೆಯಲ್ಲಿದ್ದು ಇದು ಮಹಿಳೆಯ ಮೇಲಿನ ಹಕ್ಕನ್ನು ಹೆತ್ತವರಿಂದ ಗಂಡನ ಮನೆಯವರಿಗೆ ವರ್ಗಾಯಿಸುವ ಸಂಕೇತವೂ ಆಗಿದೆ(ನೀರಾದೇಸಾಯಿ).

ಅವಿಭಕ್ತ ಕುಟುಂಬಗಳೇ ವ್ಯಾಪಕವಾಗಿರುವ ಭಾರತದಲ್ಲಿ ಮಹಿಳೆಯೊಬ್ಬಳು ತನ್ನ ವೈವಾಹಿಕ ಜೀವನವನ್ನು ಸ್ವತಂತ್ರವಾಗಿ ಆರಂಭಿಸುವುದು ಅಪರೂಪ. ಪತಿ ತನ್ನ ತಂದೆತಾಯಿಗಳಿಂದ ದೂರವಾಗಿ ನೆಲೆಸಿದ್ದರೂ ಸಹ ಅವಳು ಮೊದಲಿಗೆ ಅವನ ತಂದೆತಾಯಿಗಳಿರುವ ಮನೆಯನ್ನೇ ಪ್ರವೇಶಿಸಬೇಕು. ವಿವಾಹವಾದ ಕೆಲವು ವರ್ಷಗಳು ಅವಳು ಸೊಸೆಯ ಪಾತ್ರಕ್ಕೆ ಅನ್ವಯಿಸುವ ಕೆಲವು ನೀತಿ ನಿಯಮಗಳನ್ನು ಪಾಲಿಸಬೇಕಾಗುತ್ತದೆ; ಹಲವು ನಿರ್ಬಂಧಗಳಿಗೊಳಪಡಬೇಕಾಗುತ್ತದೆ. ಅವಿಭಕ್ತ ಕುಟುಂಬಗಳಲ್ಲಿ ಸೊಸೆ ನೇರವಾಗಿ ಅತ್ತೆಯ ಅಧೀನದಲ್ಲಿರುತ್ತಾಳೆ. ತಮ್ಮ ಪೀಳಿಗೆಯ ಮುಂದುವರಿಕೆಗೆ ಕಾರಣಳಾಗುತ್ತಾಳೆ. ತಮ್ಮ ಪೀಳಿಗೆಯ ಮುಂದುವರಿಕೆಗೆ ಕಾರಣಳಾಗುತ್ತಾಳೆಂದು ಆ ಮನೆಯಲ್ಲಿ ಅವಳಿಗೆ ಸ್ವಾಗತ ದೊರಕುತ್ತದಾದರೂ ಅವಳಿಗೆ ಇಲ್ಲಿ ದೊರಕುವ ಹಕ್ಕುಗಳು ಕಡಿಮೆಯೇ. ಅವಳು ಕಡಿಮೆ ದರ್ಜೆಯ ಸದಸ್ಯಳೇ ಆಗಿರುತ್ತಾಳೆ. ಅವಳು ಆ ಕುಟುಂಬದವರೊಂದಿಗಿನ ಸಂಬಂಧಗಳ ಮೂಲಕ, ಮಕ್ಕಳಿಗೆ ಅದರಲ್ಲೂ ಗಂಡುಮಕ್ಕಳಿಗೆ ಜನ್ಮ ನೀಡುವ ಮೂಲಕ ಪ್ರೀತಿ-ವಿಶ್ವಾಸಗಳನ್ನು ಸ್ಥಾನಮಾನಗಳನ್ನು ಹೆಚ್ಚಿಸಿಕೊಳ್ಳಬೇಕಾಗುತ್ತದೆ. ಇದಕ್ಕೆ ತಪ್ಪಿದಲ್ಲಿ ತನ್ನ ಸ್ಥಾನವನ್ನು ಇನ್ನೊಬ್ಬಳಿಗೆ ಬಿಟ್ಟುಕೊಡಲು ಅಥವಾ ಅಲ್ಲಿಯೇ ಇದ್ದು ಮತ್ತಷ್ಟು ಕೆಳಸ್ಥಾನವನ್ನು ಪಡೆಯಲು ಸಿದ್ಧಳಾಗಬೇಕಾಗುತ್ತದೆ. ಡೇವಿಡ್ ಎ. ಮ್ಯಾಂಡೆಲ್ ಬಾಮ್ ರವರು ಭಾರತೀಯ ಕುಟುಂಬದಲ್ಲಿ ಸೊಸೆಯ ಸ್ಥಾನಮಾನಗಳ ಬಗ್ಗೆ ಹೀಗೆ ಹೇಳುತ್ತಾರೆ:'A Young wife of any jati or region usually has the lowest status in the family and is given the more onerous chores. whatever goes away, she

is apt to be called the culprit. Whatever the finger of blame is pointed, it sonehow swings to her.(Mandel bam: 1970: P.86)''.

ಮಹಿಳೆಯೊಬ್ಬಳಿಗೆ ತನ್ನ ಪತಿಯ ಮನೆಯಲ್ಲಿ ದೊರಕುವ ಸ್ಥಾನಮಾನ ಇನ್ನೂ ಕೆಲವು ಅಂಶಗಳಿಂದ ನಿರ್ಧರಿತವಾಗುತ್ತವೆ. ಅವೆಂದರೆ ೧. ಸಮಾಜದಲ್ಲಿ ಅವಳ ಹೆತ್ತವರ ಸ್ಥಾನ ಮಾನ, ೨. ಪತಿಯ ಉದ್ಯೋಗ ಮತ್ತು ಸಾಮಾಜಿಕ ಸ್ಥಾನಮಾನ ೩. ಮಧ್ಯಮ ಮತ್ತು ಮೇಲ್ವರ್ಗಗಳ ಕುಟುಂಬಗಳಲ್ಲಿ ಅವಳು ತರುವ ವರದಕ್ಷಿಣೆ ಮೊತ್ತ ಮತ್ತು ಉಡುಗೊರೆಗಳು.

ಮಹಿಳೆ ತಾಯ್ತನಕ್ಕೇರಿದಂತೆ, ಅತ್ತೆ ಇಳಿವಯಸ್ಸಿನವಳಾದಂತೆ, ಸೊಸೆಯಾಗಿ ತಾನು ಪಡೆಯದಿದ್ದ ಕೆಲವು ನಿರ್ಧಾರ ಹಕ್ಕುಗಳನ್ನು ಪಡೆಯುತ್ತಾಳೆ. ಅವಳ ಸ್ಥಾನ ಸ್ವಲ್ಪಮಟ್ಟಿಗೆ ಸುಧಾರಿಸುತ್ತಾ ಹೋಗುತ್ತದೆ. ಅವಿಭಕ್ತ ಕುಟುಂಬಗಳಲ್ಲಿ ಪತಿಯ ಸೋದರರು ಮಕ್ಕಳಿಗೆ ಚಿಕ್ಕಪ್ಪಂದಿರು, ದೊಡ್ಡಪ್ಪಂದಿರು ಆದರೆ, ಅವರ ಪತ್ನಿಯರು ಚಿಕ್ಕಮ್ಮಂದಿರು, ದೊಡ್ಡಪ್ಪಂದಿರು ಆಗುತ್ತಾರೆ. ಇಂಥ ಸಮೂಹ ಪೋಷಕತ್ವ ದುಡಿಯುವ ಮಹಿಳೆಯರಿಗೆ ವರದಾನವಾಗಬಹುದಾದರೂ, ತಂದೆ-ತಾಯಿ ಮತ್ತು ಮಕ್ಕಳ ನಡುವೆ ನಿಕಟ ಬಾಂಧವ್ಯಗಳು ಕಷ್ಟಸಾಧ್ಯವಾಗುತ್ತವೆ. ತಾಯಿಯಾಗಿ ತನ್ನ ಮಕ್ಕಳ ಮೇಲಿನ ಪ್ರೀತಿಯನ್ನು ವ್ಯಕ್ತಪಡಿಸುವುದಾಗಲೀ, ವಿಶೇಷ ಕಾಳಜಿಯನ್ನು ಹೊಂದುವುದಾಗಲೀ, ಅವರ ಮೇಲೆ ನಿಯಂತ್ರಣವನ್ನು ಹೊಂದುವುದಾಗಲೀ ಸಾಧ್ಯವಾಗುವುದಿಲ್ಲ. ಅಂಥ ನಡವಳಿಕೆಗಳು ನಿರೀಕ್ಷಿತವಲ್ಲ ಹಾಗೂ ಸಹ್ಯವಾಗುವುದಿಲ್ಲ. ಅವಳ ಸ್ಥಾನಮಾನಗಳು ತಾಯ್ತನದ ಮೂಲಕ ಹೆಚ್ಚುತ್ತವಾದರೂ ಮಕ್ಕಳನ್ನು ಕುರಿತ ಯಾವುದೇ ಸ್ವತಂತ್ರ ನಿರ್ಧಾರಗಳನ್ನು ತೆಗೆದುಕೊಳ್ಳಲು ಸಾಧ್ಯವಾಗುವುದಿಲ್ಲ. ೧೯೭೧ರಲ್ಲಿ ನೇಮಕಗೊಂಡ ಮಹಿಳೆಯರ ಸ್ಥಾನಮಾನಗಳ ಸಮಿತಿಯು ನಡೆಸಿದ ಸರ್ವೇಕ್ಷಣೆಯಲ್ಲಿ ತಿಳಿದು ಬಂದ ಅಂಶವೆಂದರೆ, ಮಹಿಳೆಯರ ನಿರ್ಧಾರದ ಹಕ್ಕು ಆಹಾರಧಾನ್ಯಗಳು ಮತ್ತಿತರ ಸಾಮಗ್ರಿಗಳನ್ನು ಖರೀದಿಸುವಲ್ಲಿಗೆ ಮಾತ್ರ ಸೀಮಿತಗೊಳ್ಳುತ್ತದೆಯೇ ಹೊರತು, ತನ್ನ ಮಕ್ಕಳ ಶಿಕ್ಷಣ, ಉದ್ಯೋಗ, ವಿವಾಹ, ಮಕ್ಕಳ ಸಂಖ್ಯೆ, ಅವುಗಳ ಲಿಂಗ ಮುಂತಾದ ವಿಷಯಗಳಲ್ಲಿ ಕಂಡುಬರುವುದಿಲ್ಲ.

ಮಹಿಳೆ ತಾನು ಪಡೆಯುವ ಮಕ್ಕಳ ಮೇಲೆ ಯಾವುದೇ ಹಕ್ಕನ್ನು ಹೊಂದಿರುವುದಿಲ್ಲ. ಅದೇನಿದ್ದರೂ ಆ ಹಕ್ಕು ಪತಿಯದೇ ಆಗಿರುತ್ತದೆ. ಪತಿಯ ಮನೆಯಲ್ಲಿ ತಾನು ದುಡಿಯುತ್ತಾಳಾದರೂ, ಅವಳಿಗೆ ಅಲ್ಲಿಯ ಆಸ್ತಿಯ ಮೇಲಿನ ಹಕ್ಕಾಗಲೀ, ಸಂಪನ್ಮೂಲಗಳ ಮೇಲಿನ ಹಿಡಿತವಾಗಲೀ ಇರುವುದಿಲ್ಲ. ಅವಳಿಗಿರುವುದು ಅಲ್ಲಿ ಬದುಕುವ ಹಕ್ಕು ಮಾತ್ರ; ಅದೂ ಕೂಡ ಆ ಕುಟುಂಬದವರು ಬಯಸಿದಲ್ಲಿ ಮಾತ್ರ. ಇಲ್ಲವಾದರೆ ತನ್ನ ತವರಿಗೆ ಮರಳಬೇಕಾಗುತ್ತದೆ, ಅಲ್ಲಿಯೂ ಬೇಡವಾಗಿ! ವಿಧವೆಯೊಬ್ಬಳು ಮಾತ್ರ. ತನ್ನ ಪತಿಯ ಆಸ್ತಿಯ ಮೇಲಿನ ಹಕ್ಕು ಹೊಂದಿರುತ್ತಾಳೆ; ಅದು ತಾನು ಮರು ವಿವಾಹವಾಗದಿದ್ದಲ್ಲಿ ಮಾತ್ರ ಸಾಧ್ಯವಾಗುತ್ತದೆ. ಮಕ್ಕಳು ಬೆಳೆದಂತೆ ಅದು ಮತ್ತೆ ಅವಳ ಕೈ ಜಾರಿ ಗಂಡುಮಕ್ಕಳಿಗೆ ವರ್ಗಾವಣೆಯಾಗುತ್ತದೆ.

ಪತಿಯ ಮರಣದೊಂದಿಗೆ ವಿಧವೆಯೊಬ್ಬಳು ತನಗಿದ್ದ ಕೆಲವು ಸ್ಥಾನಮಾನಗಳನ್ನು ಕುಟುಂಬದಲ್ಲಿ ಹಾಗೂ ಸಮಾಜದಲ್ಲಿ ಕಳೆದುಕೊಳ್ಳುತ್ತಾಳೆ. ಅವಳು ಅಮಂಗಳೆಯಾಗಿ ಕಾಣುತ್ತಾಳೆ. ಕೌಟುಂಬಿಕ ಶುಭಕಾರ್ಯಗಳಿಂದ, ಸಮೂಹದಿಂದ ಪ್ರತ್ಯೇಕಿಸಲ್ಪಡುತ್ತಾಳೆ. ಸಾಂಪ್ರದಾಯಿಕ ಮೇಲ್ಜಾತಿಯ ಕುಟುಂಬಗಳಲ್ಲಿ ಅವಳು ಮತ್ತಷ್ಟು ಕಟ್ಟುಪಾಡುಗಳಿಗೊಳಗಾಗುತ್ತಾಳೆ. ಅವಳ ಆಹಾರ, ಉಡುಪು, ದಿನಚರಿ, ಚಲನವಲನಗಳ ಮೇಲೆ ಹಲವು ಬಗೆಯ ನಿಯಂತ್ರಣಗಳನ್ನು ಹೇರಲಾಗುತ್ತದೆ. ಇಂದಿಗೂ ಕೆಲವು ಕುಟುಂಬಗಳಲ್ಲಿ ವಿಧವೆಯರನ್ನು ವಿರೂಪಗೊಳಿಸುವುದು ಮುಂದುವರೆದಿದೆ. ಇದಕ್ಕೆ ಧಾರ್ಮಿಕ ವಿವಾಹದೊಂದಿಗೆ ಹೆಣೆದುಕೊಂಡಿರುವ ಪಾತಿವ್ರತ್ಯದ ಕಲ್ಪನೆಯೂ ಕಾರಣವಾಗಿದೆ. ಇದರ ಆಧಾರದ ಮೇಲೆ ಅವಳಿಗೆ ಪತಿಯ ಮನೆಯಲ್ಲಿ ಪತಿಯ ಮರಣಾನಂತರವೂ ಆಶ್ರಯ ಮುಂದುವರೆಯುತ್ತದೆ. ವೃದ್ಧಾಪ್ಯದಲ್ಲೂ ಇದೇ ಆಧಾರವಾಗಿರುತ್ತದೆ.

ನಾವು ಇದುವರೆಗೆ ನೋಡಿದ ಅವಿಭಕ್ತ ಕುಟುಂಗಳಲ್ಲಿನ ಮಹಿಳೆಯರ ಪರಿಸ್ಥಿತಿಗಿಂತ ವಿಭಕ್ತ ಅಥವಾ ಚಿಕ್ಕ ಕುಟುಂಗಳಲ್ಲಿನ ಮಹಿಳೆಯರ ಪರಿಸ್ಥಿತಿ ಸ್ವಲ್ಪಮಟ್ಟಿಗೆ ಭಿನ್ನವಾಗಿ ಕಂಡುಬರುತ್ತದೆ. ಚಿಕ್ಕ ಕುಟುಂಬಗಳು ಇಂದು ಹೆಚ್ಚಾಗಿ ನಗರ ಪ್ರದೇಶಗಳಲ್ಲಿ ಕಂಡುಬರುತ್ತಿದ್ದು, ಗ್ರಾಮೀಣ ಪ್ರದೇಶಗಳಲ್ಲೂ ಇವುಗಳ ಸಂಖ್ಯೆ ಹೆಚ್ಚುತ್ತಿದೆ. ಇಂಥ ಕುಟುಂಬಗಳು ಆರ್ಥಿಕ ಸ್ವಾವಲಂಬನೆ ಅಥವಾ ಸ್ವಾಯತ್ತತೆಯನ್ನು ಹೊಂದಿರುತ್ತವೆ. ಅದು ಪತಿಯ ಅಥವಾ ದಂಪತಿಗಳಿಬ್ಬರ ವೇತನಗಳಾಗಿರಬಹುದು ಅಥವಾ ಪತಿಯ ಆಸ್ತಿಯಿಂದಾಗಿರಬಹುದು. ಇದರಿಂದಾಗಿ ಕುಟುಂಬದ ಆರ್ಥಿಕತೆಗೆ ಸಂಬಂಧಿಸಿದ ನಿರ್ಧಾರಗಳನ್ನು ಪತಿ ಅಥವಾ ದಂಪತಿಗಳು ತೆಗೆದುಕೊಳ್ಳುತ್ತಾರೆ. ಅಂದರೆ ಇದುವರೆಗೆ ಅವಿಭಕ್ತ ಕಟುಂಬಗಳಲ್ಲಿ ಹಿರಿಯರು ಹೊಂದಿದ್ದ ಕೆಲವು ಹಕ್ಕುಗಳು ಇಲ್ಲಿ ಸಂಪಾದಿಸುವ ವ್ಯಕ್ತಿಗೆ ವರ್ಗಾವಣೆಯಾಗುತ್ತವೆ. ಹಿರಿಯರ ಹಿಡಿತದಿಂದ ಬಿಡಿಸಿಕೊಳ್ಳುವ ವ್ಯಕ್ತಿ ಕೇವಲ ಪತಿ ಮಾತ್ರ ಅಲ್ಲ, ಮಹಿಳೆಯೂ ಕೂಡ. ಅವಿಭಕ್ತ ಕುಟುಂಬದಲ್ಲಿ ತನ್ನ ಅತ್ತೆ ಪಡೆದಿದ್ದ ಸ್ಥಾನವನ್ನು ಇಲ್ಲಿ ತಾನು ಪಡೆದಿರುತ್ತಾಳೆ. ಕಡಿಮೆ ಕಟ್ಟುಪಾಡುಗಳು ನಿರ್ವಹಣೆ-ನಿರ್ಧಾರಗಳಲ್ಲಿ ಭಾಗವಹಿಸುವಿಕೆ, ಚಲನೆಯ ಸ್ವಾತಂತ್ರ್ಯ, ಹೊರಜಗತ್ತಿನ ಸಂಪರ್ಕ, ಶಿಕ್ಷಣ, ಉದ್ಯೋಗದಿಂದ ದೊರೆತ ಆರ್ಥಿಕ ಸ್ವಾವಲಂಬನೆ ಮುಂತಾದವು ಅವಳ ಪ್ರಪಂಚವನ್ನು ಸಾಂಪ್ರದಾಯಿಕ ಅವಿಭಕ್ತ ಕುಟುಂಬಗಳಲ್ಲಿನ ಮಹಿಳೆಯರ ಪ್ರಪಂಚಕ್ಕಿಂತ ಬೇರೆಯಾಗಿಸಿವೆ. ಅವಳಲ್ಲಿ ಹೆಚ್ಚು ಆತ್ಮವಿಶ್ವಾಸವನ್ನು ಮೂಡಿಸಿವೆ. ಅಲ್ಲಿ ಕೇವಲ ಯಜಮಾನನಾಗಿ ಕಾಣುತ್ತಿದ್ದ ಪತಿ ಇಲ್ಲಿ ಗೆಳೆಯನಾಗಿ, ಪ್ರೇಮಿಯಾಗಿ ಕಾಣಿಸಿಕೊಳ್ಳುತ್ತಾನೆ. ಪತಿಯ ಮನೆಯಲ್ಲಿ ಅವಳ ಸ್ಥಾನಮಾನ ಅವನೊಂದಿಗಿನ ಹೊಂದಾಣಿಕೆಯನ್ನು ಮಾತ್ರ ಆಧರಿಸಿರುತ್ತದೆ. ಲಕ್ನೋದಲ್ಲಿ ಶ್ರೀ ವಾಸ್ತವರವರು ನಡೆಸಿದ ಅಧ್ಯಯನದಿಂದ, ಚಿಕ್ಕಕುಟುಂಬಗಳಲ್ಲಿ ಶೇಕಡ ೬೦ ಮಂದಿ ಮಹಿಳೆಯರು ಕೌಟುಂಬಿಕ ನಿರ್ಧಾರಗಳಲ್ಲಿ ಪಾಲ್ಗೊಳ್ಳುತ್ತಾರೆಂದು ತಿಳಿದುಬರುತ್ತದೆ(ಜಿ.ಎಸ್ .ರಾಮು, ಪು:೬೧). ರೈತ ಮತ್ತು ಕುಶಲ

ಕರ್ಮಿಗಳ ಕುಟುಂಬಗಳ ಮಹಿಳೆಯರು ತಾವು ಮನೆಯ ಹೊರಗೆ ದುಡಿಯುವುದರ ಮೂಲಕ ಪುರುಷರಿಗೆ ಸಮಾನವಾದ ಸ್ಥಾನಮಾನಗಳನ್ನು ಪಡೆದಿದ್ದಾರೆ ಎನ್ನಲಾಗಿದೆ(ಬಾರ್ಬರ ವಾರ್ಡ್(ಸಂ), ವುಮೆನ್ ಇನ್ ದಿ ನ್ಯೂ ಏಷ್ಯಾ, ಯುನೆಸ್ಕೊ, ೧೯೬೫, ಪು:೧೯೬೪).

ಸಮಾಜಶಾಸ್ತ್ರಜ್ಞರಾದ ಜಿ.ಎನ್ .ರಾಮುರವರು ೧೯೮೮ರಲ್ಲಿ ಬೆಂಗಳೂರಿನಲ್ಲಿ ನಡೆಸಿದ ಅಧ್ಯಯನದಿಂದ ತಿಳಿದುಬಂದ ಅಂಶಗಳೆಂದರೆ, ಮನೆಯಿಂದ ಹೊರಗೆ ದುಡಿಯದ ಮಹಿಳೆಯರು ಕೌಟುಂಬಿಕ ನಿರ್ಧಾರಗಳಲ್ಲಿ ಮಹತ್ವದ ಪಾತ್ರವಹಿಸುತ್ತಿರಲಿಲ್ಲ. ಮನೆಗೆಲಸವನ್ನು ತಮ್ಮದೇ ಜವಾಬ್ದಾರಿ ಎಂದು ಭಾವಿಸಿದ್ದರು. ಆದರೆ ಉದ್ಯೋಗದಲ್ಲಿದ್ದ ಮಹಿಳೆಯರು ತಮಗಿದ್ದ ಚಲನೆಯ ಸ್ವಾತಂತ್ರ್ಯ, ಆರ್ಥಿಕ ಸ್ವಾವಲಂಬನೆಯನ್ನು ಅನುಭವಿಸುವುದರ ಜೊತೆಗೆ ಕೌಟುಂಬಿಕ ನಿರ್ಧಾರಗಳಲ್ಲಿ ಪಾಲ್ಗೊಳ್ಳುತ್ತಿದ್ದರು. ಅಂತೆಯೇ ಮನೆಯ ಒಳಗೆ ಮತ್ತು ಹೊರಗಿನ ದುಡಿಮೆಯಿಂದ ಬಳಲುತ್ತಿದ್ದರು; ಅಸಮಾಧಾನ ಹೊಂದಿದ್ದರು. ಆದರೆ ಇದನ್ನು ಪ್ರಶ್ನೆ ಮಾಡುವ ಧೈರ್ಯವಿರಲಿಲ್ಲ. ಮಹಿಳೆಯರು ಉದ್ಯೋಗದಲ್ಲಿರುವುದಕ್ಕೂ ಇಲ್ಲದಿರುವುದಕ್ಕೂ ಮತ್ತು ವೈವಾಹಿಕ ಬದುಕಿನಲ್ಲಿನ ಹೊಂದಾಣಿಕೆ ಅಥವಾ ಭಿನ್ನಾಭಿಪ್ರಾಯಗಳಿಗೂ ಸಂಬಂಧವಿರಲಿಲ್ಲ.

ನಾವು ಇದುವರೆಗೆ ಪರಿಶೀಲಿಸಿದ ಅವಿಭಕ್ತ ಮತ್ತು ವಿಭಕ್ತ ಕುಟುಂಬಗಳಲ್ಲಿ ಮಹಿಳೆಯರ ಪರಿಸ್ಥಿತಿ ಸ್ವಲ್ಪಮಟ್ಟಿನ ಬದಲಾವಣೆಯ ಅಲೆಗಳಿಗೆ ಸಿಲುಕಿದೆ ಎಂದೆನಿಸಿದರೂ ಕೆಲವೊಮ್ಮೆ ವಿರುದ್ಧ ಶಕ್ತಿಗಳ ಒತ್ತಡದಿಂದಾಗಿ ಹೆಚ್ಚು ಸಂಕೀರ್ಣಗೊಳ್ಳುತ್ತಿವೆ ಎಂದು ಭಾಸವಾಗುತ್ತದೆ. ಒಂದೆಡೆ ಗಂಡು ಮತ್ತು ಹೆಣ್ಣು ಅಸಮಾನರೆಂದು ಬಗೆಯುವ ಸಾಮಾಜಿಕ ಸಾಂಸ್ಕೃತಿಕ ಮೌಲ್ಯಗಳ, ಇನ್ನೊಂದೆಡೆ ಕಾನೂನಿನ ತಿದ್ದುಪಡಿಗಳು, ಸಾಮಾಜಿಕ ಸುಧಾರಣೆಗಳು, ಸಂವಿಧಾನಾತ್ಮಕವಾದ ಸಮಾನತೆಯ ಮೌಲ್ಯಗಳು, ಬದಲಾಗುತ್ತಿರುವ ಆರ್ಥಿಕ ಪರಿಸ್ಥಿತಿ, ಶೈಕ್ಷಣಿಕ ಮತ್ತು ಔದ್ಯೋಗಿಕ ಅವಕಾಶಗಳು ಮುಂತಾದವು ಸಾಂಪ್ರದಾಯಿಕವಾದ ಕೌಟುಂಬಿಕ ರಚನೆಗಳಿಗೆ, ಉದ್ದೇಶಗಳಿಗೆ, ನಿರೀಕ್ಷೆಗಳಿಗೆ ಕೊಡಲಿಪೆಟ್ಟು ಹಾಕುತ್ತಿರುವಂತಿವೆ. ಆದರೂ ಅಂಥ ಮಹತ್ತರವಾದ ಬದಲಾವಣೆಗಳು ಕುಟುಂಬ ವ್ಯವಸ್ಥೆಯಲ್ಲಿ ಕಂಡುಬರುತ್ತಿಲ್ಲ. ಇಂದಿಗೂ ಅದೊಂದು ಶೋಷಕ ಸಂಸ್ಥೆಯಾಗಿ, ಪಿತೃಪ್ರಧಾನ ಮೌಲ್ಯಗಳ ಭದ್ರಕೋಟೆಯಾಗಿಯೇ ಉಳಿದಿದೆ ಎನ್ನುವುದು ಮಹಿಳೆ ಇಂದು ಎದುರಿಸುತ್ತಿರುವ ಸಮಸ್ಯೆಗಳ ಮೂಲ ಸ್ವರೂಪಗಳನ್ನು ಗಮನಿಸಿದಾಗ ವೇದ್ಯವಾಗುತ್ತದೆ.

ಇಂದಿಗೂ ಹೆಣ್ಣು ಕುಟುಂಬದಲ್ಲಿ ಬೇಡವಾದ ಮಗುವೇ ಆಗಿದೆ. ಅವಳನ್ನು ಕುಟುಂಬಕ್ಕೆ ಒಂದು ಹೊರೆ ಎಂದೇ ಭಾವಿಸಲಾಗುತ್ತದೆ. ಇದಕ್ಕೆ ವಿದ್ಯಾವಂತ ಕುಟುಂಬಗಳೂ ಹೊರತಾಗಿಲ್ಲ. ಇಂದು ಸರಕಾರ ಕುಟುಂಬವೊಂದಕ್ಕೆ ಎರಡು ಮಕ್ಕಳಿಂದ ಒಂದು ಮಗು ಎಂಬ ಗುರಿ ಹಾಕುತ್ತಿದ್ದಂತೆ, ವಿದ್ಯಾವಂತ ಕುಟುಂಬಗಳಲ್ಲೇ ಹೆಣ್ಣು ಭ್ರೂಣ ಹತ್ಯೆಯ ಪ್ರಸಂಗಗಳು ಹೆಚ್ಚಾಗುತ್ತಿವೆ.

೧೯೭೮-೮೨ರ ಅವಧಿಯಲ್ಲಿ ಸುಮಾರು ೭೮,೦೦೦ ಹೆಣ್ಣುಭ್ರೂಣಗಳು ಆಮ್ನಿಯೊಸೆಂಟಿಸಿಸ್ ಪರೀಕ್ಷೆಗೊಳಪಟ್ಟು ನಂತರದಲ್ಲಿ ಗರ್ಭಪಾತಕ್ಕೊಳಗಾಗಿವೆ ಎಂದು

೧೯೮೩ರಲ್ಲಿ 'ಟೈಂಸ್ ಆಫ್ ಇಂಡಿಯಾ' ಪತ್ರಿಕೆ ವರದಿ ಮಾಡಿತ್ತು. ಇಂದು ಈ ಸಂಖ್ಯೆ ಮತ್ತಷ್ಟು ಏರಿರುವ ಸಾಧ್ಯತೆಗಳಿವೆ.

ಹೆಣ್ಣು ಶಿಶುಹತ್ಯೆಗಳು ದೇಶದ ಹಲವು ರಾಜ್ಯಗಳಲ್ಲಿ-ರಾಜಾಸ್ಥಾನ, ತಮಿಳುನಾಡು, ಕರ್ನಾಟಕ ಕೆಲವು ಜನಾಂಗಗಳಲ್ಲಿ ಕಂಡುಬರುತ್ತವೆ. ಹೆಣ್ಣುಮಕ್ಕಳನ್ನೇ ಪಡೆಯುವ ತಾಯಂದಿರು ಕುಟುಂಬದ ತಿರಸ್ಕಾರಕ್ಕೆ, ಸಮಾಜದ ಅವಹೇಳನಕ್ಕೆ ಗುರಿಯಾಗುತ್ತಾರೆ.

ಕುಟುಂಬಕ್ಕೆ ಬೇಡವಾಗಿ ಹುಟ್ಟುವ ಹೆಣ್ಣು ಮಕ್ಕಳು ಹಲವು ರೀತಿಯ ತಾರತಮ್ಯಕ್ಕೆ, ಎಲ್ಲರ ನಿರ್ಲಕ್ಷ್ಯಕ್ಕೆ ಒಳಗಾಗುತ್ತಾರೆ. ಆಹಾರದಲ್ಲಿ, ವೈದ್ಯಕೀಯ ಉಪಚಾರಗಳಲ್ಲಿ ತಾರತಮ್ಯಕ್ಕೊಳಗಾಗಿ ಮರಣ ಹೊಂದುವದರಿಂದ ೫ ವರ್ಷ ವಯೋಗುಂಪಿನ ಮಕ್ಕಳಲ್ಲಿ ಗಂಡುಮಕ್ಕಳ ಸಂಖ್ಯೆ ಇಂದು ಹೆಚ್ಚಿದೆ.

ಇಂದು ಕುಟುಂಬದಲ್ಲಿ ನಡೆಯುವ ಸಾಮಾಜೀಕರಣ ಪ್ರಕ್ರಿಯೆಯಲ್ಲಿ ಸಾಕಷ್ಟು ಅಸಮಾನತೆಯ ಅಂಶಗಳೇ ತುಂಬಿವೆ. ಆಟಪಾಟಗಳಲ್ಲಿ ತೊಡಗಬೇಕಾದ ಮಕ್ಕಳು ಮನೆಯಲ್ಲಿ ದುಡಿಯುತ್ತಾರೆ. ಶಾಲೆಗೆ ಹೋಗಬೇಕಾದ ಮಕ್ಕಳ ಮೇಲೆ ಹೇರುವ ಕಟ್ಟುಪಾಡುಗಳಿಂದಾಗಿ ಶಾಲಾ ಶಿಕ್ಷಣದಿಂದ ಹೆಣ್ಣುಮಕ್ಕಳು ವಂಚಿತರಾಗುತ್ತಿದ್ದಾರೆ. ಇಂದು ಮಹಿಳಾ ಸಾಕ್ಷರತೆಯ ಪ್ರಮಾಣ ಶೇಕಡ ೩೯.೪೨ ಮಾತ್ರವಿದ್ದು ಹೆಣ್ಣು ಮಕ್ಕಳು ಬಾಲ್ಯದಲ್ಲಿಯೇ ಶಾಲೆಯಿಂದ ವಿಮುಖರಾಗುವುದು ಕಾರಣವಾಗಿದೆ. ಇದು ಅವರ ಚಲನೆಯ ಮೇಲೆ ಕುಟುಂಬವು ನಿಯಂತ್ರಣ ಹೊಂದಿರುವುದರಿಂದ ಆಗಿದೆ. ಇಂಥ ನಿಯಂತ್ರಣ ಕೇವಲ ಮಕ್ಕಳಿಗೆ ಮಾತ್ರ ಸೀಮಿತವಾಗಿಲ್ಲ. ಹೆಣ್ಣು ಮಕ್ಕಳು ಬೆಳೆದಂತೆ ಇದು ಹೆಚ್ಚುತ್ತಾ ಹೋಗುತ್ತದೆ. ಯೌವ್ವನದಲ್ಲಿ ಇದು ಉಸಿರುಗಟ್ಟಿಸುವ ಮಟ್ಟವನ್ನು ತಲುಪುತ್ತದೆ. ಇದಕ್ಕೆ ವಿವಾಹಿತ, ಅವಿವಾಹಿತ, ಶಿಕ್ಷಿತ-ಅಶಿಕ್ಷಿತ ಉದ್ಯೋಗಸ್ಥ-ನಿರುದ್ಯೋಗಸ್ಥ ಮಹಿಳೆಯರೂ ಹೊರತಾಗಿಲ್ಲ. ಈ ಕಾರಣಕ್ಕಾಗಿಯೇ ಮಹಿಳೆಯರು ಸಾಮಾಜಿಕ-ಆರ್ಥಿಕ-ರಾಜಕೀಯ ಚಟುವಟಿಕೆಗಳಲ್ಲಿ ಅಲ್ಪಸಂಖ್ಯಾತರಾಗಿದ್ದಾರೆ ಅಥವಾ ಕೆಲವು ಕ್ಷೇತ್ರಗಳಲ್ಲಿ ಇಲ್ಲವೇ ಇಲ್ಲ ಎನ್ನುವಂತಿದ್ದಾರೆ. ಹಾಗೆ ನಿರ್ಬಂಧಗಳನ್ನು ಮೀರಲು ಪ್ರಯತ್ನಿಸಿದ ಮಹಿಳೆಯರು ಹಲವು ತೊಡಕುಗಳನ್ನು ಎದುರಿಸಬೇಕಾಗುತ್ತದೆ; ಸಾರ್ವಜನಿಕ ಟೀಕೆಗೊಳಗಾಗಬೇಕಾಗುತ್ತದೆ.

ಹೆಣ್ಣು ಮಕ್ಕಳ ವಿವಾಹದ ವಯಸ್ಸು ೧೮ ಎಂದು ಕಾನೂನು ಹೇಳುತ್ತಿದ್ದರೂ ನಮ್ಮ ಸಮಾಜದಲ್ಲಿ ಬಾಲ್ಯವಿವಾಹಗಳು ರಾಜಾರೋಷವಾಗಿ ನಡೆಯುತ್ತಿವೆ. ರಾಜಾಸ್ಥಾನದಂಥ ರಾಜ್ಯಗಳಲ್ಲಿ ಸಾಮೂಹಿಕ ಬಾಲ್ಯವಿವಾಹಗಳು ನಡೆಯುತ್ತಿರುವುದು ತಿಳಿದೇ ಇದೆ. ೧೦-೧೪ ವಯೋಗುಂಪಿನ ಶೇಕಡ ೨.೧೮ರಷ್ಟು ನಗರ ಪ್ರದೇಶಗಳಲ್ಲಿ, ಶೇಕಡ ೫.೩೦ರಷ್ಟು ಗ್ರಾಮೀಣ ಪ್ರದೇಶಗಳಲ್ಲಿ ಹೆಣ್ಣುಮಕ್ಕಳು ಬಾಲ್ಯದಲ್ಲಿಯೇ ವೈವಾಹಿಕ ಜೀವನಕ್ಕೆ ಕಾಲಿಡುತ್ತಿದ್ದಾರೆ. ಏನೂ ತಿಳಿಯದ ವಯಸ್ಸಿನಲ್ಲಿ ಲೈಂಗಿಕ ಜೀವನವನ್ನು ಆರಂಭಿಸುತ್ತಾರೆ(ಶೇ.೭೬.೧) ದೈಹಿಕ ಬೆಳವಣಿಗೆ ಹೊಂದುವ ಮೊದಲೇ, ಮಾನಸಿಕ ಸಿದ್ಧತೆ

ನಡೆಯುವ ಮೊದಲೇ ತಾಯಂದಿರಾಗುತ್ತಾರೆ. ಈ ಮಕ್ಕಳ ಬದುಕು ಅಪಾಯದ ಅಂಚಿನಲ್ಲಿರುತ್ತದೆ. ಚಿಕ್ಕವಯಸ್ಸಿನಲ್ಲಿ ಮಕ್ಕಳನ್ನು ಬೆಳೆಸುವ ಜವಾಬ್ದಾರಿಯನ್ನು ಹೊರಬೇಕಾದ ಈ ಮಕ್ಕಳ ದೈಹಿಕ-ಮಾನಸಿಕ ಬೆಳವಣಿಗೆಗಳು ನಿಸ್ಸಂದೇಹವಾಗಿ ಕುಂಠಿತಗೊಳ್ಳುತ್ತವೆ.

ಮಹಿಳೆಯ ಬಾಳಿನ ಗುರಿ ವಿವಾಹವೇ ಎನ್ನುವ ನಂಬಿಕೆ ಇಂದೂ ಮುಂದುವರಿಯುತ್ತಿದೆ. ಇದರ ಪರಿಣಾಮವಾಗಿ ವಿವಾಹಿತ ಮಹಿಳೆಯ ಸ್ಥಾನಮಾನಗಳು ಒಬ್ಬ ಅವಿವಾಹಿತ, ವಿಚ್ಛೇದಿತ ಅಥವಾ ವಿಧವೆಯ ಸ್ಥಾನಮಾನಗಳಿಗಿಂತ ಉತ್ತಮವಾಗಿರುತ್ತದೆ. ವಿವಾಹ ಬಾಳಿನ ಗುರಿ ಎಂಬ ನಂಬಿಕೆಯಿಂದಾಗಿ ಹೆಣ್ಣು ಮಕ್ಕಳ ಪೋಷಕರು ತಮ್ಮ 'ಕನ್ಯಾಸೆರೆ'ಯನ್ನು ಬಿಡಿಸಿಕೊಳ್ಳಲು ಕಾತರರಾಗಿರುತ್ತಾರೆ. ಇದಕ್ಕೆ ಸುಲಭೋಪಾಯವಾಗಿ ವರದಕ್ಷಿಣೆಯ ಮೊತ್ತವನ್ನು ಹೆಚ್ಚಿಸುತ್ತಾ ಹೋಗಿ ತಮ್ಮ ಮಕ್ಕಳ ಬಲಿಪೀಠವನ್ನು ಸಿದ್ಧಪಡಿಸುತ್ತಾರೆ. ವರದಕ್ಷಿಣೆಯಿಂದ ಸಾಮಾಜಿಕ ಪಿಡುಗಿಗೆ ಕಾರಣರಾಗುತ್ತಿದ್ದಾರೆ. ಇಂದು ಪ್ರತಿ ೧ ಗಂಟೆ ೪೨ ನಿಮಿಷಗಳಿಗೊಮ್ಮೆ ಒಂದು ವರದಕ್ಷಿಣೆ ಸಾವು ದೇಶದಲ್ಲಿ ಸಂಭವಿಸುತ್ತಿರುವುದು, ವರದಕ್ಷಿಣೆಯ ಹಿಂಸೆಯ ಪ್ರಕರಣಗಳು ಹೆಚ್ಚುತ್ತಿರುವುದು ಸಮಸ್ಯೆಯ ತೀವ್ರತೆಯನ್ನು ಬಿಂಬಿಸುತ್ತದೆ.

ಕುಟುಂಬ ಮಹಿಳೆಯರ ಲೈಂಗಿಕತೆಯನ್ನು ನಿಯಂತ್ರಿಸುವ ವಿಧಾನವಾಗಿ 'ಪಾತಿವ್ರತ್ಯ' 'ಕನ್ಯತ್ವ', 'ಏಕಪತಿತ್ವ, ಸತಿ ಮುಂತಾದ ಕಲ್ಪನೆಗಳನ್ನು, ಆಚರಣೆಗಳನ್ನು ಹುಟ್ಟುಹಾಕಿದೆ. ವಿವಾಹ ಪೂರ್ವ ಹಾಗೂ ವಿವಾಹಾನಂತರದಲ್ಲಿ ಪತಿಯನ್ನಲ್ಲದೆ ಬೇರೊಬ್ಬನೊಂದಿಗಿನ ಲೈಂಗಿಕ ಸಂಬಂಧ ಮಹಿಳೆಯ ವಿಷಯದಲ್ಲಿ ಅಕ್ಷಮ್ಯ ಅಪರಾಧವಾದರೆ, ಪುರುಷನ ವಿಷಯದಲ್ಲಿ ಹಾಗಾಗುವುದಿಲ್ಲ. ಅದನ್ನು ಮಾನ್ಯ ಮಾಡಲಾಗುತ್ತದೆ. ಅದು ಸಾಮಾಜಿಕ ಸ್ಥಾನಮಾನಗಳನ್ನು ಹೆಚ್ಚಿಸುವ ಸಂಕೇತವಾಗುತ್ತದೆ. ಆದರೆ ಮಹಿಳೆಯ ವಿವಾಹರಹಿತ ಅಥವಾ ವಿವಾಹ ಬಾಹಿರ ಲೈಂಗಿಕ ಸಂಬಂಧಗಳು ಅವಳಿಗೆ 'ಕುಲಟೆ', 'ವೇಶ್ಯೆ' ಮುಂತಾದ ಪಟ್ಟ ಕಟ್ಟುತ್ತವೆ. ಒಂದೆಡೆ ಮಹಿಳೆಯನ್ನು ವಿವಾಹವೇ ಜೀವನದ ಗುರಿ ಎಂದು ನಂಬಿಸಿ ಕುಟುಂಬ ವ್ಯವಸ್ಥೆಯಲ್ಲಿ ಬಂಧಿಸಿಡುವ ಪಿತೃಪ್ರಧಾನ ವ್ಯವಸ್ಥೆ ಇನ್ನೊಂದೆಡೆ ವಿವಾಹವನ್ನು ನಿಷೇಧಿಸುವ ಮೂಲಕ ಕುಟುಂಬ ವ್ಯವಸ್ಥೆಯಿಂದ ದೂರವಿರಿಸಿ ಮಹಿಳೆಯರನ್ನು ಲೈಂಗಿಕ ವ್ಯಾಪರಕ್ಕಿಳಿಯುವಂತೆ ಪ್ರೇರಪಿಸುವ ದೇವದಾಸಿ ಪದ್ಧತಿಯನ್ನು ಹುಟ್ಟುಹಾಕಿದೆ. ಲೈಂಗಿಕ ನಿಯಂತ್ರಣದ ಪರಾಕಾಷ್ಠೆಯೆಂಬಂತೆ, ವಿಧವೆಯ ಕೇಶ ಮುಂಡನ, 'ಸತಿ'ಯಂಥ ಕ್ರೂರಪದ್ಧತಿಗಳು ಪಿತೃಪ್ರಧಾನ ಕುಟುಂಬ ವ್ಯವಸ್ಥೆಯ ಫಲವಾಗಿವೆ.

ಹೆಣ್ಣನ್ನು ಕೇವಲ ಲೈಂಗಿಕ ವಸ್ತುವಾಗಿ ಬಳಸಿಕೊಳ್ಳುವ ಕುಟುಂಬ ವ್ಯಕ್ತಿ-ವ್ಯಕ್ತಿಗಳ, ಜಾತಿ-ಜಾತಿಗಳ, ಧರ್ಮ-ಧರ್ಮಗಳ, ದೇಶ-ದೇಶಗಳ ನಡುವಿನ ವೈಷಮ್ಯಕ್ಕೆ ಮಹಿಳೆಯರನ್ನು ಅತ್ಯಾಚಾರದಂಥ ಬರ್ಬರ ಕೃತ್ಯಗಳಿಗೆ ಈಡಾಗಿಸುವ ಪರಿಸ್ಥಿತಿಯ ನಿರ್ಮಾಣಕ್ಕೆ ಕಾರಣವಾಗಿದೆ. ಇಲ್ಲಿ ಮಹಿಳೆ ಕೇವಲ ಯಾರದೋ ಸೊತ್ತಾಗಿ, ಸೇಡು ತೀರಿಸಿಕೊಳ್ಳುವ

ಸಾಧನವಾಗುತ್ತಾಳೆ; ಪುರುಷರ ಮಾನಾಪಮಾನಗಳ ಸಂಕೇತವಾಗುತ್ತಾಳೆ.

ಮಹಿಳೆಯರ ಮೇಲಿನ ಹಿಂಸೆಯ ಪ್ರಕರಣಗಳು ಶತಮಾನಗಳಿಂದ ಅನೂಚಾನವಾಗಿ ನಡೆದುಬಂದಿದ್ದು ಪಿತೃಪ್ರಧಾನವಾದ ಕುಟುಂಬಗಳು ಅದಕ್ಕೆ ಅನುಕೂಲವಾದ ಪರಿಸ್ಥಿತಿಯನ್ನು ನಿರ್ಮಿಸಿದೆ. ಹಿಂಸೆಯು ಬಲವಂತದ ಮತ್ತು ಬಲಹೀನರ ನಡುವೆ ಉಂಟಾಗುತ್ತದೆ. ಕುಟುಂಬದಲ್ಲಿ ಮಹಿಳೆ ಅನಕ್ಷರತೆ, ಅಜ್ಞಾನ, ತಾರತಮ್ಯ, ಆರ್ಥಿಕ ಪರವಾಲಂಬನೆ, ಪಿತೃಪ್ರಧಾನ ಮೌಲ್ಯ, ಕೌಟುಂಬಿಕ ನಿಯಂತ್ರಣಗಳು ಮತ್ತು ನಿರ್ಬಂಧಗಳಿಂದ ದುರ್ಬಲಳಾಗುತ್ತಾಳೆ. ಎಲ್ಲ ಸವಲತ್ತುಗಳನ್ನು, ಅಧಿಕಾರ ಮತ್ತು ಹಕ್ಕುಗಳನ್ನು ಪಡೆಯುವ ಪುರುಷ ಕುಟುಂಬದಲ್ಲಿ ಬಲಶಾಲಿಯಾಗುತ್ತಾನೆ. ಇದು ಪುರುಷ ಮಹಿಳೆಯನ್ನು ಹಿಂಸಿಸಲು ಅನುಕೂಲ ಪರಿಸ್ಥಿತಿಯಾಗಿದೆ. ಇಲ್ಲಿ ಹಿಂಸೆ ಹಲವು ರೂಪಗಳಲ್ಲಿ ಅಂದರೆ ಹೊಡೆತ, ಕಿರುಕುಳ, ಅತ್ಯಾಚಾರ, ಸಾವು, ಲೈಂಗಿಕ ದುರ್ಬಳಕೆ ಮುಂತಾದವುಗಳಲ್ಲಿ ವ್ಯಕ್ತವಾಗುತ್ತವೆ. ಆದರೆ ಇವುಗಳನ್ನು ಖಾಸಗಿ ವಿಷಯವೆಂದು ಪರಿಗಣಿಸಲಾಗುತ್ತದೆ. ಹಿಂಸೆಗೊಳಗಾಗುವ ಮಹಿಳೆಯರು ಮತ್ತು ಹಿಂಸಿಸುವ ಪುರುಷರು ಇಬ್ಬರೂ ಅದನ್ನು ಖಾಸಗಿ ವಿಷಯವೆಂದು ಭಾವಿಸುವುದರಿಂದಾಗಿಯೇ ವರದಕ್ಷಿಣೆ ಕಿರುಕುಳದಿಂದ ವರದಕ್ಷಿಣೆ ಸಾವಿನಲ್ಲಿ ಪರ್ಯವಸಾನಗೊಳ್ಳುವವರೆಗೂ ಅದು ಕುಟುಂಬಗಳಲ್ಲಿ ರಹಸ್ಯವಾಗಿಯೇ ಉಳಿದು ನಂತರ ಬೆಳಕಿಗೆ ಬರುತ್ತದೆ. ಎಷ್ಟೋ ಪ್ರಸಂಗಗಳು ದಾಖಲಾಗದೇ ಹೋಗುವುದೇ ಹೆಚ್ಚು.

ಚಿಕ್ಕ ಮಕ್ಕಳ ಲೈಂಗಿಕ ದುರ್ಬಳಕೆ, ಅತ್ಯಾಚಾರದಂಥ ಪ್ರಕರಣಗಳು ಕುಟುಂಬದಲ್ಲಿ, ಪರಿಚಿತರು, ನೆರೆಯವರು, ಸಂಬಂಧಿಗಳು, ಮನೆಯವರಿಂದಲೇ ನಡೆಯುತ್ತವೆನ್ನುವುದು ಬಹಳ ಮುಖ್ಯವಾಗುತ್ತದೆ. ವರ್ಷದಲ್ಲಿ ೧೩,೦೦೦ ಅತ್ಯಾಚಾರ ಪ್ರಕರಣಗಳು ದೇಶದಲ್ಲಿ ನಡೆಯುತ್ತಿವೆ ಎಂದು ಇತ್ತೀಚಕನ ಅಂಕಿ-ಅಂಶಗಳು ಹೇಳುತ್ತವೆ. ಇಂಥ ಅಪರಾಧಗಳಲ್ಲಿ ಕುಟುಂಬದ ಸದಸ್ಯರೇ ಹೆಚ್ಚು ಭಾಗಿಯಾಗಿರುತ್ತಾರೆ ಎನ್ನಬಹುದು. ಹೀಗಾಗಿ ಹಲವು ಪ್ರಕರಣಗಳು ವರದಿಯಾಗದೆ, ವರದಿಯಾದರೂ ಕೆಲವು ದಿನಗಳು ಸುದ್ದಿಯಲ್ಲಿದ್ದು ಕ್ರಮೇಣ ನೆನಪಿನಿಂದ ಮರೆಯಾಗುತ್ತವೆ. ಪ್ರತಿ ೩೩ ನಿಮಿಷಗಳಿಗೆ ಹಿಂಸೆಯ ಪ್ರಕರಣವೊಂದು ದಾಖಲಾಗುತ್ತದೆ. ಪ್ರತಿ ಏಳು ನಿಮಿಷಗಳಿಗೊಮ್ಮೆ ಮಹಿಳೆಯರ ಮೇಲಿನ ಅಪರಾಧದ ಪ್ರಕರಣಗಳು ದಾಖಲಾಗುತ್ತಿದೆ ಎಂದು ರಾಷ್ಟ್ರೀಯ ಅಪರಾಧಗಳ ಅಂಕಿ-ಅಂಶಗಳ ಕಛೇರಿಯ ವರದಿ ಹೇಳುತ್ತದೆ. ಇದು ಹಿಂಸೆಯ ಪ್ರಮಾಣ ಎಷ್ಟಿದೆಯೆನ್ನುವುದರ ಸಂಕೇತವಾಗಿದೆ.

ಕುಟುಂಬದಲ್ಲಿ ಮಹಿಳೆ ವಿವಿಧ ಪಾತ್ರಗಳನ್ನು ವಹಿಸುತ್ತಾಳೆ. ಮಗಳಾಗಿ, ಸೊಸೆಯಾಗಿ, ಪತ್ನಿಯಾಗಿ, ತಾಯಿಯಾಗಿ ಹಲವು ಜವಾಬ್ದಾರಿಗಳನ್ನು ಹೊತ್ತಿರುತ್ತಾಳೆ. ಅವುಗಳನ್ನು ಯಾವುದೇ ಚ್ಯುತಿಯಿಲ್ಲದೆ ನಿರ್ವಹಿಸಲು ಹಗಲಿರುಳು ಕಟ್ಟೆಚ್ಚರ ವಹಿಸುತ್ತಾಳೆ. ಕುಟುಂಬದ ಪ್ರತಿಯೊಬ್ಬರೂ ಅವಳಿಂದ ಏನನ್ನಾದರೂ ನಿರೀಕ್ಷಿಸುತ್ತಿರುತ್ತಾರೆ. ಎಲ್ಲರ ನಿರೀಕ್ಷೆಗಳಿಗನುಗುಣವಾಗಿ ಅವಳು ಹಲವು ಬಗೆಯ ಪಾತ್ರಗಳನ್ನು ಏಕಕಾಲದಲ್ಲಿ

ನಿರ್ವಹಿಸುತ್ತಿರುತ್ತಾಳೆ. ಇದಕ್ಕೆ ನಿಗದಿತ ವೇಳೆಯಾಗಲೀ, ಬಿಡುವಿನ ವೇಳೆಯೆಂದಾಗಲೀ ಇರುವುದಿಲ್ಲ. ಇಂಥ ನಿಸ್ವಾರ್ಥ ದುಡಿಮೆಗೆ ಇಲ್ಲಿ ಬೆಲೆಯೇ ಸಿಗುವುದಿಲ್ಲ. ಅವಳನ್ನು ಕುಟುಂಬದಲ್ಲಿ ಮಾತ್ರ ಹೊರೆ ಎಂದೇ ಪರಿಗಣಿಸಲಾಗುತ್ತದೆ. ಆರ್ಥಿಕ ಕೆಳವರ್ಗದ ಕುಟುಂಬದಲ್ಲಿ ಮಹಿಳೆ ಮನೆಯಿಂದ ಹೊರಗೆ ದುಡಿಯುವುದು ಅನಿವಾರ್ಯವಾದರೆ, ವಿದ್ಯಾವಂತ ಮಹಿಳೆ ಉದ್ಯೋಗದ ಅವಕಾಶಗಳನ್ನು ಪಡೆಯುತ್ತಿದ್ದಾಳೆ. ಇಂಥ ಮಹಿಳೆಯರು ಮನೆಯ ಹೊರಗೆ ದುಡಿಯುವುದರೊಂದಿಗೆ ಮನೆಯಲ್ಲೂ ದುಡಿಯುವಂತಾಗಿದೆ. ಇವರು ತಮ್ಮ ಸಾಂಪ್ರದಾಯಿಕ ಪಾತ್ರಗಳಿಂದ ಬಿಡುಗಡೆಯನ್ನು ಪಡೆಯಲಾರದೆ ಎರಡೂ ಬಗೆಯ ದುಡಿಮೆಯಿಂದ ಬಳಲುತ್ತಾರೆ. ಅಧ್ಯಯನವೊಂದರ ಪ್ರಕಾರ, ಮನೆಯಲ್ಲಿಯೇ ಇರುವ ಮಹಿಳೆ ದಿನಕ್ಕೆ ೧೨ಗಂಟೆಗಳ ಕಾಲ ದುಡಿದರೆ, ಉದ್ಯೋಗದಲ್ಲಿರುವ ಮಹಿಳೆ ದಿನಕ್ಕೆ ೧೫ಗಂಟೆಗಳ ಕಾಲ ದುಡಿಯುತ್ತಾಳೆಂದು ತಿಳಿದುಬಂದಿದೆ. ಇದು ಕುಟುಂಬದಲ್ಲಿರುವ ಶ್ರಮವಿಭಜನೆಯ ಫಲವಾಗಿದೆ(ಜಿ.ಎನ್. ರಾಮು, ೧೯೮೯). ಇದರ ಪರಿಣಾಮ ಮಹಿಳೆಯರ ಕುಸಿಯುತ್ತಿರುವ ಮಾನಸಿಕ ಮತ್ತು ದೈಹಿಕ ಆರೋಗ್ಯಗಳಲ್ಲಿ ಕಾಣುತ್ತಿದೆ.

ಇಂದಿಗೂ ಮಹಿಳೆ ಕುಟುಂಬದ ಆರ್ಥಿಕ ಸಂಪನ್ಮೂಲಗಳ ಮೇಲೆ ಯಾವುದೇ ಹಿಡಿತವನ್ನು ಹೊಂದಿರುವುದಿಲ್ಲ. ಇದಕ್ಕೆ ಸಂಬಂಧಿಸಿದ ಕಾನೂನಿನ ಪರಿಧಿಯನ್ನು ಮೀರಿ ಅವಳಿಗೆ ಅದನ್ನು ನಿರಾಕರಿಸಲಾಗುತ್ತದೆ. ಆಸ್ತಿಯಲ್ಲಿ ಸಮಾನಹಕ್ಕು ಕೆಲವು ರಾಜ್ಯಗಳು ನೀಡಿವೆಯಾದರೂ ಅದರ ಪ್ರಯೋಜನ ಪಡೆಯುವ ಮಹಿಳೆಯರ ಸಂಖ್ಯೆ ಅತಿ ಕಡಿಮೆ. ತಾವು ದುಡಿದು ತರುವ ಸಂಬಳದ ಮೇಲೂ ಎಷ್ಟೋ ಮಂದಿಗೆ ಹಿಡಿತವಿರುವುದಿಲ್ಲವೆನ್ನಲು ಸಾಕಷ್ಟು ಆಧಾರಗಳಿವೆ. ವಿಶ್ವಸಂಸ್ಥೆಯ ಅಂಕಿ-ಅಂಶಗಳ ಪ್ರಕಾರ, ವಿಶ್ವದಲ್ಲಿ ಶೇಕಡ ೬೦ಕ್ಕಿಂತ ಹೆಚ್ಚು ದುಡಿಮೆಯ ಅವಧಿಯಲ್ಲಿ ಮಹಿಳೆಯರು ದುಡಿಯುತ್ತಾರೆ; ವಿಶ್ವದ ಆದಾಯದಲ್ಲಿ ಶೇಕಡ ೧೦ರಷ್ಟನ್ನು ಪಡೆಯುತ್ತಾರೆ. ವಿಶ್ವದ ಆಸ್ತಿಯಲ್ಲಿ ಶೇಕಡ ೧ರಷ್ಟನ್ನು ಮಾತ್ರ ಅವರು ಪಡೆದಿದ್ದಾರೆಂದು ತಿಳಿದುಬರುತ್ತದೆ. ಇದು ಮಹಿಳೆಯರ ಇಂದಿನ ಆರ್ಥಿಕ ಪರಿಸ್ಥಿತಿಗೆ ಹಿಡಿದ ಕನ್ನಡಿಯಾಗಿದೆ.

ಒಟ್ಟಿನಲ್ಲಿ ಹೇಳುವುದಾದರೆ, ಕುಟುಂಬ ಒಂದು ಸಾಮಾಜಿಕ ವ್ಯವಸ್ಥೆಯ ಪ್ರತಿಬಿಂಬವಾಗಿ ಅದರ ಆಧಾರ ಸ್ತಂಭವಾಗಿದೆ. ಪಿತೃಪ್ರಧಾನ ಮೌಲ್ಯಗಳನ್ನು ಸ್ಥಾಪಿಸುವ ಉದ್ದೇಶ ಹೊಂದಿರುವ ಪಿತೃವಂಶೀಯ ಕುಟುಂಬಗಳೇ ಅಧಿಕ ಸಂಖ್ಯೆಯಲ್ಲಿರುವ ನಮ್ಮ ದೇಶದಲ್ಲಿ ಮಹಿಳೆಯರು ಹಲವು ಬಗೆಯ ಶೋಷಣೆಗಳಿಗೆ ಒಳಗಾಗುತ್ತಿದ್ದಾರೆ. ಲೈಂಗಿಕತೆ, ದುಡಿಮೆ, ಉತ್ಪಾದನೆ, ಸಂತಾನೋತ್ಪತ್ತಿ, ಚಲನೆ ಮುಂತಾದ ತನ್ನದಾದ ಎಲ್ಲದರ ಮೇಲೂ ತನ್ನ ಹಿಡಿತವನ್ನು ಕಳೆದುಕೊಳ್ಳುವ ಮೂಲಕ ತನ್ನ ಅಸ್ತಿತ್ವವನ್ನೇ ಕಳೆದುಕೊಂಡಿದ್ದಾಳೆ. ಇತ್ತೀಚೆಗೆ ತಾನು ಭೂಮಿಗೆ ಬರುವ ಹಕ್ಕನ್ನೂ ಕಳೆದುಕೊಳ್ಳುವ ಹಂತ ತಲುಪಿದ್ದಾಳೆ. ಅಪಾಯದಲ್ಲಿರುವ ಸಂತತಿಗಳ(Endangered species) ಸಾಲಿಗೆ ಸೇರಿದ್ದಾಳೆ. ಇವೆಲ್ಲವನ್ನೂ ಪುರುಷ ಪ್ರಧಾನವಾದ ಸಮಾಜ ಕುಟುಂಬ ಎಂಬ ಒಂದು ಚಿಕ್ಕ ಘಟಕದ ಮೂಲಕ ಸಾಧಿಸಿದೆ. ಗರ್ಡಾಲರ್ನರ್ ಎಂಬ ಸ್ತ್ರೀವಾದಿ ಹೇಳುವಂತೆ, "The family note merely

mirrors the order in the state and educates its children to follow it, it also creates and constantly reinforces that order".

ಅಂತಿಮವಾಗಿ ಈ ಪ್ರಬಂಧದ ಕೊನೆಯಲ್ಲಿ ಒಂದೆರಡು ಮಾತುಗಳನ್ನು ಹೇಳುವುದು ಸೂಕ್ತವೆನಿಸುತ್ತದೆ. ಇದುವರೆಗೆ ಕುಟುಂಬದಲ್ಲಿ ಮಹಿಳೆಯರ ಸ್ಥಾನಮಾನಗಳನ್ನು ಶೋಷಣೆಯ ಪರಾಕಾಷ್ಠೆಯನ್ನು ಕಂಡ ನಮಗೆ ನಿರಾಶೆಯ ಮೋಡ ಕವಿದಂತೆನಿಸುತ್ತಿರುವಾಗ ಅಲ್ಲಲ್ಲಿ ಆಶಾಕಿರಣಗಳಾಗಿ ಬೆರಳೆಣಿಕೆಯ ಕುಟುಂಬಗಳು ಕಣ್ಣಿಗೆ ಬೀಳುತ್ತವೆ. ಈ ಕುಟುಂಬಗಳು ಅಸಂಪ್ರದಾಯಿಕ ಜೀವನ ಶೈಲಿಯ, ಮಾನವೀಯ ಮೌಲ್ಯಗಳನ್ನು ಪ್ರತಿಪಾದಿಸುವ ಘಟಕಗಳಾಗಿ ಕಂಡುಬರುತ್ತವೆ. ಇಂಥ ಕುಟುಂಬಗಳು ಇಂದು ಹಲವಾರು ಸಾಮಾಜಿಕ ಕಟ್ಟುಪಾಡುಗಳು ಹಾಗೂ ಅಸಮಾನತೆಯ ಪರಿಸ್ಥಿತಿಯಲ್ಲೂ ಮಹಿಳೆಯರಿಗೆ ದೊರಕುತ್ತಿರುವ ಉನ್ನತ ಶಿಕ್ಷಣ, ಉದ್ಯೋಗದ ಅವಕಾಶಗಳು, ಸಂವಿಧಾನದತ್ತ ಹಕ್ಕುಗಳು, ಕಾನೂನಿನಲ್ಲಾಗುತ್ತಿರುವ ಬದಲಾವಣೆಗಳು ಬಾಹ್ಯ ಜಗತ್ತಿನ ಅರಿವು, ಸಾಮಾಜಿಕ ಬದಲಾವಣೆಯ ತುಡಿತಗಳ ಒಟ್ಟು ಪರಿಣಾಮಗಳಾಗಿವೆ. ಈ ಮೂರು ದಶಕಗಳ ಮಹಿಳಾ ಚಳುವಳಿ, ಸಾಮಾಜಿಕ ಚಳುವಳಿಗಳು, ಪ್ರಗತಿಪರ ವಿಚಾರಗಳ ಅಲೆಗಳು ಮತ್ತು ಸಂಘಟನೆಗಳ ಪ್ರಯತ್ನದ ಫಲವಾಗಿ, ಸಾಂಪ್ರದಾಯಿಕ ಮೌಲ್ಯಗಳ ವಿರುದ್ಧದ ದನಿಯಾಗಿ ಇಂದು ಕಡಿಮೆ ಸಂಖ್ಯೆಯಲ್ಲಾದರೂ ನಡೆಯುತ್ತಿರುವ ಅಸಂಪ್ರದಾಯಕವಾದ, ಸರಳವಾದ ಪ್ರೇಮವಿವಾಹ ಅಂತರ ಜಾತಿ/ಧರ್ಮೀಯ ವಿವಾಹಗಳು ಕುಟುಂಬದಲ್ಲಿ ಬದಲಾವಣೆಯ ಬಿರುಗಾಳಿಯನ್ನೆಬ್ಬಿಸಿದೆ. ಪ್ರೇಮವಿವಾಹದಲ್ಲಿ ಅನಿವಾರ್ಯವಾಗಿ ವರದಕ್ಷಿಣೆಯ ಪ್ರಶ್ನೆ ಏಳುವುದೇ ಇಲ್ಲವಾದರೆ, ಅಂತರಜಾತಿ/ಧರ್ಮೀಯ ವಿವಾಹಗಳು ಹಿರಿಯರ ಸಮ್ಮತಿಯಿಲ್ಲದೆ ನಡೆಯುವಂಥವುಗಳಾಗಿ ಹಿರಿಯ ಸದಸ್ಯರಿಲ್ಲದ ಚಿಕ್ಕ ಕುಟುಂಬಗಳಾಗಿರುತ್ತವೆ. ಈ ಎರಡೂ ಅಂಶಗಳು, ಹಿರಿಯರಿಗೆ ಅಧೀನತೆ, ನಿಯಂತ್ರಣ ನಿರ್ಬಂಧಗಳು, ವರದಕ್ಷಿಣೆ ಕಿರುಕುಳ/ಹಿಂಸೆ ಮುಂತಾದ ಸಮಸ್ಯೆಗಳಿಂದ ಮುಕ್ತವಾಗಿಸುತ್ತವೆ. ಮಹಿಳೆಯರು ಆರ್ಥಿಕ ಸ್ವಾತಂತ್ರ್ಯ ಹೊಂದಿರಲಿ, ಬಿಡಲಿ, ಕುಟುಂಬದ ನಿರ್ಣಯಗಳಲ್ಲಿ ಸಾಮಾನ್ಯವಾಗಿ ಭಾಗವಹಿಸುತ್ತಾರೆ. ಇದಕ್ಕೆ ಅವರಲ್ಲಿ ಸಾಕಷ್ಟು ಮಾನಸಿಕ ಸಿದ್ಧತೆ, ಪರಸ್ಪರರನ್ನು ಅರಿತಿರುವ ಸಾಧ್ಯತೆ, ಪರಸ್ಪರರಲ್ಲಿ ಹಕ್ಕು ಬಾಧ್ಯತೆಗಳ ಸಮಾನ ಹಂಚಿಕೆ ಮುಂತಾದುವುಗಳು ಕಾರಣವಾಗಿರುತ್ತವೆ. ಪ್ರೀತಿ-ಸಮಾನತೆಗಳ ಅಡಿಗಲ್ಲಿನ ಮೇಲೆ ನಿಲ್ಲುವ ಇಂಥ ಕುಟುಂಬಗಳು ಏಣಿಶ್ರೇಣಿಯ ಸಂಬಂಧಗಳನ್ನು ಮುಂದುವರೆಸುವಲ್ಲಿ ಹಿಂಜರಿಕೆ ತೋರುತ್ತವೆ. ಶ್ರಮವಿಭಜನೆ ಸೂಕ್ತವಾದ ರೀತಿಯಲ್ಲಿ ಆಗುತ್ತದೆ. ಚಲನೆಯ ಸ್ವಾತಂತ್ರ್ಯ ಪ್ರೀತಿ-ವಿಶ್ವಾಸಗಳ ಅಡಿಗಲ್ಲಿನ ಮೇಲೆ ದೊರಕುತ್ತದೆ. ಸಾಂಪ್ರದಾಯಿಕ ಕುಟುಂಬಗಳಲ್ಲಿನ ಮಹಿಳೆಯರಿಗೆ ಹೋಲಿಸಿದಾಗ, ಇವರು ಹೆಚ್ಚು ಸ್ವಾತಂತ್ರ್ಯದ, ನೆಮ್ಮದಿಯ, ಸಂತೃಪ್ತಿಯ ಉಸಿರಾಡುತ್ತಾರೆ; ಹೆಚ್ಚು ಆತ್ಮವಿಶ್ವಾಸದಿಂದಿರುತ್ತಾರೆ; ಹಿಂಸೆಯ ಪ್ರಮಾಣ ಕಡಿಮೆಯಿರುತ್ತದೆ.

ಇಂಥ ಕುಟುಂಬಗಳಲ್ಲಿ ಗಂಡು-ಹೆಣ್ಣು ಎಂಬ ತಾರತಮ್ಯವಿಲ್ಲದೆ ಮಕ್ಕಳು ಹೊಸ ಗಾಳಿಯ ಉಸಿರಾಡುತ್ತಾರೆ. ಸಮಾನ ಸ್ಥಾನಮಾನಗಳನ್ನು, ಅವಕಾಶಗಳನ್ನು ಪಡೆದಿರುವ, ತನ್ನ ಭವಿಷ್ಯವನ್ನು ತಾನೇ ರೂಪಿಸಿಕೊಳ್ಳಲು, ಸ್ವತಂತ್ರ ನಿರ್ಧಾರಗಳನ್ನು ತೆಗೆದುಕೊಂಡಿರುವ ಮಹಿಳೆ ತನ್ನ ಮಕ್ಕಳನ್ನು ಅದೇ ದಿಕ್ಕಿನಲ್ಲಿ ರೂಪಿಸುತ್ತಾಳೆ. ಮಕ್ಕಳಿಗೆ ತಂದೆ-ತಾಯಿಯರೇ ಮಾದರಿಯಾಗುತ್ತಾರೆ.

ಹೀಗೆ ಇಂದು ಕುಟುಂಬಗಳು ಪರಿವರ್ತನೆಯ ಗಾಳಿಗೆ ಒಡ್ಡಿಕೊಂಡಿವೆ. ಇಲ್ಲಿದ್ದ ಪಿತೃಪ್ರಧಾನ ಮೌಲ್ಯಗಳು ದುರ್ಬಲಗೊಳ್ಳುವ ಹಾದಿಯಲ್ಲಿವೆ. ಮಹಿಳೆಯರ ಮೇಲಿನ ಹಿಂಸೆ, ಶೋಷಣೆಗಳು ಹಲವು ಬದಲಾದ ರೂಪಗಳಲ್ಲಿ ಮುಂದುವರೆಯುತ್ತಿವೆಯಾದರೂ ಹೀಗೆ ಬಹುದೂರ, ಬಹುಕಾಲ ಸಾಗುವಂತಿಲ್ಲ. ಇಂದು ಮಹಿಳೆಯರು ಪ್ರಶ್ನಿಸ ತೊಡಗಿದ್ದಾರೆ. ಕುಟುಂಬ ವ್ಯವಸ್ಥೆಯಿಂದ ದೂರವಾಗುಳಿಯುವ ಮಾರ್ಗವಾಗಿ ಅವಿವಾಹಿತರಾಗುಳಿಯುತ್ತಿದ್ದಾರೆ, ವಿವಾಹ ವಿಚ್ಛೇದನಕ್ಕೆ ಮೊರೆ ಹೋಗುತ್ತಿದ್ದಾರೆ. ತಮ್ಮ ಜೀವನ ಸಂಗಾತಿಗಳನ್ನು ತಾವೇ ಆಯ್ಕೆ ಮಾಡಿಕೊಳ್ಳುವತ್ತ ಹೆಚ್ಚು ಒಲವು ತೋರುತ್ತಿದ್ದಾರೆ; ಆ ಮೂಲಕ ಜಾತಿ-ಧರ್ಮಗಳ ಕಟ್ಟುಪಾಡುಗಳಿಂದ, ಜಾತ್ಯಾಧಾರಿತ ಶೋಷಣೆಗಳಿಂದ ಮುಕ್ತರಾಗಬಯಸುತ್ತಿದ್ದಾರೆ. ಇದು ಹೀಗೇ ಮುಂದುವರೆದು ಮಹಿಳೆಯರ ಸಂಘಟಿತ ಹೋರಾಟ ತಮ್ಮ ಬಿಡುಗಡೆಯತ್ತ ಸಾಗಿದಲ್ಲಿ ಪಿತೃ ಪ್ರಧಾನ ಮೌಲ್ಯಗಳ ಕುಟುಂಬ ವ್ಯವಸ್ಥೆಯ ಕಲ್ಪನೆ ಬದಲಾಗುವುದು ಅನಿವಾರ್ಯ. ಪರಿಣಾಮವಾಗಿ, ಇಡೀ ಸಾಮಾಜಿಕ, ಆರ್ಥಿಕ, ರಾಜಕೀಯ ವ್ಯವಸ್ಥೆಗಳೂ ಬದಲಾವಣೆಯ ದಿಕ್ಕಿನಲ್ಲಿ ಸಾಗಬೇಕಾದ ಪರಿಸ್ಥಿತಿಯ ನಿರ್ಮಾಣ, ಸಮಾನತೆಯ ಮೌಲ್ಯಗಳನ್ನಾಧರಿಸಿದ ಸಮಾಜದ ನಿರ್ಮಾಣ ಸಾಧ್ಯ ಎನಿಸದಿರದು.

**ಆಕರ ಗ್ರಂಥಗಳು**

೧. ಟುವರ್ಡ್ಸ್ ಈಕ್ವಾಲಿಟಿ, ಮಹಿಳೆಯರ ಸ್ಥಾನಮಾನ ಸಮಿತಿ ವರದಿ, ಭಾರತ ಸರ್ಕಾರ, ೧೯೭೪
೨. ಫೆಮಿನಿಸ್ಟ್ ಥಾಟ್, ರೋಸ್ ಮೇರಿ ಟಾಂಗ್, ರೂಟಲೆಡ್ಜ್, ೧೯೯೨
೩. ವಾಟ್ ಈಸ್ ಪೇಟ್ರಿಯಾರ್ಕಿ, ಕಮಲಾಭಾಸಿನ್, ಕಾಳಿ ಫಾರ್ ವುಮೆನ್, ೧೯೯೫
೪. ವುಮೆನ್ ಅಂಡ್ ಸೊಸೈಟಿ ಇನ್ ಇಂಡಿಯಾ, ನೀರಾ ದೇಸಾಯಿ ಮತ್ತು ಮೈತ್ರೇಯಿ ಕೃಷ್ಣರಾಜ್
೫. ಕಪಾಡಿಯಾ ಕೆ.ಎಂ., ವಿವಾಹ ಮತ್ತು ಕುಟುಂಬ
೬. ರಾಮು ಜಿ.ಎನ್., ವುಮೆನ್, ವರ್ಕ್ ಅಂಡ್ ಮ್ಯಾರೇಜ್, ಸೇಜ್ ಪಬ್ಲಿಕೇಷನ್ಸ್ ಇಂಡಿಯಾ ಪ್ರೈವೇಟ್ ಲಿಮಿಟೆಡ್, ೧೯೮೯
೭. ರಾಮು ಜಿ.ಎನ್., ಫ್ಯಾಮಿಲಿ ಸ್ಟ್ರಕ್ಚರ್ ಅಂಡ್ ಫರ್ಟಿಲಿಟಿ, ಎಮರ್ಜಿಂಗ್ ಪ್ಯಾಟರ್ನ್ಸ್ ಇನ್ ಅನ್ ಇಂಡಿಯನ್ ಸಿಟಿ, ಸೇಜ್ ಪಬ್ಲಿಕೇಷನ್ಸ್, ೧೯೮೮

# ಮಹಿಳೆ, ವಿವಾಹ ಮತ್ತು ಕುಟುಂಬ - ಒಂದು ಪ್ರತಿಕ್ರಿಯೆ

*ಬಿ.ಶೇಷಾದ್ರಿ*

ನನ್ನ ಟಿಪ್ಪಣಿಯನ್ನು ಪ್ರಾರಂಭಿಸುವುದಕ್ಕೆ ಪೂರ್ವದಲ್ಲಿ ಕೆಲವು ಸಂಗತಿಗಳನ್ನು ಮೊದಲೇ ಸ್ಪಷ್ಟಪಡಿಸಲು ಬಯಸುತ್ತೇನೆ. ಏಕೆಂದರೆ ನನ್ನ ಟಿಪ್ಪಣಿಯು ಕೆಲವು ನಿರ್ದಿಷ್ಟ ಸಂಗತಿಗಳ ಚೌಕಟ್ಟಿನಲ್ಲಿ ಸಿದ್ಧವಾಗಿದೆ.

೧. ನಮ್ಮದು ಮೂಲಭೂತವಾಗಿ ಬಹುರೂಪಿ ಸಮಾಜವಾಗಿದೆ. ಇಲ್ಲಿ ಅನೇಕ ಜಾತಿಗಳಿವೆ, ಅನೇಕ ಧರ್ಮಗಳಿವೆ, ಅನೇಕ ವರ್ಗಗಳಿವೆ. ಲಿಂಗಭೇದಗಳಿವೆ. ಅನೇಕ ಶತಮಾನಗಳನ್ನು ನಮ್ಮ ಸಮಾಜವು ಏಕಕಾಲಕ್ಕೆ ಬದುಕುತ್ತಿದೆ. ಅಂದ ಮೇಲೆ 'ಮಹಿಳೆಯರು'ಎಂದರೆ ಅವರು ಅಖಂಡವಾದ ಒಂದು ವರ್ಗವೇನಲ್ಲ. 'All Women are Women. But a Woman is not only a Woman'. ಸಮಾಜದ ವಿವಿಧ ಖಂಡಗಳೊಂದಿಗೆ ಮಹಿಳೆಯ ಸ್ಥಾನಮಾನ ಬೆಸೆದುಕೊಂಡಿರುತ್ತದೆ. ಆಕೆಗೆ ಜಾತಿಯ ನೆಲೆಯಿದೆ. ಧರ್ಮದ ನೆಲೆಯಿದೆ. ವರ್ಗದ ನೆಲೆಯಿದೆ. ಕುಲಸಂಬಂಧಿ ನೆಲೆಯಿದೆ. ಪ್ರದೇಶವಾದಿ ನೆಲೆಯಿದೆ. ಆದ್ದರಿಂದ ಮಹಿಳೆಯರನ್ನು ಒಂದು ವರ್ಗವಾಗಿ ಪರಿಭಾವಿಸುವುದು ಸಾಧ್ಯವಿಲ್ಲ ಮತ್ತು ಸಾಧುವಲ್ಲ. ನಾವು ವಿವಾಹ-ಕುಟುಂಬ ಮುಂತಾದ ಸಂಸ್ಥೆಗಳನ್ನು ಕುರಿತು ಚರ್ಚಿಸುವಾಗ ಏಕರೂಪ, ಅಖಂಡ, ಅವಿಭಕ್ತ ವಿಧಾನವನ್ನು ಅಳವಡಿಸಿಕೊಂಡರೆ ಸಮಸ್ಯೆಯಾಗುತ್ತದೆ.

೨. ನಮ್ಮ ಚರ್ಚೆಯ 'ಸಂದರ್ಭ ಸ್ಪಂದಿ'ಯಾಗಿರಬೇಕು. ಸಂದರ್ಭಕ್ಕೆ ಅತೀತವಾದ ರೀತಿಯಲ್ಲಿ ಚರ್ಚೆ ನಡೆಸಿದರೆ ಅದರಿಂದ ಯಾವುದೇ ಉಪಯೋಗವಿಲ್ಲ. ನಾವು 'ಮಹಿಳೆ-ವಿವಾಹ-ಕುಟುಂಬ' ಇವುಗಳನ್ನು ಯಾವ ಸಂದರ್ಭದಲ್ಲಿ ಚರ್ಚಿಸುತ್ತಿದ್ದೇವೆ ಎಂಬುದರ ಅರಿವು ಇರಬೇಕು. ಇಂದು ದೇಶದಲ್ಲಿ ಬಿರುಗಾಳಿಯಂತೆ ಉದಾರೀಕರಣದ ಅಲೆ ಎದ್ದಿದೆ. ಜಾಗತೀಕರಣ ಪ್ರಕ್ರಿಯೆಯಲ್ಲಿ ನಮ್ಮ ಸಮಾಜವು ಹಾದು ಹೋಗುತ್ತದೆ. ಸರಕು ಸಂಸ್ಕೃತಿಯು ಬದುಕಿನ ದಿಕ್ಕು-ದಿಶೆಗಳನ್ನು ನಿರ್ಧರಿಸುವ ಮಾನದಂಡವಾಗಿ ಬಿಟ್ಟಿದೆ. ಈ ಎಲ್ಲ ಪ್ರಕ್ರಿಯೆಗಳ ಪ್ರಭಾವದಿಂದ ಕುಟುಂಬ-ವಿವಾಹಗಳಿರುವುದು ಸಾಧ್ಯವಿಲ್ಲ. ಈ ಎಲ್ಲ ಸಂಗತಿಗಳಿಗೆ ನಾವು ಎದುರಾಗಬೇಕಾಗುತ್ತದೆ.

೩. ನಮ್ಮ ಸಮಾಜವು ಬದಲಾವಣೆಗೆ ಒಳಗಾಗಿದೆ. ಶಿಕ್ಷಣ, ವಿಜ್ಞಾನ, ತಂತ್ರಜ್ಞಾನ

ಮುಂತಾದವುಗಳಿಗೆ ಸಂಬಂಧಿಸಿದಂತೆ ತೀವ್ರ ಬದಲಾವಣೆಗಳಾಗಿವೆ. ಆರ್ಥಿಕ-ರಾಜಕೀಯ ಬದಲಾವಣೆಗಳಾಗಿವೆ. ಸ್ತ್ರೀ-ಪುರುಷರ ಸಂಬಂಧಗಳಲ್ಲಿ ಬದಲಾವಣೆಗಳಾಗಿವೆ. ಹೆಣ್ಣು ಕುಟುಂಬದ ಗಡಿಯೊಳಗೆ ಬಂಧಿಯಾಗಿ ಉಳಿದಿಲ್ಲ. ಆದರೆ ಅವಳಿಗೆ ವಿಮೋಚನೆಯೂ ದೊರೆತಿಲ್ಲ. ಈ ಸಂಗತಿಗಳನ್ನು ನಮ್ಮ ಚರ್ಚೆಯಲ್ಲಿ ಗಮನಿಸಬೇಕಾಗುತ್ತದೆ.

ಈ ಮೂರು ಸಂಗತಿಗಳನ್ನು ಗಮನದಲ್ಲಿಟ್ಟುಕೊಂಡು ನಾವು ಚರ್ಚೆಯನ್ನು ನಡೆಸಬಹುದು.

**ಪ್ರಬಂಧದ ಸಾರ**

ಕುಟುಂಬವನ್ನು ಹೆಣ್ಣಿಗೆ ಅನಿವಾರ್ಯವಾದ ಒಂದು ಸಂಗತಿಯನ್ನಾಗಿ ಗುರುತಿಸಲಾಗಿದೆ. ಹಾಗಾದರೆ ಗಂಡು ಮತ್ತು ಕುಟುಂಬಗಳ ನಡುವಿನ ಸಂಬಂಧ ಯಾವ ಬಗೆಯದು? ಅವರಿಗೆ ಕುಟುಂಬ ಅವಶ್ಯಕವಾದ ಸಂಸ್ಥೆಯಲ್ಲವೆ? ಕುಟುಂಬವು ಮಹಿಳೆಗೆ ಎಷ್ಟು ಅನಿವಾರ್ಯವೋ ಪುರುಷರಿಗೂ ಅದು ಅನಿವಾರ್ಯವಾಗಿದೆ. ಆದರೆ ಪುರುಷಶಾಹಿ ಸಂಕಥನವು ಕುಟುಂಬವನ್ನು ಮಹಿಳೆಯರಿಗೆ ನಿರ್ದಿಷ್ಟಪಡಿಸಿಬಿಟ್ಟಿದೆ. ಇದು 'ಎಸೆನ್ಸಿಯಲಿಸ್ಟ್' ದೃಷ್ಟಿಕೋನವಾಗಿದೆ. ಮಹಿಳೆಯರನ್ನು ಕುಟುಂಬಕ್ಕೆ ಕಟ್ಟಿ ಹಾಕಿರುವುದರಿಂದಲೇ ಆಕೆಯದು 'ಖಾಸಗಿ ಜಗತ್ತು' ಎಂದೂ, ಗಂಡಸರದು 'ಸಾರ್ವಜನಿಕ ಜಗತ್ತು' ಎಂದೂ ವರ್ಗೀಕರಣ ಸಾಧ್ಯವಾಗಿದೆ. ಕುಟುಂಬವನ್ನು ಮಹಿಳೆಯರಿಗೆ ನಿರ್ದಿಷ್ಟಪಡಿಸುವ ಕ್ರಮವು ಜೈವಿಕ ನಿಯತಿಯಾಗಿದೆ. ಇದರ ಇಂಪ್ಲಿಕೇಶನ್ ಗಳು ಮಹಿಳೆಯರ ಬದುಕಿನ ದೃಷ್ಟಿಯಿಂದ ಬಹಳ ಅಘಾತಕಾರಿಗಳಾಗಿ ಬಿಟ್ಟಿದೆ.

ಹೀಗೆ ಕುಟುಂಬದ ಮಹತ್ವವನ್ನು ಪ್ರತಿಪಾದಿಸಿದ ವನಜ ಅವರು ಎರಡು ರೀತಿಯ ಕುಟುಂಬ ಪದ್ದತಿಗಳ ವಿವರವಾದ ಚರ್ಚೆ ನಡೆಸಿದ್ದಾರೆ. ಈ ಎರಡು ಕುಟುಂಬ ಪದ್ಧತಿಗಳು ಇವು

೧. ಮಾತೃವಂಶ ಮೂಲ ಕುಟುಂಬ ಪದ್ದತಿ

೨. ಪಿತೃವಂಶ ಮೂಲ ಕುಟುಂಬ ಪದ್ಧತಿ

ಈ ಎರಡು ವಿಧದ ಕುಟುಂಬ ಪದ್ಧತಿಗಳಲ್ಲಿರುವ ಮಹಿಳೆಯ ಸ್ಥಾನಮಾನ, ಅವಳ ಅಧಿಕಾರ, ಅವಳ ಪಾತ್ರ, ಅವಳ ಜವಾಬ್ದಾರಿಗಳು, ಅವಶ್ಯ ಕರ್ತವ್ಯಗಳು ಮುಂತಾದವುಗಳ ಬಗ್ಗೆ ಪ್ರಬಂಧಕಾರರು ತಮ್ಮ ಪ್ರಬಂಧದಲ್ಲಿ ವಿವರವಾಗಿ ಚರ್ಚೆನಡೆಸಿದ್ದಾರೆ. ಪಿತೃವಂಶ ಮೂಲ ಕುಟುಂಬವು ಪುರುಷಶಾಹಿಯಾಗಿದೆ. ಇಲ್ಲಿ ಮಹಿಳೆಯು ಪುರುಷನ ಅಡಿಯಾಳಾಗಿರಬೇಕಾಗುತ್ತದೆ. ಇಲ್ಲಿ ಅವಳ ಸ್ಥಾನ ಎರಡನೆಯದು. ಇದೊಂದು ಏಣಿ ಶ್ರೇಣಿ ಕುಟುಂಬ ವ್ಯವಸ್ಥೆಯಾಗಿದೆ. ಇಂತಹ ವ್ಯವಸ್ಥೆಯಲ್ಲಿ ಮಹಿಳೆಯರು ಅನೇಕ ಬಗೆಯ ತುಳಿತವನ್ನು, ಶೋಷಣೆಯನ್ನು, ತಾರತಮ್ಯವನ್ನು, ಹಿಂಸೆಯನ್ನು ಅನುಭವಿಸ

ಬೇಕಾಗುತ್ತದೆ ಎಂಬ ಸಂಗತಿಗಳ ಕಡೆಗೆ ಪ್ರಬಂಧಕಾರರು ನಮ್ಮ ಗಮನ ಸೆಳೆದಿದ್ದಾರೆ. ಮನೆ ಹೊರಗಿನ ದುಡಿಮೆ ಮತ್ತು ಮನೆಯೊಳಗಿನ ದುಡಿಮೆಯನ್ನು ಕುರಿತಂತೆ ವನಜ ಅವರು ಚರ್ಚೆ ನಡೆಸಿದ್ದಾರೆ.

ಈ ಬಗ್ಗೆ ವಿವರವಾಗಿ ಚರ್ಚೆ ನಡೆಸಿದ ವನಜ ಅವರು ಮಹಿಳೆಯರು ಎದುರಿಸುತ್ತಿರುವ ಪಕ್ಷಪಾತ-ಹಿಂಸೆ-ಶೋಷಣೆಗಳಿಗೆ ಒಂದು ನಿರ್ದಿಷ್ಟ ಪರಿಹಾರವನ್ನು ಗುರುತಿಸಲು ಪ್ರಯತ್ನಿಸಿದ್ದಾರೆ. ಮಹಿಳೆಯರ ಶೊಷಣೆಗೆ ಲಿಂಗ ಸಂಬಂಧಿ ತಾರತಮ್ಯಕ್ಕೆ, ಲಿಂಗ ಅಸಮಾನತೆಗೆ, ಮಹಿಳೆಯರ ದಮನಕ್ಕೆ ಪರಿಹಾರವನ್ನು ವನಜ ಅವರು ಪ್ರೇಮ ವಿವಾಹಗಳಲ್ಲಿ, ಅಂತರ್ಜಾತಿ ವಿವಾಹಗಳಲ್ಲಿ ಕಂಡುಕೊಂಡಿದ್ದಾರೆ. ಇಲ್ಲಿ ವನಜ ಅವರು ಸಮಸ್ಯೆಯನ್ನು ಸರಳೀಕರಿಸುತ್ತಿದ್ದಾರೆ ಎಂದು ನನ್ನ ಭಾವನೆ. ಸಮಸ್ಯೆ ತುಂಬಾ ಸಂಕೀರ್ಣವಾಗಿದೆ, ಸೂಕ್ಷ್ಮವಾಗಿದೆ.

**ಚರ್ಚೆ**

'ಮಹಿಳೆ-ವಿವಾಹ-ಕುಟುಂಬ' ಕುರಿತಂತೆ ವೆಂ.ವನಜ ಅವರು ತಮ್ಮ ಪ್ರಬಂಧದಲ್ಲಿ ಮಂಡಿಸಿರುವ ವಿಚಾರಗಳನ್ನು ಈಗ ಚರ್ಚೆಗೆ ಎತ್ತಿಕೊಳ್ಳಬಹುದಾಗಿದೆ. ಇಲ್ಲಿ ಚರ್ಚೆಯ ಅನುಕೂಲಕ್ಕಾಗಿ ನಾಲ್ಕು ಸಂಗತಿಗಳನ್ನು ಗುರುತಿಸಿಕೊಳ್ಳಲಾಗಿದೆ.

೧. ವಿವಾಹ-ವಿವಾಹದಿಂದ ಉಂಟಾಗುವ ಬದಲಾವಣೆಗಳು

೨. ಇಬ್ಬಗೆಯ ಮಾನದಂಡಗಳು

೩. ಕುಟುಂಬ-ಕುಟುಂಬ ಸಂಬಂಧಿ ಸಂಗತಿಗಳು

೪. ವೆಂ. ವನಜ ಸೂಚಿಸಿರುವ ಪರಿಹಾರ

**೧. ವಿವಾಹ**

ಇದೊಂದು ಸಾಮಾಜಿಕ ಸಂಸ್ಥೆ. ಮಹಿಳೆಗೆ ಸಮಾಜದಲ್ಲಿ ಗುರ್ತು ಹಾಗೂ ಅರ್ಥ ಪ್ರಾಪ್ತವಾಗುವುದೇ ವಿವಾಹದಿಂದ ಎಂದು ಹೇಳಲಾಗಿದೆ. ವಿವಾಹವೆನ್ನುವುದು ಮಹಿಳೆಗೆ ಬಂಧನವೋ ಅಥವಾ ಬಿಡುಗಡೆಯೋ ಇದೊಂದು ವಿಚಿತ್ರವಾದ ಪ್ರಶ್ನೆಯಾಗಿದೆ. ಸ್ವತಂತ್ರವಾಗಿ ತನ್ನ ಬದುಕನ್ನು ರೂಪಿಸಿಕೊಳ್ಳಲು ವಿವಾಹವು ಹೆಣ್ಣಿಗೆ ಅವಕಾಶ ಒದಗಿಸಬೇಕು. ಅದೊಂದು ಬಿಡುಗಡೆಯ ಗಾಥೆಯಾಗಬೇಕು. ಗಂಡು-ಹೆಣ್ಣು ಕೂಡಿ ಕುಟುಂಬವೊಂದನ್ನು ಕಟ್ಟಲು ವಿವಾಹ ಅನುವು ಮಾಡಿಕೊಡಬೇಕು. ಆದರೆ ಪುರುಷಶಾಹಿಯು ವಿವಾಹವನ್ನು ಬಂಧನದ ಬೇಡಿಯನ್ನಾಗಿ ಮಾಡಿಬಿಟ್ಟಿದೆ. ನಮ್ಮ ಸಮಾಜದ ಸಂದರ್ಭದಲ್ಲಿ ಮಹಿಳೆಗೆ ಗಂಡನ ಆಯ್ಕೆಗೆ ಅವಕಾಶವಿಲ್ಲ. ಆಯ್ಕೆಗೆ ಅವಕಾಶವಿಲ್ಲವೆಂದರೆ ಅಲ್ಲಿ ಸ್ವಾತಂತ್ರ್ಯವಿಲ್ಲವೆಂದೇ ಅರ್ಥ.

ತಂದೆ-ತಾಯಿಯರು ಹೆಣ್ಣು ಮಕ್ಕಳ ವಿವಾಹವನ್ನು ಕಷ್ಟ ಪರಿಹಾರದ ಒಂದು ಹೊಣೆಯನ್ನಾಗಿ ಪರಿಭಾವಿಸುತ್ತಾರೆ. ಹೆಣ್ಣನ್ನು ಆದಷ್ಟು ಬೇಗ ಗಂಡನ ಮನೆಗೆ

ಕಳುಹಿಸಬೇಕು ಎಂಬುದೇ ತಂದೆ-ತಾಯಿಯರ ಅವಸರ. ಏಕೆಂದರೆ ಹೆಣ್ಣು ಒಂದು ಬಗೆಯ Perishable goods. ಅದನ್ನು ಬಹಳ ವರ್ಷ ಇಟ್ಟುಕೊಳ್ಳಲಾಗದು. ವಿವಾಹದಿಂದಾಗಿ ಮಹಿಳೆ ತವರನ್ನು ಕಳೆದುಕೊಳ್ಳುತ್ತಾಳೆ. ಪಾಲಕರ ರಕ್ಷಣೆಯ ಭದ್ರತೆಯ ಸವಲತ್ತನ್ನು ಕಳೆದುಕೊಳ್ಳುತ್ತಾಳೆ. ವಿವಾಹವು ಹೆಣ್ಣು ಕಳೆದುಕೊಂಡ ಪಾಲಕರ ರಕ್ಷಣೆ, ಭದ್ರತೆಗಳನ್ನು ತುಂಬಿಕೊಡುತ್ತದೆಯೇ? ಈ ವಿವಾಹವು ಗಂಡಿಗೆ ಅನೇಕ ಸಂಗತಿಗಳನ್ನು ಒದಗಿಸಿದರೆ ಹೆಣ್ಣಿನಿಂದ ಅನೇಕ ಸಂಗತಿಗಳನ್ನು ಕಸಿದುಕೊಂಡು ಬಿಡುತ್ತದೆ. ನಮ್ಮ ಸಮಾಜದ ಸಂದರ್ಭದಲ್ಲಿ ವಿವಾಹವು ಗಂಡಿಗೆ ಮಹಿಳೆಯ ಮೇಲೆ ಅಧಿಕಾರವನ್ನು ಒದಗಿಸುತ್ತದೆ. ಮಹಿಳೆಯು ಗಂಡಿಗೆ ಅಡಿಯಾಳಾಗಿ ಬದುಕು ದೂಡಬೇಕಾದ ಪ್ರಮೇಯವನ್ನು ವಿವಾಹವು ಸೃಷ್ಟಿಸಿಬಿಡುತ್ತದೆ.

ಮಾರ್ಕೆಟ್ಟೀಕರಣದ-ಸರಕು ಸಂಸ್ಕೃತಿಯ ಮಹಾಪೂರಕ್ಕೆ ಸಿಕ್ಕಿದ ವಿವಾಹವು ಹಣಕಾಸಿನ ವ್ಯವಹಾರವಾಗಿ ಬಿಟ್ಟಿದೆ. ವಿವಾಹದ ಮಾರುಕಟ್ಟೆಗಳು ನಿರ್ಮಾಣವಾಗಿ ಬಿಟ್ಟಿವೆ. ಇದೊಂದು ವಿಚಿತ್ರ ಮಾರುಕಟ್ಟೆಯಾಗಿದೆ. ಇಲ್ಲಿ ಹಣ ತರುವವರು ಹೆಣ್ಣಿನ ತಂದೆ-ತಾಯಿಯರು. ಆದರೆ ವಸ್ತುವನ್ನು ಪಡೆಯುವವರು ಗಂಡಿನ ತಂದೆ ತಾಯಿಯರು. ಹೆಣ್ಣಿನ ತಂದೆ ತಾಯಿಯರು ಹಣವನ್ನು ನೀಡಬೇಕು ಮತ್ತು ತಮ್ಮ ವಸ್ತುವನ್ನು ಕಳೆದುಕೊಳ್ಳಬೇಕು. ಇಂತಹ ಮಾರುಕಟ್ಟೆಯ ವ್ಯವಹಾರವನ್ನು ಸಮರ್ಥವಾಗಿ ವಿವರಿಸಬಲ್ಲ ಮಾರುಕಟ್ಟೆ ಮಾದರಿಗಳು ಅರ್ಥಶಾಸ್ತ್ರದಲ್ಲಿ ಇದುವರೆವಿಗೂ ರೂಪುಗೊಂಡಿಲ್ಲ.

**೨. ಇಬ್ಬಗೆಯ ಮಾನದಂಡಗಳು**

ದುಡಿಮೆ-ಉದ್ಯೋಗಗಳಿಗೆ ಸಂಬಂಧಿಸಿದಂತೆ ಸ್ತ್ರೀಯರು ಮತ್ತು ಪುರುಷರ ನಡುವೆ ತಾರತಮ್ಯ ಎಣಿಸುವ ಪರಿ ಸಮಾಜದಲ್ಲಿದೆ. ದುಡಿಮೆ ಮತ್ತು ಉದ್ಯೋಗಗಳು ಪುರುಷರಿಗೆ ಸಂಬಂಧಿಸಿದಂತೆ ಅಭಿನ್ನವಾಗಿದ್ದರೆ ಅವು ಮಹಿಳೆಯರಿಗೆ ಸಂಬಂಧಿಸಿದಂತೆ ಭಿನ್ನ. ಮಹಿಳೆಯರ ದುಡಿಮೆಯನ್ನು ಉದ್ಯೋಗವೆಂದು ಪರಿಗಣಿಸುತ್ತಿಲ್ಲ. ಏಕೆಂದರೆ ಅವಳ ದುಡಿಮೆಯನ್ನು ಸಂತಾನೋತ್ಪತ್ತಿ ದುಡಿಮೆಯೆಂದು ವರ್ಗೀಕರಿಸಲಾಗಿದೆ. ಮಹಿಳೆಯರ ದುಡಿಮೆಯು ಸಂಗೋಪನಾ ಸ್ವರೂಪದ್ದಾಗಿದೆ. ಅವರ ದುಡಿಮೆಗೆ ಸಂಪಾದನೆಯ ಸ್ವರೂಪವಿಲ್ಲ. ದುಡಿಮೆಯು ಸಮಾನವಾಗಿ ಪರಿಗಣಿತವಾಗುವ ಬದಲಿಗೆ ಹೆಣ್ಣಿನ ದುಡಿಮೆ ಮತ್ತು ಗಂಡಿನ ದುಡಿಮೆಯೆಂದು ವರ್ಗೀಕರಣಕ್ಕೆ ಒಳಗಾಗಿದೆ. ಈ ಇಬ್ಬಗೆಯ ಮಾನದಂಡದಿಂದ ಮಹಿಳೆಗೆ ಅನ್ಯಾಯವಾಗಿದೆ. ಸಂತಾನೋತ್ಪತ್ತಿ ದುಡಿಮೆಯ ಜೊತೆಗೆ ಮಹಿಳೆಯರು ಆರ್ಥಿಕೋತ್ಪಾದನೆಯಲ್ಲೂ ನಿರತರಾಗಿದ್ದಾರೆ. ಸಂಗೋಪನೆ ಮತ್ತು ಸಂಪಾದನೆಗಳೆರಡನ್ನು ಅವರು ನಿಭಾಯಿಸುತ್ತಿದ್ದಾರೆ. ಆದರೆ ಮಾರುಕಟ್ಟೆ ಮಹತ್ವವಿಲ್ಲವೆಂದು, ಕ್ರಯಪಟ್ಟಿಯಿಲ್ಲವೆಂದು, ಅಳತೆಗೆ ಸಲ್ಲದು ಎಂದು ಮಹಿಳೆಯರ ದುಡಿಮೆಯನ್ನು ಅನುಷಂಗಿಕ, ಅಪ್ರಧಾನವೆಂದು ತಳ್ಳಿ ಹಾಕಲಾಗಿದೆ.

ಸಂತಾನೋತ್ಪತ್ತಿ ದುಡಿಮೆಯು ಮಹಿಳೆಯರಿಗೆ ಮೀಸಲಾಗಿರುವುದರಿಂದ ಇಂದು ಸಂತಾನಹರಣ ಚಿಕಿತ್ಸೆಯೂ ಮಹಿಳೆಯರ ಜವಾಬ್ದಾರಿಯಾಗಿ ಬಿಟ್ಟಿದೆ. ಸಂತಾನೋತ್ಪತ್ತಿಗೆ ಸಂಬಂಧಿಸಿದ ಹಕ್ಕುಗಳೆಲ್ಲ ಗಂಡಸರ ವಶದಲ್ಲಿದ್ದರೆ, ಅದಕ್ಕೆ ಸಂಬಂಧಿಸಿದ ಜವಾಬ್ದಾರಿಗಳು ಮಾತ್ರ ಮಹಿಳೆಯರ ವಶದಲ್ಲಿವೆ. ಯಾಕೆ ಈ ತಾರತಮ್ಯ? ಯಾಕೆ ಈ ಪಕ್ಷಪಾತ? ಇದಕ್ಕೆ ಉತ್ತರಗಳನ್ನು ಕಂಡುಕೊಳ್ಳಬೇಕಾಗುತ್ತದೆ.

೩. ಕುಟುಂಬ

ಕುಟುಂಬವನ್ನು ಲಾಗಾಯ್ತಿನಿಂದ Artruistic ಸಂಸ್ಥೆಯೆಂದೇ ನೋಡಿಕೊಂಡು ಬರಲಾಗಿದೆ. ಅದು ಕುಟುಂಬದ ಎಲ್ಲರ ಹಿತವನ್ನು ಕಾಪಾಡುತ್ತದೆ ಎಂದು ಭಾವಿಸಲಾಗಿದೆ. ವಾಸ್ತವ ಸಂಗತಿ ಬೇರೆಯೇ ಇದೆ. ಅಮರ್ತ್ಯಸೆನ್ ಅವರ 'ಸಹಕಾರವಾದಿ ಸಂಘರ್ಷ'ಎಂಬ (Cooperative conflict) ಕುಟುಂಬ ಮಾದರಿಯು ಇಲ್ಲಿ ನಮಗೆ ಹೆಚ್ಚು ಉಪಯುಕ್ತವಾದೀತು. ಈ ಮಾದರಿಯು ಕುಟುಂಬವು ಹೇಗೆ ಸರ್ವಸದಸ್ಯರ ಹಿತ ಕಾಪಾಡುವ ಸಂಸ್ಥೆಗೆ ಪ್ರತಿಯಾಗಿ ಕೇವಲ ಪುರುಷ ಸದಸ್ಯರ ಹಿತಕಾಪಾಡುವ ಸಂಸ್ಥೆ ಎಂಬುದನ್ನು ಸ್ಪಷ್ಟವಾಗಿ ತೋರಿಸುತ್ತದೆ.

ನಮ್ಮ ಸಮಾಜವು ಮಹಿಳೆಯರಿಗೆ ಕೆಲವು ಗುಣಗಳನ್ನು ಆರೋಪಿಸಿದೆ. ಅವು ಜೈವಿಕ ನಿಯತಿ ಗುಣಗಳಾಗಿವೆ. ಆಕೆಯನ್ನು 'ಪರಹಿತವಾದಿ' ಎಂದು ಗುರುತಿಸಲಾಗಿದೆ. ಗಂಡ ಮತ್ತು ಮಕ್ಕಳ ಹಿತವನ್ನು ಕಾಪಾಡುವುದು ಮಹಿಳೆಯರ ಜೈವಿಕ ಜವಾಬ್ದಾರಿಯೆಂದು ವಾದಿಸಲಾಗುತ್ತಿದೆ. ಮಹಿಳೆಗೆ ತನ್ನದು ಎಂಬ ಆಸೆ-ಆಕಾಂಕ್ಷೆಗಳಿರುವುದಿಲ್ಲವೆಂದು ಹೇಳಲಾಗಿದೆ. ಈ ಗುಣಗಳನ್ನು ಮಹಿಳೆಯರು ಶೈಶವಾವಸ್ಥೆಯಿಂದ ಮೈಗೂಡಿಸಿಕೊಳ್ಳುವಂತಹ ಸಾಮಾಜೀಕರಣ ವ್ಯವಸ್ಥೆಯನ್ನು ಪುರುಷಶಾಹಿ ರೂಪಿಸಿಬಿಟ್ಟಿದೆ. ಇದರಿಂದಾಗಿ ಮಹಿಳೆಯರೇ ತಮ್ಮ ಜಗತ್ತು ಎಂದರೆ ಗಂಡ ಮಕ್ಕಳು, ಅಡುಗೆ ಮನೆ, ಕಸ-ಮುಸುರೆ ಎಂದು ಭಾವಿಸಿಕೊಂಡಿದ್ದಾರೆ. ಇದರಿಂದಾಗಿ ಅವಳ ಶೋಷಣೆ ಸುಲಭವಾಗಿದೆ.

ಅಮರ್ತ್ಯಸೇನ್ ಕೌಟುಂಬಿಕ ನೆಲೆಯ ಮಹಿಳಾ ಶೋಷಣೆ ಬಗ್ಗೆ ವಿಭಿನ್ನವಾದ ಪ್ರಮೇಯವನ್ನು ರೂಪಿಸಿದ್ದಾರೆ. 'ಕುಟುಂಬ'ಎಂಬ ಸಂಸ್ಥೆಯಲ್ಲಿನ ಸದಸ್ಯರಲ್ಲಿ ಸಹಕಾರದ ಗುಣವೂ ಇರುತ್ತದೆ ಮತ್ತು ಸಂಘರ್ಷದ ಗುಣವೂ ಇರುತ್ತದೆ ಎಂಬುದು ಸೆನ್ ರವರ ವಾದವಾಗಿದೆ. ಮಹಿಳೆಯರು ತಮ್ಮ ಶೋಷಣೆ ಬಗ್ಗೆ, ಹಿಂಸೆಯ ಬಗ್ಗೆ, ತಾರತಮ್ಯದ ಬಗ್ಗೆ ಪ್ರತಿಭಟನೆ ಮಾಡುವ ಸ್ಥಿತಿಯಲ್ಲಿರುವುದಿಲ್ಲ. ಪ್ರತಿಭಟಿಸಿದರೆ ಸದ್ಯ ದೊರೆಯುತ್ತಿರುವ ಭದ್ರತೆ-ರಕ್ಷಣೆಯೂ ಇಲ್ಲವಾಗಿ ಬಿಡುತ್ತದೆ. ಸಂಘರ್ಷಕ್ಕಿಳಿಯಲಾಗದೆ ಅಸಹಾಯಕತೆಯಿಂದ ಸಹಕಾರವಾದಿಗಳಾಗಿರುತ್ತಾರೆ ಎಂಬುದು ಸೆನ್ ಅವರ ಪ್ರಮೇಯವಾಗಿದೆ. ಮಹಿಳೆಯರಿಗೆ ತಾವು ಅನುಭವಿಸುತ್ತಿರುವ ಹಿಂಸೆ-ತಾರತಮ್ಯ, ಶೋಷಣೆ, ದಮನ ಮುಂತಾದವುಗಳ ಅರಿವಿಲ್ಲವೆಂದು ಹೇಳಲು ಸಾಧ್ಯವಿಲ್ಲ. ಆದರೆ ಅದನ್ನು ಪ್ರತಿಭಟಿಸಿ ಕುಟುಂಬದಿಂದ

ಹೊರಗೆ ಬಂದರೆ ನೆಲೆ ಎಲ್ಲಿ? ಬದುಕು ಹೇಗೆ? ಕುಟುಂಬ ಸಂಬಂಧಗಳನ್ನು ಮುರಿದು ಬಂದ ಮಹಿಳೆಯರನ್ನು ನಮ್ಮ ಸಮಾಜವು ಮರ್ಯಾದೆಯಿಂದ ನಡೆಸಿಕೊಳ್ಳುವುದಿಲ್ಲ.

ಇಲ್ಲಿ ಮಹಿಳಾ ಸಂಘಟನೆಗಳ ಪಾತ್ರ ಮುಖ್ಯವಾಗುತ್ತದೆ. ಇಂತಹ ಸಮಸ್ಯೆಗಳನ್ನು ಮಹಿಳೆಯರು ಏಕಾಂಗಿಗಳಾಗಿ ಎದುರಿಸಲು ಸಾಧ್ಯವಿಲ್ಲ. ಸಂಘರ್ಷಣಾತ್ಮಕ ದಾರಿಯನ್ನು ಮಹಿಳೆಯರು ತುಳಿಯಬೇಕಾದರೆ ಅವರಿಗೆ ಸಂಘಟನೆಯ ಬೆಂಬಲ ಬೇಕು. ಕುಟುಂಬದ ಚೌಕಟ್ಟಿನಿಂದ ಬೇರೆಯಾದ ಮೇಲೆ ಆಶ್ರಯ, ಅಶನ ಬೇಕಾಗುತ್ತದೆ. ಮಹಿಳೆಯರ ಹಿತಾಸಕ್ತಿಗಳನ್ನು ಕಾಯಲು ಇರುವ ಮಾರ್ಗ ಇದಾಗಿದೆ. ಬಂಡವಾಳಶಾಹಿಯು ತನಗೆ ಅಗತ್ಯವಾದ ಹೆಚ್ಚುವರಿ ದುಡಿಮೆಯನ್ನು ಕುಟುಂಬ ವ್ಯವಸ್ಥೆಯಲ್ಲಿರುವ ಮಹಿಳೆಯರಿಂದ ಉಚಿತವಾಗಿ ಪಡೆಯುತ್ತದೆ ಎಂದು ಹೇಳಲಾಗಿದೆ.

ಬಂಡವಾಳಶಾಹಿಯ ವರ್ಗವ್ಯವಸ್ಥೆ ಹಾಗೂ ಪುರುಷಶಾಹಿ ಇವೆರಡೂ ಬಗೆಯ ಶೋಷಣೆಗೆ ಮಹಿಳೆಯು ಒಳಗಾಗುತ್ತಿದ್ದಾಳೆ. ಕುಟುಂಬವು ಇಂತಹ ಶೋಷಣೆ ಮುಂದುವರಿಯುವಂತೆ ನೋಡಿಕೊಳ್ಳುತ್ತಿದೆ. ಕುಟುಂಬ ವ್ಯವಸ್ಥೆಯ ರಾಜಕಾರಣದಲ್ಲಿ ನಿರ್ಣಯ ತೆಗೆದುಕೊಳ್ಳುವ ಅಧಿಕಾರ-ಹಕ್ಕು ಇಂದಿಗೂ ಪುರುಷರ ವಶದಲ್ಲಿದೆ. ಈ ಅಧಿಕಾರ ಪುರುಷರಿಗೆ ಆಸ್ತಿಹಕ್ಕು, ಉದ್ಯೋಗದ ಹಕ್ಕು, ವರಮಾನದ ಆರ್ಜನೆಗಳಿಂದ ಪ್ರಾಪ್ತವಾಗುತ್ತದೆ.

ಅಮರ್ತ್ಯಸೇನ್ ಪ್ರಕಾರ ಮನೆಯ ಹೊರಗಿನ ಉದ್ಯೋಗವು ಮಹಿಳೆಯರಿಗೆ ಅನೇಕ ಬಗೆಯ ಅವಕಾಶಗಳನ್ನು ಒದಗಿಸುವ ಸಾಧ್ಯತೆ ಇದೆ. ತಾನು ವರಮಾನಗಳಿಸುತ್ತೇನೆ ಎಂಬ ಭರವಸೆಯ ಆತ್ಮವಿಶ್ವಾಸದ ಭಾವನೆಯನ್ನು ಅದು ಮೂಡಿಸಬಲ್ಲದು. ಕೌಟುಂಬಿಕ ವ್ಯವಸ್ಥೆಯು ಮುರಿದು ಬಿದ್ದಾಗ ಆಕೆಗೆ ಆಸರೆಯೊಂದು ತನ್ನ ಉದ್ಯೋಗದಿಂದ ದೊರೆಯಬಹುದು. ಮನೆಯ ಹೊರಗೆ ದುಡಿಯುವುದರಿಂದ ತನ್ನಂತೆ ದುಡಿಯುವ ಮಹಿಳೆಯರ ಜೊತೆ ಸಂಪರ್ಕ ಸಾಧ್ಯವಾಗುತ್ತದೆ. ಲೋಕಜ್ಞಾನವು ಪ್ರಾಪ್ತವಾಗುತ್ತದೆ. ಮಹಿಳೆಯರ ನಡುವೆ ಒಂದು ಬಗೆಯ ಸಂಘಟನೆಯ ಭಾವನೆ ಬೆಳೆಯುತ್ತದೆ. ಇದರಿಂದ ಕುಟುಂಬದ ಮಟ್ಟದಲ್ಲಿ ಮಹಿಳೆಯು ಸಂಘರ್ಷಣಾತ್ಮಕ ನಿಲುವು ತಳೆಯುವುದು ಸಾಧ್ಯವಾಗುತ್ತದೆ.

**ವೆಂ.ವನಜ ಅವರು ಸೂಚಿಸಿರುವ ಪರಿಹಾರ**

ಇಲ್ಲಿ ಮಂಡಿತವಾದ ಪ್ರಬಂಧದಲ್ಲಿ ವೆಂ.ವನಜ ಅವರು ಮಹಿಳೆಯರ ಶೋಷಣೆಗೆ,ಲಿಂಗ ಸಂಬಂಧಿ ತಾರತಮ್ಯಗಳಿಗೆ, ಜಾತಿ ಸಂಬಂಧಿ-ಲಿಂಗಸಂಬಂಧಿ ಹಿಂಸೆಗೆ' ಪ್ರೇಮವಿವಾಹ' ಮತ್ತು 'ಅಂತರ್ಜಾತೀಯ'ವಿವಾಹಗಳನ್ನು ಪರಿಹಾರವಾಗಿ ಸೂಚಿಸಿದ್ದಾರೆ. ಇಲ್ಲಿ ಗಂಡು-ಹೆಣ್ಣುಗಳ ನಡುವೆ ಪರಸ್ಪರ ತಿಳುವಳಿಕೆ ಸಾಧ್ಯವಿರುವುದರಿಂದ ಲಿಂಗ ಸಮಾನತೆ

ಉಂಟಾಗುತ್ತದೆ ಎಂದು ಅವರು ವಾದಿಸುತ್ತಾರೆ. ಅವರು ಹೀಗೆ ಬರೆಯುತ್ತಾರೆ. ‘‘ಈ ಎರಡೂ ಸಂಗತಿಗಳು, ಅಂದರೆ ಪ್ರೇಮವಿವಾಹ ಮತ್ತು ಅಂತರ್ಜಾತಿ/ಅಂತರ್ಧರ್ಮೀಯ ವಿವಾಹಗಳು ಮಹಿಳೆಯರಿಗೆ ಸಾಂಪ್ರದಾಯಿಕ ಅವಿಭಕ್ತ ಕುಟುಂಬಗಳಲ್ಲಿರುವ ಹಿರಿಯರಿಗೆ ಅಧೀನತೆ, ನಿಯಂತ್ರಣ, ನಿರ್ಬಂಧಗಳು, ವರದಕ್ಷಿಣೆ ಸಂಬಂಧಿ ಕಿರುಕುಳ/ಹಿಂಸೆ ಮುಂತಾದ ಸಮಸ್ಯೆಗಳಿಂದ ಮುಕ್ತವಾಗಿಸುತ್ತವೆ’’ ಅತ್ಯಂತ ಆಶಾಭಾವನೆಯಿಂದ ವನಜ ಅವರು ತಮ್ಮ ಪ್ರಬಂಧವನ್ನು ಮುಗಿಸುತ್ತಾರೆ. ಆದರೆ ವಾಸ್ತವದಲ್ಲಿ ಅವರು ಸೂಚಿಸಿರುವ ಪರಿಹಾರಗಳು ಎಷ್ಟರ ಮಟ್ಟಿಗೆ ಪರಿಣಾಮಕಾರಿಗಳಾಗಬಲ್ಲವು? ಅಸಮಾನತೆಯನ್ನು ಅಧೀನತೆಯನ್ನು ಹುಟ್ಟು ಹಾಕುವ ಆರ್ಥಿಕ-ರಾಜಕೀಯ ಸಿದ್ಧಾಂತಗಳನ್ನು ಒಪ್ಪಿಕೊಂಡು ಸಮಾನತೆಯನ್ನು ಬಯಸುವುದು ವಿಪರ್ಯಾಸದಂತೆ ನನಗೆ ಕಾಣುತ್ತದೆ. ಪ್ರೇಮ ವಿವಾಹ ಮತ್ತು ಅಂತರ್ಜಾತಿ ವಿವಾಹಗಳು ಅತ್ಯಂತ ಕನಿಷ್ಠ ಪ್ರಮಾಣದಲ್ಲಿ ನಡೆಯುತ್ತಿವೆ. ಸಮಾಜದ ಕೆಳಜಾತಿ-ವರ್ಗಗಳಲ್ಲಿರುವ ಮಹಿಳೆಯರಿಗೆ ಇವು ಗಗನ ಕುಸುಮಗಳಾಗಿವೆ. ಪ್ರತಿಷ್ಠಿತ ಮಟ್ಟದಲ್ಲಿ ವನಜ ಅವರ ಪರಿಹಾರಗಳು ಬಿಡುಗಡೆಯ ದಾರಿಯಂತೆ ಕಾಣಬಹುದು. ಆದರೆ ಬಂಡವಾಳಶಾಹಿ ಹಾಗೂ ಪುರುಷಶಾಹಿಗಳೆರಡರ ಶೋಷಣೆಗೆ ಒಳಗಾಗಿರುವ ದುಡಿಮೆಗಾರ ಹೆಣ್ಣುಮಕ್ಕಳಿಗೆ ವನಜ ಅವರು ಸೂಚಿಸಿರುವ ಪರಿಹಾರ ವಿಮೋಚನೆಯನ್ನು ನೀಡುವುದು ಸಾಧ್ಯವಿಲ್ಲ.

# ಶಿಕ್ಷಣ ಕ್ಷೇತ್ರದ ಅಭಿವೃದ್ಧಿ ಯೋಜನೆಗಳು ಮತ್ತು ಮಹಿಳೆ

*ಎಂ. ಡಿ. ಉಷಾದೇವಿ*

ಒಂದು ಸಮಾಜವನ್ನು ನಿರ್ಮಾಣ ಮಾಡುವುದರಲ್ಲಿ ಹಾಗೂ ಅದರ ಸಂಪೂರ್ಣ ಪ್ರಗತಿಗೆ ಶಿಕ್ಷಣ ಎಂತಹ ಪ್ರಬಲವಾದ ಪಾತ್ರವನ್ನು ವಹಿಸುತ್ತದೆ ಎಂಬುದನ್ನು ಈಗಾಗಲೇ ಹಲವು ತಜ್ಞರು ಹಾಗೂ ಸಂಶೋಧನೆಗಳು ನಿರೂಪಿಸಿವೆ. ನಮಗೆ ತಿಳಿದಿರುವಂತೆ ಅಭಿವೃದ್ಧಿಶೀಲ ದೇಶಗಳು ಶಿಕ್ಷಣದಲ್ಲಿ ಮುನ್ನಡೆಯನ್ನು ಸಾಧಿಸಿ ತಮ್ಮ ಆರ್ಥಿಕ ಹಾಗೂ ಜನಜೀವನ ಮಟ್ಟವನ್ನು ಒಂದು ಉನ್ನತ ಸ್ಥಿತಿಗೆ ತೆಗೆದುಕೊಂಡು ಹೋಗಲು ಸಾಧ್ಯವಾಗಿದೆ. ಈ ಒಂದು ಹಿನ್ನೆಲೆಯಲ್ಲಿ ವಿವಿಧ ದೇಶಗಳ ಅಭಿವೃದ್ಧಿಯನ್ನು ಪರಾಮರ್ಶಿಸಿದಾಗ ನಮಗೆ ತಿಳಿದುಬರುವ ಅಂಶವೆಂದರೆ ಮೂರನೇ ಪ್ರಪಂಚದ ಹಲವಾರು ದೇಶಗಳು ಮುಖ್ಯವಾಗಿ ಆಫ್ರಿಕಾ ಹಾಗೂ ಏಷಿಯಾ ಖಂಡದಲ್ಲಿ ಇಂದಿಗೂ ಸಹ ಶಿಕ್ಷಣದ ಮಟ್ಟ ಬಹಳ ಶೋಚನೀಯ ಸ್ಥಿತಿಯಲ್ಲಿರುವುದು ಕಂಡುಬರುತ್ತದೆ. ಈ ದೇಶಗಳಲ್ಲಿ ಹಾಗೂ ಭಾರತ ಸೇರಿದಂತೆ ನಿರಕ್ಷರತೆ ಇನ್ನೂ ತಾಂಡವಾಡುತ್ತಿದ್ದು ಇದರಿಂದ ಅವುಗಳ ಆರ್ಥಿಕ ಹಾಗೂ ಸಾಮಾಜಿಕ ಪ್ರಗತಿಗೆ ಧಕ್ಕೆ ಉಂಟಾಗಿರುವುದು. ಈ ನಿರಕ್ಷರತೆಯ ಒಂದು ರೂಪರೇಖೆಯನ್ನು ನಾವು ಅವಲೋಕಿಸಿದಾಗ, ಎದ್ದು ಕಾಣಬರುವುದೆಂದರೆ ಇದರಲ್ಲಿ ಮಹಿಳೆಯರು ಹೆಚ್ಚು ಶಿಕ್ಷಣದಿಂದ ವಂಚಿತರಾಗಿರುವುದು. ಭಾರತದಲ್ಲಿ ಮಹಿಳಾ ಜನಸಂಖ್ಯೆ ಹೆಚ್ಚು ಕಮ್ಮಿ ಅರ್ಧದಷ್ಟು. ಅಂದರೆ ದೇಶದ ಸರ್ವತೋಮುಖ ಅಭಿವೃದ್ಧಿ ಆಗಬೇಕೆಂದರೆ ಪುರುಷರ ಸಮಾನರಾಗಿ ಮಹಿಳೆಯರೂ ಎಲ್ಲ ಅಭಿವೃದ್ಧಿ ಯೋಜನೆಗಳಲ್ಲಿ ಪಾಲ್ಗೊಳ್ಳಬೇಕಾಗುತ್ತದೆ. ಹಾಗೂ ಅದರ ಜೊತೆಗೆ ಈ ಯೋಜನೆಗಳಿಂದ ಆಗುವ ವಿವಿಧೋದ್ದೇಶ ಲಾಭಗಳನ್ನು ಸಹ ಪಡೆಯಬೇಕಾಗುತ್ತದೆ. ಅಂದರೆ ಮಹಿಳೆಯರು ಶಿಕ್ಷಣದ ಒಂದು ಸೌಲಭ್ಯವನ್ನು ಉಪಯೋಗಿಸಿಕೊಂಡರೆ ಅದರಿಂದ ಉಂಟಾಗುವ ತಮ್ಮ ಮಾನಸಿಕ ಬೆಳವಣಿಗೆ, ಚಿಂತನ ಶಕ್ತಿ, ವಿಮರ್ಶಾತ್ಮಕ ಕಲೆ ಹಾಗೂ ಕಾರ್ಯ ಚಾಕಚಕ್ಯತೆ ಸಾಮರ್ಥ್ಯ ಹಾಗೂ ಕೌಶಲ್ಯಗಳನ್ನು ಬೆಳೆಸಿಕೊಳ್ಳಲು ಸಾಧ್ಯವಾಗುತ್ತದೆ. ಈ ಒಂದು ಹಿನ್ನೆಲೆಯಲ್ಲಿ ಭಾರತದಲ್ಲಿ ಸ್ವಾತಂತ್ರ್ಯಾನಂತರ ಮಾಡಿದ ಸಂವಿಧಾನದಲ್ಲಿ ಪುರುಷರ ಸಮಾನ ಮಹಿಳೆಯರಿಗೂ ಸಹ ವಿವಿಧ ಕ್ಷೇತ್ರ, ಶಿಕ್ಷಣವೂ ಕೂಡಿದಂತೆ, ಮೂಲ ಹಕ್ಕನ್ನು ಒದಗಿಸಿ ಕೊಟ್ಟಿತ್ತು. ಇದರಂತೆ ಮಹಿಳೆಯರಿಗೂ ಶಿಕ್ಷಣದಲ್ಲಿ ಸಮಾನಾವಕಾಶ ಕಲ್ಪಿಸಿಕೊಡಲಾಯಿತು. ಆದರೆ ಸ್ವಾತಂತ್ರ ಬಂದು ೫೦ ವರ್ಷಗಳಾದರೂ ಹೆಚ್ಚು ಕಮ್ಮಿ ಅರ್ಧದಷ್ಟು ಜನ ಶಿಕ್ಷಣದಿಂದ

ವಂಚಿತರಾಗಿರುವುದು ಮತ್ತು ಮಹಿಳೆಯರು ಇದರಿಂದ ಹೆಚ್ಚು ವಂಚಿತರಾಗಿರುವುದು ಒಂದು ದುಃಖದಾಯಕ ಸಂಗತಿ.

ಸ್ವಾತಂತ್ರ್ಯಾನಂತರ ರೂಪಿಸಿದ ಹಲವಾರು ಯೋಜನೆಗಳಲ್ಲಿ ಶಿಕ್ಷಣ ಮಟ್ಟವನ್ನು ಉತ್ತಮಪಡಿಸಲು ವಿವಿಧ ಪ್ರಯತ್ನಗಳನ್ನು ಮಾಡಲಾಯಿತು. ಸುಮಾರು ಆಯೋಗಗಳು, ಕಮಿಟಿಗಳೂ ಭಾರತದಲ್ಲಿನ ಪ್ರಸ್ತುತ ಶಿಕ್ಷಣದ ಶೋಚನೀಯ ಸ್ಥಿತಿಯನ್ನು ವಿಶ್ಲೇಷಿಸಿ, ಇದರ ಕಾರಣಗಳನ್ನು ಹುಡುಕಿ ಹಲವಾರು ರೀತಿಯ ಶಿಫಾರಸ್ಸುಗಳನ್ನು ಮಂಡಿಸಿತು. ಆದರೆ ಭಾರತ ಸರ್ಕಾರ ಇವುಗಳನ್ನು ಯಶಸ್ವಿಯಾಗಿ ಜಾರಿಗೆ ತರಲು ಫಲಪ್ರದವಾಗಲಿಲ್ಲ. ಇದರ ಪರಿಣಾಮ ಶಿಕ್ಷಣದ ದುಃಸ್ಥಿತಿ ಮುಂದುವರೆದು ಮೂಲವಾದ ಪ್ರಾಥಮಿಕ ಶಿಕ್ಷಣವನ್ನು ಸಾರ್ವತ್ರೀಕರಣ ಗೊಳಿಸಲು ಅಸಫಲವಾಗಿ ದೇಶದಲ್ಲಿ ನಿರಕ್ಷರ ಜನಸಂಖ್ಯೆಯನ್ನು ಬೆಳೆಸಲು ಅನುವು ಮಾಡಿಕೊಟ್ಟಿತು. ಭಾರತ ಸರ್ಕಾರವು ಸ್ವಾತಂತ್ರ್ಯಾನಂತರ ಹಲವಾರು ಯೋಜನೆಗಳನ್ನು ಹಮ್ಮಿಕೊಂಡು ಶಿಕ್ಷಣ ಮಟ್ಟವನ್ನು ಉತ್ತಮಪಡಿಸಲು ಪ್ರಯತ್ನ ಸತತವಾಗಿ ಮಾಡುತ್ತಿರುವುದು ನಿಜವಷ್ಟೇ. ಆದರೂ ಸಹ ಸ್ವಾತಂತ್ರ್ಯ ಬಂದು ೫೦ ವರ್ಷಗಳು ಕಳೆದರೂ ನಾವು ಮೂಲತಃ ಪ್ರಾಥಮಿಕ ಶಿಕ್ಷಣವನ್ನು ಸಾರ್ವತ್ರೀಕರಣಗೊಳಿಸಲು ಸಾಧ್ಯವಾಗಿಲ್ಲ. ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣದ ಅಸಫಲತೆಗೆ ಮುಖ್ಯವಾಗಿ ಗ್ರಾಮಾಂತರ, ಬಡಕುಟುಂಬದವರು ಹಾಗೂ ಕೆಳ ದರ್ಜೆಗಳ ಪಂಗಡಗಳ ಮಕ್ಕಳು ಶಿಕ್ಷಣದಲ್ಲಿ ಭಾಗವಹಿಸಲು ಆಗದೇ ಇರುವುದು. ಈ ಪ್ರಾಥಮಿಕ ಶಿಕ್ಷಣದ ಒಂದು ಲಾಭವನ್ನು ಪಡೆಯದಂತಹ ಮಕ್ಕಳು ಮುಂದೆ ನಿರಕ್ಷರ ಗುಂಪಿಗೆ ಸೇರಿ ನಿರಕ್ಷರತೆಯನ್ನು ಇನ್ನೂ ತೀವ್ರಗತಿಯಲ್ಲಿ ಮುಂದುವರೆಸಲು ಕಾರಣರಾಗುತ್ತಾರೆ.

ಈ ಒಂದು ಹಿನ್ನೆಲೆಯಲ್ಲಿ ಪ್ರಸ್ತುತ ಲೇಖನ ಶಿಕ್ಷಣ ಕ್ಷೇತ್ರದ ಅಭಿವೃದ್ಧಿ ಯೋಜನೆಗೆ ಸೀಮಿತವಾಗಿದ್ದು, ಭಾರತದಲ್ಲಿ ಮಹಿಳಾ ಶಿಕ್ಷಣ ಅಭಿವೃದ್ಧಿಗೆ ಈ ಯೋಜನೆಗಳು ಹೇಗೆ ಪೂರಕವಾಗಿದೆ ಎಂಬುದನ್ನು ಚರ್ಚಿಸುತ್ತದೆ. ಶಿಕ್ಷಣ ಕ್ಷೇತ್ರದಲ್ಲಿ ಜಾರಿಯಲ್ಲಿರುವ ಹಲವಾರು ಯೋಜನೆಗಳು ಪ್ರತ್ಯೇಕವಾಗಿ ಹೆಣ್ಣು ಮಕ್ಕಳು ಹಾಗೂ ಮಹಿಳೆಯರನ್ನು ಶಿಕ್ಷಣಕ್ಕೆ ಪ್ರೋತ್ಸಾಹಿಸಲು ಕೈಗೊಂಡಿರುವ ಪ್ರಯತ್ನಗಳೇ. ಈ ರೀತಿಯ ಯೋಜನೆಗಳನ್ನು ನಾವು ವಿಶ್ಲೇಷಿಸುವುದಕ್ಕೆ ಮುಂಚೆ ನಾವು ಇದುವರೆವಿಗೂ ಶಿಕ್ಷಣ ಕ್ಷೇತ್ರದಲ್ಲಿ ಸಾಧಿಸಿರುವುದಾದರೂ ಏನು ಹಾಗೂ ಮಹಿಳೆಯರ ಶಿಕ್ಷಣ ಎಷ್ಟರ ಮಟ್ಟಿಗೆ ಪ್ರಗತಿ ಹೊಂದಿದೆ ಎಂಬುದನ್ನು ಚರ್ಚಿಸೋಣ. ಶಿಕ್ಷಣ ಪ್ರಗತಿಯನ್ನು ಮಾಪನ ಮಾಡಲು ಕೆಲವು ಸೂಚ್ಯಂಕಗಳಾದ ಸಾಕ್ಷರತೆ, ದಾಖಲಾತಿ, ಸರಾಸರಿ ಶಾಲಾ ಆಯುಶ್ಯಗಳನ್ನು ಗಮನಿಸೋಣ.

### ಭಾರತದಲ್ಲಿ ಮಹಿಳಾ ಶಿಕ್ಷಣ

ನಮ್ಮ ಭಾರತದಲ್ಲಿ ಇಂದಿನ (೧೯೯೧ನೇ ಗಣತಿಯ ಮೇರೆಗೆ) ಸಾಕ್ಷರತೆ ಮಟ್ಟ ಶೇ.೫೨.೦ ಅಂದರೆ ಭಾರತದಲ್ಲಿನ ಅರ್ಧದಷ್ಟು ಜನರು ಮಾತ್ರ ಪ್ರಾಥಮಿಕ ಶಿಕ್ಷಣದ ಒಂದು ಲಾಭವನ್ನು ಪಡೆದು ಸಾಕ್ಷರತಾ ಸಾಮರ್ಥ್ಯವನ್ನು ದಕ್ಕಿಸಿಕೊಂಡಿರುತ್ತಾರೆ.

ಸ್ವಾತಂತ್ರ ಬಂದ ಸಮಯದಲ್ಲಿ ನಮ್ಮ ಸಂವಿಧಾನ ರಚನೆಯಾದಾಗ ನಾವು ೬ ರಿಂದ ೧೪ ವರ್ಷ ವಯಸ್ಸಿನ ಎಲ್ಲಾ ಮಕ್ಕಳಿಗೂ ಉಚಿತ ಹಾಗೂ ಕಡ್ಡಾಯ ಶಿಕ್ಷಣ ಸಂವಿಧಾನ ರಚನೆಯಾಗಿ ೧೦ ವರ್ಷದ ಒಳಗೆ ಸೌಲಭ್ಯವನ್ನು ಕಲ್ಪಿಸಿಕೊಡುವ ಒಂದು ಗುರಿಯನ್ನು ಇಟ್ಟುಕೊಂಡಿದ್ದೆವು. ಆದರೆ ಈ ಒಂದು ಮಹತ್ತರ ಗುರಿ ೫೦ ವರ್ಷಗಳಾದರೂ ತಲುಪದೇ ಇರುವುದು ಒಂದು ವಿಷಾದಕರ ಪರಿಸ್ಥಿತಿ. ಭಾರತ ಸ್ವಾತಂತ್ರ ಪಡೆದು ಸಂವಿಧಾನ ರಚಿಸಿದಂತಹ ಸಂದರ್ಭದಲ್ಲಿದ್ದ ಸಾಕ್ಷರತೆ ಮಟ್ಟ ೧೯೯೧ರಲ್ಲಿ ಸಾಕಷ್ಟು ಏರಿದೆ. ಆದರೂ ಸಹ ನಮ್ಮ ಜನಸಂಖ್ಯೆ ಈ ಅವಧಿಯಲ್ಲಿ ತೀವ್ರಗತಿಯಲ್ಲಿ ಏರುತ್ತಿರುವುದರಿಂದ ಸಾಕ್ಷರತೆ ಮಟ್ಟ ಹೆಚ್ಚಿದರೂ ಜೊತೆ ಜೊತೆಗೆ ಅನಕ್ಷರಸ್ಥರ ಸಂಖ್ಯೆಯೂ ಹೆಚ್ಚಿತು. ನಾವು ಈ ಸಾಕ್ಷರತೆಯಲ್ಲಿ ಸಾಧಿಸಿರುವ ಒಂದು ಯಶಸ್ಸೆಂದರೆ, ಈ ನಮ್ಮ ದೇಶದಲ್ಲಿ ಹಿಂದಿನಂತೆ ನಿರಕ್ಷರರ ಸಂಖ್ಯೆ ಸಾಕ್ಷರಸ್ಥರ ಸಂಖ್ಯೆಯನ್ನು ಮೀರಿಲ್ಲ. ಸಂಪೂರ್ಣ ಸಾಕ್ಷರತೆ ಸಾಧಿಸಲಿಕ್ಕೆ ಆಗದಿದ್ದರೂ ಸಹ ನಮ್ಮ ದೇಶದಲ್ಲಿ ಈಗ ಸಾಕ್ಷರಸ್ಥರು ನಿರಕ್ಷಸ್ಥರಿಗಿಂತ ಹೆಚ್ಚು ಇದ್ದಾರೆ ಎನ್ನುವ ಒಂದು ಸಮಾಧಾನಕಾರ ಪರಿಸ್ಥಿತಿ.

ಇಂತಹ ಒಂದು ಸಂಪೂರ್ಣ ಸಾಕ್ಷರತೆ ಸಾಧಿಸಲಿಕ್ಕೆ ಆಗದಿರುವಂತಹ ಹಿನ್ನೆಲೆಯಲ್ಲಿ ಇಂದಿಗೂ ಸಹ ಭಾರತವು ಪ್ರಪಂಚದ ಅತಿ ಹೆಚ್ಚಿನ ನಿರಕ್ಷರಸ್ಥರನ್ನು ಹೊಂದಿರುವ ದೇಶ ಎಂಬ ಹೀನಾಯವಾದ ಬಿರುದನ್ನು ಪಡೆದಿದೆ. ಅಂಕಿ-ಅಂಶಗಳ ಪ್ರಕಾರ ೧೯೯೫ರಲ್ಲಿ ಭಾರತದಲ್ಲಿ ೨೯೦ ಮಿಲಿಯನ್ ಗೂ ಹೆಚ್ಚು ಅನಕ್ಷರಸ್ಥರಿದ್ದು(೧೫ವರ್ಷ ಮೇಲ್ಪಟ್ಟ) ಇದರಲ್ಲಿ ಶೇ. ೬೩ಕ್ಕೂ ಹೆಚ್ಚು ಮಹಿಳೆಯರು ಭಾಗಿಗಳಾಗಿದ್ದಾರೆ. ಈ ದುಸ್ಥಿತಿ ನಿಜಕ್ಕೂ ಶೋಚನೀಯ. ನಮ್ಮ ಮಹಿಳೆಯರ ಸಾಕ್ಷರತೆ ಮಟ್ಟವನ್ನು ಪರಾಮರ್ಶಿಸಿದಾಗ ನಮಗೆ ತೋರಿಬರುವುದೆಂದರೆ, ಸ್ವಾತಂತ್ರ ಬಂದಂತಹ ಸಂದರ್ಭದಲ್ಲಿ ಮಹಿಳೆಯರ ಸಾಕ್ಷರತೆ ಶೇ.೭.೯(೧೯೫೧) ಈಗ(೧೯೯೧) ಅದು ಶೇ.೩೯.೪ಕ್ಕೆ ಏರಿದೆ. ಅಂದರೆ ಇಂದಿಗೂ ಸಹ ನಮ್ಮ ಭಾರತದಲ್ಲಿ ಸುಮಾರು ಶೇ.೬೦ಕ್ಕೂ ಹೆಚ್ಚು ಮಹಿಳೆಯರು ನಿರಕ್ಷರಸ್ಥರಾಗಿದ್ದಾರೆ. ನಮ್ಮ ಭಾರತದಲ್ಲಿ ಹೆಚ್ಚು ಕಡಿಮೆ ಮಹಿಳೆಯರ ಸಂಖ್ಯೆ ಇಡೀ ಜನಸಂಖ್ಯೆಯ ಅರ್ಧದಷ್ಟಿದ್ದರೂ, ಕೇವಲ ಶೇ.೩೯.೦ರಷ್ಟು ಮಾತ್ರ ಸಾಕ್ಷರಸ್ಥರು ಎನ್ನುವುದು ಒಂದು ಶೋಚನೀಯ ಪರಿಸ್ಥಿತಿ. ಇಂತಹ ಒಂದು ಅಧಿಕ ಮಟ್ಟದ ನಿರಕ್ಷರತೆ ಮಹಿಳೆಯರನ್ನು ಅಭಿವೃದ್ಧಿ ಕಾರ್ಯದಲ್ಲಿ ಪಾಲ್ಗೊಳ್ಳಲು ಹೇಗೆ ಸಹಕಾರವಾಗುತ್ತದೆ ಅಥವಾ ಅವರ ಸ್ಥಾನಮಾನ, ಅಂತಸ್ತನ್ನು ಹೆಚ್ಚಿಸಲು ಹೇಗೆ ಸಾಧ್ಯವಾಗುತ್ತದೆ ಎನ್ನುವುದು ಒಂದು ಬೃಹತ್ ಪ್ರಶ್ನೆ ಇಂದಿಗೂ ನಮ್ಮನ್ನು ಕಾಡುತ್ತಿದೆ.

ಒಂದು ಸಮಾಜದಲ್ಲಿ ಮಹಿಳೆಯರ ಸ್ಥಾನಮಾನ ಹಾಗೂ ಅಂತಸ್ತನ್ನು ಅಳೆಯುವಾಗ ನಾವು ಅವರಲ್ಲಾಗಿರುವ ಒಂದು ಶೈಕ್ಷಣಿಕ ಪ್ರಗತಿಯನ್ನು ಪುರುಷರ ಜೊತೆಗೆ ಹೋಲಿಸಿ ನೋಡಬೇಕಾಗುತ್ತದೆ. ನಮ್ಮ ದೇಶದಲ್ಲಿ ಸಾಕ್ಷರತೆ ಸಮಸ್ಯೆ ಇನ್ನು ಕಾಡುತ್ತಿರುವಾಗ, ಇದರ ಒಂದು ಪ್ರಮಾಣ, ಅನುಪಾತ ಮಹಿಳೆಯರನ್ನು ಎಷ್ಟರ ಮಟ್ಟಿಗೆ ತಟ್ಟಿದೆ

ಎಂಬುದನ್ನು ನೋಡಬೇಕಾಗುತ್ತದೆ. ಸ್ವಾತಂತ್ರ ಪಡೆದಂತಹ ಸಂದರ್ಭದಲ್ಲಿ ಪುರುಷರ ಸಾಕ್ಷರತೆ ಮಟ್ಟ ಶೇ.೨೪.೯೫ರಷ್ಟಿತ್ತು ಹಾಗೂ ಮಹಿಳೆಯರ ಸಾಕ್ಷರತೆ ಶೇ.೭.೯ರಷ್ಟಿತ್ತು. ಈಗ ೧೯೯೧ನೇ ಗಣತಿಯ ಪ್ರಕಾರ ಪುರುಷರ ಸಾಕ್ಷರತೆ ದರ ಶೇ.೬೭.೩ಕ್ಕೆ ಏರಿದೆ ಮತ್ತು ಮಹಿಳೆಯರ ಸಾಕ್ಷರತೆ ಪ್ರಮಾಣ ಶೇ.೩೯.೩೯ಕ್ಕೆ ಏರಿದೆ. ಅಂದರೆ ಪುರುಷರಂತೆಯೇ ಮಹಿಳೆಯರೂ ಸಹ ತಮ್ಮ ಸಾಕ್ಷರತಾ ಮಟ್ಟವನ್ನು ಈ ಅವಧಿಯಲ್ಲಿ ಹೆಚ್ಚಿಸಿಕೊಂಡು ಹೋಗಿರುತ್ತಾರೆ. ಆದರೆ ನಾವು ಇಲ್ಲಿ ಮುಖ್ಯವಾಗಿ ನೋಡಬೇಕಾಗಿರುವುದು ಪುರುಷ ಮಹಿಳೆಯರ ಸಾಕ್ಷರತಾ ಮಟ್ಟದಲ್ಲಿದ್ದಂತಹ ಒಂದು ಅಂತರ ಈ ಅವಧಿಯಲ್ಲಿ ಕಡಿಮೆಯಾಗಿದೆಯೇ ಎಂದು. ಇದನ್ನು ನಾವು ಗಮನಿಸಿದಾಗ ನಮಗೆ ಕಂಡುಬರುವ ವಾಸ್ತವಾಂಶವೆಂದರೆ ಅಂತರ ಹೆಚ್ಚಿರುವುದು. ೧೯೫೧ರಲ್ಲಿದ್ದಂತಹ ೧೭.೦೨. ೧೯೯೧ರಲ್ಲಿ ೨೭.೭೫ಕ್ಕೆ ಏರಿರುವುದು. ಅಂದರೆ ಮಹಿಳಾ ಸಾಕ್ಷರತೆ ಸಾಧನೆ ಪುರುಷರ ಸಾಕ್ಷರತೆ ಸಾಧನೆಗಿಂತ ಹಿಂದುಳಿಯುತ್ತಾ ಬಂದಿದೆ. ಇದರಿಂದ ನಾವು ಅರಿಯಬೇಕಾಗುವಂತಹ ಅಂಶವೆಂದರೆ, ಮಹಿಳಾ ಶಿಕ್ಷಣದ ಅಭಿವೃದ್ಧಿಗೆ ನಾವು ಮಾಡುತ್ತಿರುವ ಪ್ರಯತ್ನ ಸಾಲದು. ಹಾಗೂ ನಾವು ಇನ್ನೂ ಒತ್ತುಕೊಡುವ ಅವಶ್ಯಕತೆಯಿದೆ ಎಂಬುದನ್ನು ಮನಗೊಳ್ಳಬೇಕು.

ಈ ಮೇಲಿನ ಒಂದು ವಿಶ್ಲೇಷಣೆಯಿಂದ ಹೊರಬರುವ ಅಂಶವೆಂದರೆ, ಪ್ರಾಥಮಿಕ ಸಾರ್ವತ್ರೀಕರಣ ವಿಫಲತೆಯಿಂದ ನಾವು ಸಾಕ್ಷರತೆಯನ್ನು ತೊಡೆದು ಹಾಕಲು ಸಾಧ್ಯವಾಗುತ್ತಿಲ್ಲ. ಮತ್ತು ಪ್ರಾಥಮಿಕ ಶಿಕ್ಷಣವನ್ನು ಸಾರ್ವತ್ರೀಕರಣ ಮಾಡಲು ಮುಖ್ಯವಾಗಿ ನಾವು ಬಾಲಕಿಯರನ್ನು ಹೆಚ್ಚು ಗುರಿ ಇಟ್ಟುಕೊಂಡು ಸಾಧನೆ ಮಾಡಬೇಕಾಗುತ್ತದೆ.

ಇದೇ ರೀತಿ ನಾವು ಇನ್ನೂ ಕೆಲವು ಶಿಕ್ಷಣದ ಸೂಚ್ಯಂಕಗಳನ್ನು ನೋಡಿದಾಗ ನಮಗೆ ನಾವು ಮಹಿಳಾ ಶಿಕ್ಷಣದಲ್ಲಿ ಸಾಧಿಸಿರುವ ಪ್ರಗತಿಯು ಗಮನಕ್ಕೆ ಬರುತ್ತದೆ. ಪ್ರಾಥಮಿಕ ಶಾಲಾ ಶಿಕ್ಷಣದಲ್ಲಿ ನಾವು ಬಾಲಕಿಯರ ದಾಖಲಾತಿ ಪ್ರಮಾಣವನ್ನು ಬಾಲಕರ ದಾಖಲಾತಿ ಪ್ರಮಾಣದ ಜೊತೆಗೆ ಹೊಂದಿಸಿ ನೋಡಿದಾಗ ನಮಗೆ ಕಂಡುಬರುವುದೆಂದರೆ ೧೯೯೨ರಲ್ಲಿ ಬಾಲಕಿಯರ ಒಟ್ಟು (Gross) ದಾಖಲಾತಿ ಹೆಚ್ಚಿದ್ದರೂ ಸಹ ಅವರ ನಿವ್ವಳ(Net) ದಾಖಲಾತಿ ಪ್ರಮಾಣ, ಬಾಲಕರಿಗಿಂತ ಕಡಿಮೆ. ಅಂದರೆ ಇದರಿಂದ ಸೂಚಿತವಾಗುವ ಅಂಶವೆಂದರೆ ದಾಖಲಾದ ಎಲ್ಲಾ ಹೆಣ್ಣು ಮಕ್ಕಳು ಪ್ರಾಥಮಿಕ ಹಂತದಲ್ಲಿ ಯಶಸ್ವಿಯಾಗುವುದಿಲ್ಲ. ಮಧ್ಯದಲ್ಲೇ ಶಾಲೆ ಬಿಡುವುದು(Dropout) ಹಾಗೂ ಒಂದೇ ತರಗತಿಯಲ್ಲಿ ಒಂದು ವರ್ಷಕ್ಕಿಂತ ಹೆಚ್ಚು ಇರುವುದು (Stagnation) ಶಾಲೆಗೆ ಕ್ರಮವಾಗಿ ಬರದೇ ಇರುವಂತಹ ಸಮಸ್ಯೆಗಳಿಂದ ಬಾಲಕಿಯರು ತೊಳಲುತ್ತಿರುವುದು. ಈ ಸಮಸ್ಯೆಗಳಿಗೆ ಶಾಲೆಗೆ ಸಂಬಂಧಿಸಿದ ಮತ್ತು ಶಾಲಾ ಹೊರಗಡೆಗೆ ಸಂಬಂಧಿಸಿದ ಹಲವಾರು ರೀತಿಯ ಅಡಚಣೆ, ಅಡ್ಡಿ ಆತಂಕಗಳು ಕಾರಣವಾಗಿರುತ್ತವೆ.

ಇಂದಿಗೂ ಪ್ರಾಥಮಿಕ ಶಾಲಾ ಹಂತದಲ್ಲಿ ಕಂಡುಬರುವ ನಿಜಸ್ಥಿತಿಯೆಂದರೆ ಕಡಿತ ಹಾಗೂ ಸ್ಥಗಿತತೆ ಪ್ರಮಾಣ ಬಾಲಕರಿಗಿಂತ ಬಾಲಕಿಯರದೇ ಹೆಚ್ಚು. ಈ ಒಂದು ಪ್ರಸಂಗದಿಂದ ಶಾಲೆಯ ಹೊರಗಡೇ ಉಳಿಯುವ ಮಕ್ಕಳ ಸಂಖ್ಯೆ ಏರುತ್ತಿರುವುದು. ಬಾಲಕಿಯರು ನಡುವಿನಲ್ಲೇ ಶಾಲೆ ಬಿಡುವ ಪ್ರಮಾಣ ಶೇ.೬೯.೦(೧ನೇ ತರಗತಿಯಿಂದ ೫ನೇ ತರಗತಿಯ ಅವಧಿಯೊಳಗೆ). ೧೯೯೭ರಲ್ಲಿ ಸುಮಾರು ೩೨ ಮಿಲಿಯನ್ ಶಾಲಾ ವಯಸ್ಸಿನ ಮಕ್ಕಳು ಶಾಲೆಯ ಹೊರಗಡೆ ಉಳಿದಿರುವ ಸಂಗತಿ ಬೆಳಕಿಗೆ ಬಂದಿದೆ. ಇದರಲ್ಲಿ ಬಾಲಕಿಯರ ಸಂಖ್ಯೆಯೇ ಅಧಿಕ.

ಶಿಕ್ಷಣದ ಮತ್ತೊಂದು ಸೂಚ್ಯಂಕ ಎಂದರೆ ಸರಾಸರಿ ಶಾಲಾ ಆಯುಶ್ಯ. ಅಂದರೆ ದೇಶದ ಪ್ರಜೆಗಳ ಒಂದು ಸರಾಸರಿ ಶಾಲಾ ವಯಸ್ಸು. ಭಾರತದಲ್ಲಿ ಇದರ ದರ ಕೇವಲ ೪.೮ ಹಾಗೂ ಬಾಲಕಿಯರದು ಮತ್ತು ಕಡಿಮೆ, ಶೇ.೪.೩. ಈ ದರವು ಇಡೀ ಪ್ರಪಂಚದ ಎಲ್ಲಾ ಅಭಿವೃದ್ಧಿ ಹೊಂದಿರುತ್ತಿರುವ ದೇಶಗಳ ಒಟ್ಟು ಸರಾಸರಿಗಿಂತ ಕಡಿಮೆ.

ಈ ಮೇಲೆ ಚರ್ಚಿಸಿದಂತಹ ಎಲ್ಲಾ ಸಂಗತಿಗಳಿಂದ ನಮಗೆ ತಿಳಿದು ಬರುವ ಅಂಶವೆಂದರೆ ಪ್ರಾಥಮಿಕ ಶಿಕ್ಷಣ ಹಂತವೇ ಬಾಲಕಿಯರಿಗೆ ಅತಿದೊಡ್ಡ ಸಮಸ್ಯೆ. ಹಾಗೂ ಪ್ರಾಥಮಿಕ ಶಿಕ್ಷಣ ಸಾರ್ವತ್ರೀಕರಣದಲ್ಲಿ ವಿಫಲತೆ ಉಂಟಾಗಲು ಬಾಲಕಿಯರೇ ಹೆಚ್ಚು ಕಾರಣ. ಈ ಒಂದು ಹಿನ್ನೆಲೆಯಲ್ಲಿ ಮಹಿಳಾ ಶಿಕ್ಷಣವನ್ನು ವಿಶ್ಲೇಷಿಸಿದಾಗ ನಮಗೆ ತೋರಿ ಬರುವ ಅಂಶವೆಂದರೆ ಈ ಒಂದು ಅಸಫಲತೆ ಉಂಟಾಗಲು ನಮ್ಮ ಸಮಾಜ ಹಾಗೂ ಶಾಲಾ ಪದ್ಧತಿ ಏಕರೀತಿಯಲ್ಲಿ ಕಾರಣವಾಗಿರುವುದು. ನಮ್ಮ ಸಮಾಜವು ಇಂದಿಗೂ ಸಹ ಹೆಣ್ಣು ಮಕ್ಕಳ ಶಿಕ್ಷಣದಲ್ಲಿ ಅಸಡ್ಡೆ ತೋರಿಸುತ್ತಿರುವುದು. ಗಂಡು-ಹೆಣ್ಣುಗಳಲ್ಲಿನ ತಾರತಮ್ಯತೆ ಹಾಗೂ ಹಲವಾರು ಸಂಪ್ರದಾಯ, ಕಟ್ಟುನಿಟ್ಟುಗಳನ್ನು ಬಾಲಕಿಯರ ಮೇಲೆ ಹೇರುವುದು. ಇದೆಲ್ಲಕ್ಕೂ ಪೂರಕವಾಗಿಯೋ ಎಂಬಂತೆ ಬಡತನ, ಪೋಷಕರ ನಿರಕ್ಷರತೆ, ಮೌಢ್ಯ, ಅಜ್ಞಾನ, ಬಾಲಕಿಯರ ಮೇಲೆ ವಿವಿಧ ರೀತಿಯ ಅಡೆ ತಡೆಗಳನ್ನು ಹೊರಿಸಿ ಅವರನ್ನು ಶಿಕ್ಷಣದಿಂದ ವಂಚಿತರಾಗುವಂತಹ ಒಂದು ಪರಿಸ್ಥಿತಿಯನ್ನು ಉಂಟು ಮಾಡುತ್ತದೆ.

ಇದೇ ರೀತಿಯಲ್ಲಿ ಶಾಲಾ ಪದ್ಧತಿಯೂ ಸಹ ಕೆಲವು ಅಡಚಣೆಗಳನ್ನು ಬಾಲಕಿಯರ ಮೇಲೆ ಹೇರುತ್ತದೆ. ಶಿಕ್ಷಣ ವ್ಯವಸ್ಥೆ, ಆಚರಣೆ, ನಿಯಮಗಳು, ಪಠ್ಯವಸ್ತು, ಶಿಕ್ಷಕರ ಮನೋಧಾರ್ಡ್ಯ, ಲಿಂಗಬೇಧಗಳಿಂದ ಹೆಣ್ಣುಮಕ್ಕಳು ಶಾಲೆಗೆ ದಾಖಲಾದರೂ ನಡುವೆ ಬಿಡುವ ಪ್ರಸಂಗಗಳೇ ಹೆಚ್ಚು. ಅದರಲ್ಲೂ ಗ್ರಾಮಾಂತರ ಪ್ರದೇಶದಿಂದ ಬಂದಂತಹ ಹೆಣ್ಣುಮಕ್ಕಳ ಹಾಗೂ ಕಡುಬಡತನ ಕುಟುಂಬದಿಂದ ಬಂದಂತಹ ಬಾಲಕಿಯರು ಹಾಗೂ ಕೆಳಜಾತಿ/ ಸಾಮಾಜಿಕ ದರ್ಜೆಗೆ ಸೇರಿದಂತಹ ಹೆಣ್ಣು ಮಕ್ಕಳಿಗೆ ಶಿಕ್ಷಣ ಒಂದು ಅಪರೂಪ ಆಸೆ. ಇಂತಹ ಒಂದು ಸಂದರ್ಭದಲ್ಲಿ ಒಂದು ದೇಶವು ಹೆಣ್ಣು ಮಕ್ಕಳ ಶಿಕ್ಷಣ ಅಭಿವೃದ್ಧಿಯ ಕಡೆಗೆ ಹೆಚ್ಚು ಹೆಚ್ಚು ಗಮನಹರಿಸಿ ಯೋಜನೆಗಳನ್ನು ರೂಪಿಸಿ ಶಿಕ್ಷಣದ

ಒಂದು ಲಾಭವನ್ನು ಪಡೆಯುವ ಅವಕಾಶಗಳನ್ನು ಮೂಡಿಸಬೇಕಾಗುತ್ತದೆ. ಈ ದಿಸೆಯಲ್ಲಿ ಭಾರತದಲ್ಲಾಗಿರುವ ಯೋಜನೆಗಳನ್ನು ಈಗ ಚರ್ಚಿಸೋಣ.

**ಶಿಕ್ಷಣ ಮತ್ತು ಮಹಿಳಾ ಅಭಿವೃದ್ಧಿ**

ಭಾರತದಲ್ಲಿ ಸ್ವಾತಂತ್ರಾನಂತರ ಮೂಡಿಬಂದಿರುವ ಹಲವಾರು ಪಂಚವಾರ್ಷಿಕ ಯೋಜನೆಗಳಲ್ಲಿ ಮಹಿಳಾ ಶಿಕ್ಷಣ ಮಟ್ಟವನ್ನು ಸುಧಾರಿಸಲು ವಿಶೇಷ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುವುದನ್ನು ನಾವು ಗಮನಿಸಬಹುದು. ಇದರಂತೆ ಮೊದಲನೇ ಪಂಚವಾರ್ಷಿಕ ಯೋಜನೆಯಲ್ಲಿ (೧೯೫೧-೫೬) ಬಾಲಕಿಯರ ದಾಖಲಾತಿಯನ್ನು ಪ್ರಾಥಮಿಕ ಹಂತದಲ್ಲಿ ಉತ್ತಮ ಪಡಿಸಲು ಶಾಲಾ ಸೌಲಭ್ಯಗಳನ್ನು ಹೆಚ್ಚಿಸಲಾಯಿತು. ಇದರೊಡನೆ ಎಲ್ಲಾ ಬಾಲಕರ ಶಾಲಾ/ಕಾಲೇಜುಗಳಲ್ಲಿ ಹುಡುಗಿಯರೂ ದಾಖಲಾಗಲು ಸಮಾನಾಂತರ ಅವಕಾಶ ಕಲ್ಪಿಸಲಾಯಿತು ಹಾಗೂ ಎಲ್ಲಾ ಶಾಲೆಗಳನ್ನು ಸಹಶಿಕ್ಷಣ ಶಾಲೆಗಳೆಂದು ಪರಿಗಣಿಸಲಾಯಿತು. ಹೆಣ್ಣು ಮಕ್ಕಳ ಪೋಷಕರನ್ನು ವಿಶೇಷವಾಗಿ ಈ ಸಹ ಶಿಕ್ಷಣ ಶಾಲೆಗಳಿಗೆ ಕಳುಹಿಸುವಂತೆ ಪ್ರೋತ್ಸಾಹ ಮಾಡಲಾಯಿತು.

ಎರಡನೇ ಪಂಚವಾರ್ಷಿಕ ಯೋಜನೆಯಲ್ಲಿ (೧೯೫೬-೬೧) ಹೆಣ್ಣು ಮಕ್ಕಳಿಗೆ ಶಿಕ್ಷಣ ಪಡೆಯಲು ಹೆಚ್ಚು ಹೆಚ್ಚು ಅವಕಾಶ ಕೊಡಲಾಯಿತು. ಹೆಣ್ಣುಮಕ್ಕಳ ಶಿಕ್ಷಣದ ಬಗ್ಗೆ ಅರಿವು ಮೂಡಿಸಲು ಪೋಷಕರಿಗೂ ಸಹ ವಿಶೇಷ ಶಿಕ್ಷಣ ಹಾಗೂ ಶಾಲೆಗಳಲ್ಲಿ ಮಹಿಳಾ ಶಿಕ್ಷಕಿಯರ ನೇಮಕಾತಿ ಹಾಗೂ ಹೆಣ್ಣು ಮಕ್ಕಳಿಗಾಗಿ ಪ್ರತ್ಯೇಕ ಶಾಲೆಗಳನ್ನು ತೆರೆಯಲಾಯಿತು. ಈ ಅವದಿಯಲ್ಲಿ ಶಿಕ್ಷಣ ಯೋಜನೆಯು ಪುರುಷ-ಮಹಿಳೆಯರಲ್ಲಿರುವ ಸಾಕ್ಷರತೆ ಅಸಮಾನತೆಯನ್ನು ಕಡಿಮೆ ಮಾಡುವುದು ಹಾಗೂ ಮೂಲ ಶಿಕ್ಷಣ, ಮತ್ತು ಪ್ರೌಢ ಶಿಕ್ಷಣದ ಸೌಲಭ್ಯವನ್ನು ಹೆಣ್ಣು ಮಕ್ಕಳಿಗೆ ಹೆಚ್ಚು ಕಲ್ಪಿಸಿಕೊಡಲು ಒತ್ತು ಕೊಟ್ಟಿತು. ಈ ಯೋಜನೆಯಲ್ಲಿ ಪ್ರೌಢ ಶಿಕ್ಷಣ ಹಂತದಲ್ಲಿ ಹೆಣ್ಣ ಮಕ್ಕಳಿಗೆ ನರ್ಸ್ ೯, ಶಿಕ್ಷಕಿ, ಆರೋಗ್ಯ, ಕಾರ್ಯಕರ್ತೆ ಇನ್ನಿತರ ಉದ್ಯೋಗಕ್ಕೆ ಹೊಂದಿಕೊಂಡಂತೆ ತರಬೇತಿ ಕಾರ್ಯಕ್ರಮವನ್ನು ಹಮ್ಮಿಕೊಂಡಿತ್ತು. ಇದರ ಜೊತೆಗೆ ವಿಶೇಷ ಸೌಲಭ್ಯಗಳಾದ ಗ್ರಾಮಾಂತರ ಪ್ರದೇಶಗಳಲ್ಲಿ ಮಹಿಳಾ ಶಿಕ್ಷಕಿಯರಿಗೆ ಉಚಿತ ವಸತಿ ಸೌಕರ್ಯ, ಶಾಲಾ ಮಾತೆಯರ ನೇಮಕಾತಿ, ಮಹಿಳೆಯರಿಗೆ ಕಂಡೆನ್ಸ್‌ಡ್ ಕೋರ್ಸ್ ೯(Condensed Course) ಮಹಿಳಾ ಶಿಕ್ಷಕಿಯರಿಗೆ ಸ್ಟೈಪೆಂಡ್, ಹಾಜರಾತಿ ಸ್ಕಾಲರ್ ಷಿಪ್, ಶಾಲಾ ಫೀ ಕಡಿತ ಪ್ರೌಢ ಶಾಲೆಯಲ್ಲಿ ಹೆಣ್ಣು ಮಕ್ಕಳಿಗೆ ಪ್ರತ್ಯೇಕ ಹಾಸ್ಟೆಲ್ ಗಳು. ಇನ್ನು ಇತರ ಸೌಲಭ್ಯಗಳನ್ನು ಒದಗಿಸಲಾಯಿತು. ಈ ಯೋಜನೆಯು ಅವಧಿಯಲ್ಲಿ ಭಾರತ ಸರ್ಕಾರ ಒಂದು ಮಹಿಳಾ ಶಿಕ್ಷಣ ಕಮಿಟಿಯನ್ನೂ ಶ್ರೀಮತಿ ದುರ್ಗಾಬಾಯಿ ದೇಶ್ ಮುಖ್ ಅಡಿಯಲ್ಲಿ ನೇಮಿಸಿ ಬಾಲಕ-ಬಾಲಕಿಯರಲ್ಲಿರುವ ಶೈಕ್ಷಣಿಕ ಅಸಮಾನತೆಯನ್ನು ತೊಡೆದು ಹಾಕಲು ಪ್ರಯತ್ನಿಸಿತು. ಇದೇ ಸಮಯದಲ್ಲೇ ಒಂದು (Natural Council for Women's Educa-

tion(೧೯೫೯) ಸಹಾ ರಚಿತವಾಯಿತು. ಈ ಒಂದು ಸಮಿತಿಯಿಂದ ವಿವಿಧ ರಾಜ್ಯಗಳಲ್ಲಿ ಮಹಿಳಾ ಶಿಕ್ಷಣವನ್ನು ಮುಂದುವರೆಸಲು ವಿಶೇಷ ಕಾಳಜಿ ವಹಿಸಿದವು.

ಈ ಮೇಲಿನ ಎರಡೂ ಯೋಜನೆಗಳೂ ಮಹಿಳೆಯರನ್ನು ಅವರ ಒಂದು ಸಾಂಪ್ರದಾಯಿಕ ಪಾತ್ರವನ್ನು ಯಶಸ್ವಿಯಾಗಿ ನಿರ್ವಹಿಸುವ ಒಂದು ಪ್ರಯತ್ನವನ್ನು ಮಾಡಿತು. ಆದರೆ ಮಹಿಳೆಯರ ಕೆಲವು ದುರ್ಬಲತೆ (Disabilities) ಹಾಗೂ ಸಾಮಾಜಿಕ ಪಿಡುಗು(Prejudies)ಗಳನ್ನು ತೊಡೆದು ಹಾಕಲು ಯಾವ ಪ್ರಯತ್ನವನ್ನೂ ಮಾಡಲಿಲ್ಲ.

ಇದೇ ರೀತಿ ಮೂರನೆಯ ಯೋಜನೆ (೧೯೬೧-೬೬)ಯಲ್ಲಿಯೂ ಸಹ ಮಹಿಳೆಯರ ಸಂರಕ್ಷಣೆ(Welfare)ಗೆ ಹೆಚ್ಚು ಒತ್ತುಕೊಟ್ಟು, ಶಿಕ್ಷಣದ ಒಂದು ಸೌಲಭ್ಯವನ್ನು ಅಂಶಕ್ಕೆ ಸೀಮಿತವಾಗಿಟ್ಟದ್ದರಿಂದ ಬಾಲಕ-ಬಾಲಕಿಯರ ಶೈಕ್ಷಣಿಕ ಅಸಮಾನತೆ ಹೆಚ್ಚು ಪ್ರಬಲವಾಯಿತು. ಈ ಯೋಜನೆಯಡಿಯಲ್ಲಿ ಶಾಲೆಯ ಹೊರಗಡೆ ಇರುವ ಹೆಣ್ಣು ಮಕ್ಕಳು ಹಾಗೂ ಸ್ತ್ರೀಯರ ಶೈಕ್ಷಣಿಕ ಅವಶ್ಯತಕೆಯನ್ನು ಪೂರೈಸಲು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿತು. ಈ ಅವಧಿಯಲ್ಲಿ ಹಂಸ ಮೆಹತಾ ಕಮಿಟಿ(೧೯೬೨-೬೪) ಪ್ರಾಥಮಿಕ ಹಂತದಲ್ಲಿ ಸಹ ಶಾಲಾ ಶಿಕ್ಷಣವನ್ನು ಹೆಚ್ಚು ಪ್ರಬಲಗೊಳಿಸಲು ಪ್ರಯತ್ನ ಮಾಡಿತು. ಈ ಕಮಿಟಿಯು ಬಾಲಕರ ಶಾಲೆಯಲ್ಲೂ ಸಹ ಮಹಿಳಾ ಶಿಕ್ಷಕಿಯರ ನೇಮಕಾತಿ ಹಾಗೂ ಸಾಮಾನ್ಯ ಪಠ್ಯವಸ್ತು ಹಾಗೂ ಗೃಹ ವಿಜ್ಞಾನ ಶಿಕ್ಷಣ, ಬಾಲಕ-ಬಾಲಕಿಯರಿಗೂ ದೊರಕುವಂತೆ ಶಿಫಾರಸ್ಸು ಮಾಡಿತು. ಈ ಮಧ್ಯದಲ್ಲಿ ಕೊಠಾರಿ ಆಯೋಗವೂ(೧೯೬೪-೬೬) ಬಾಲಕಿಯರ ಶಿಕ್ಷಣಕ್ಕೆ ಹೆಚ್ಚು ಒತ್ತು ಕೊಟ್ಟು ಹಲವಾರು ರೀತಿಯ ಪೋಷಣೆಗಳನ್ನು ಮಾಡಿತು.

ನಂತರ ನಾಲ್ಕನೆಯ ಯೋಜನೆಯಲ್ಲಿ (೧೯೬೯-೭೪) ಮಹಿಳಾ ಶಿಕ್ಷಣಕ್ಕೆ ಒತ್ತು ಕೊಟ್ಟು ಶಿಕ್ಷಣ ಮಹಿಳೆಯರನ್ನು ದಕ್ಷ ತಾಯಿ ಪತ್ರವನ್ನು ನಿರ್ವಹಿಸಲು ನೆರವಾಗಬೇಕೆಂಬ ಅಂಶವನ್ನು ಪುನಃ ಸಮರ್ಥಿಸಿತು.

ಐದನೇ ಯೋಜನೆಯಲ್ಲಿ (೧೯೭೪-೭೯) ಸಂವಿಧಾನ ಬದ್ಧವಾದ ಉಚಿತ ಹಾಗೂ ಕಡ್ಡಾಯ ಶಿಕ್ಷಣಕ್ಕೆ ಮಹತ್ವವನ್ನು ನೀಡಿ, ಹೆಣ್ಣುಮಕ್ಕಳನ್ನು ಪ್ರಾಥಮಿಕ ಶಿಕ್ಷಣದ ಸಾರ್ವತ್ರಿಕರಣಕ್ಕೆ ಒಳಪಡಿಸಲು ಹಲವಾರು ವಿಶೇಷ ಪ್ರೊತ್ಸಾಹದಾಯಕ ಕಾರ್ಯಕ್ರಮಗಳನ್ನು ಜಾರಿಗೊಳಿಸಲಾಯಿತು. ಈ ಒಂದು ಅವಧಿಯಲ್ಲಿ ಭಾರತದ ಮಹಿಳೆಯರ ಸ್ಥಿತಿಗತಿಗಳನ್ನು ತಿಳಿಯಲು ರಚನೆಗೊಂಡ ಸಮಿತಿಯು ತನ್ನ ವರದಿಯನ್ನು ನೀಡಿತು(CSWI). ಈ ವರದಿ 'ಸಮಾನತೆಯ ಎಡೆಗೆ' ಎಂಬ ಹೆಸರಿನಲ್ಲಿ ಪ್ರಕಟಗೊಂಡಿತು. ಮಹಿಳಾ ಶಿಕ್ಷಣವನ್ನು ಉತ್ತಮ ಪಡಿಸಲು ಹಲವಾರು ಕಾರ್ಯಯೋಜನೆಗಳನ್ನು ಮಾಡಿತು. ಇದರಂತೆ ಹುಡುಗಿ ಯರಿಗೆ ಹಾಜರಾತಿ ಸ್ಕಾಲರ್ ಶಿಪ್, ಮಧ್ಯಾಹ್ನ ಉಪಹಾರ, ಉಚಿತ ಸಮವಸ್ತ್ರ ಮುಂತಾದ ಅನುಕೂಲತೆಗಳು ದೊರೆತು ಹೆಣ್ಣು ಮಕ್ಕಳ ಹಾಜರಾತಿಯನ್ನು ಶಾಲೆಗಳಲ್ಲಿ ಉತ್ತಮ ಪಡಿಸಿತು. ಈ ಕಮಿಟಿಯೂ ಸಹ ಸೆಕೆಂಡರಿ ಹಂತದವರೆಗೂ ಬಾಲಕ-

ಬಾಲಕಿಯರಿಗೆ ಸಾಮಾನ್ಯ ಪಠ್ಯವಸ್ತುವನ್ನು ನಿಯಮಿಸಿತು. ಮತ್ತು ಶಾಲೆಯಿಂದ ವಂಚಿತರಾದಂತಹ ಹೆಣ್ಣು ಮಕ್ಕಳಿಗೂ ವಿಶೇಷ ಶಿಕ್ಷಣ ಸೌಲಭ್ಯ ಕಲ್ಪಿಸಿಕೊಡಲು ಯೋಜನೆಗಳನ್ನು ಮಾಡಿತು.

ಆರನೆ ಯೋಜನೆ ಅಡಿಯಲ್ಲಿ (೧೯೮೦-೮೫) ಮುಖ್ಯವಾಗಿ ಹೆಣ್ಣು ಮಕ್ಕಳು ಪ್ರಾಥಮಿಕ ಶಾಲೆಗೆ ಹಾಜರಾಗಲು ಪ್ರೋತ್ಸಾಹಿಸಲು, ಪ್ರಾಥಮಿಕ ಶಾಲೆಗಳ ಪಕ್ಕದಲ್ಲೇ ಶಿಶು ಸಂರಕ್ಷಣಾ ಕೇಂದ್ರಗಳ (Early Childhood Education Centres)ನ್ನು ಸ್ಥಾಪಿಸಿ ಹೆಣ್ಣು ಮಕ್ಕಳು ತಮ್ಮ ಪುಟ್ಟ ತಮ್ಮ ತಂಗಿಯರನ್ನು ನೋಡಿಕೊಳ್ಳಲು ಹೊರೆಯಿಂದ ದೂರ ಮಾಡಲಾಯಿತು. ಈ ಯೋಜನೆಯಲ್ಲಿ ಹೆಚ್ಚು ಹೆಚ್ಚು ಹೆಣ್ಣು ಮಕ್ಕಳನ್ನು ಗ್ರಾಮಾಂತರ ಹಾಗೂ ಹಿಂದುಳಿದ ಪ್ರದೇಶದಿಂದ ಶಿಕ್ಷಣಕ್ಕೆ ಪ್ರೋತ್ಸಾಹಿಸಲು ಶಿಕ್ಷಣ ವ್ಯವಸ್ಥೆಯಲ್ಲೇ ಹಲವಾರು ಬದಲಾವಣೆ ಮತ್ತು ಪರಿವರ್ತನೆಗಳನ್ನು ಗುರುತಿಸಿ ಕಾರ್ಯಕ್ರಮವನ್ನು ಹಮ್ಮಿಕೊಂಡಿತು. ಮತ್ತು ಹೆಣ್ಣು ಮಕ್ಕಳ ಶಿಕ್ಷಣ ಉತ್ತಮಪಡಿಸಲು ಇಡೀ ಕುಟುಂಬವನ್ನೆ ಗುರಿಯಾಗಿಟ್ಟುಕೊಂಡು, ಯೋಜನೆಗಳನ್ನು ನಿರ್ಮಿಸಿತು.

ಏಳನೇ ಯೋಜನೆ ಬರುವಷ್ಟರಲ್ಲಿ (೧೯೮೫-೯೦) ಹೊಸ ರಾಷ್ಟ್ರೀಯ ಶಿಕ್ಷಣ ನೀತಿ (೧೯೮೬) ಜಾರಿಗೆ ಬಂದಿತ್ತು. ಇದರ ಪ್ರಕಾರ ಶಿಕ್ಷಣವನ್ನು ಮಹಿಳೆಯರ ಸ್ಥಾನಮಾನ ಬದಲಾಯಿಸಲು ಉಪಯೋಗಿಸಬೇಕೆಂಬ ಅಂಶ ಗಮನಕ್ಕೆ ತಂದಿತ್ತು. ಶಿಕ್ಷಣವು ಮಹಿಳಾ ಸಮಾನತೆಯನ್ನು ಸಾಧಿಸಲು ಪೂರಕವಾಗಬೇಕೆಂಬ ಅಂಶ ಮುಂದಿಟ್ಟಿತು. ಇದರಂತೆ ಶಿಕ್ಷಣದ ಮೂಲಕ ಪ್ರತಿಯೊಬ್ಬ ಮಹಿಳೆಯೂ ತನ್ನ ಸಾಮರ್ಥ್ಯ, ಆತ್ಮವಿಶ್ವಾಸವನ್ನು ಹೆಚ್ಚಿಸಿಕೊಂಡು ದೇಶದ ಅಭಿವೃದ್ಧಿಯಲ್ಲಿ ಪುರುಷನ ಸಮಾನ ತಾವೂ ಭಾಗಿಯಾಗಬೇಕೆಂಬ ಅಂಶವನ್ನು ಎತ್ತಿ ತೋರಿತು. ಈ ಹೊಸ ಶಿಕ್ಷಣ ನೀತಿಯ ಪ್ರಕಾರ, ಪಠ್ಯ ವಸ್ತುವಿನಲ್ಲಿ, ಶೈಕ್ಷಣಿಕ ವ್ಯವಸ್ಥೆಯಲ್ಲಿ ಹಲವಾರು ಬದಲಾವಣೆಗಳನ್ನು ತಂದಿತು. 'ಮಹಿಳಾ ಸಮಾಖ್ಯ' ದಂತಹ ಅಂಗದಿಂದ ಶಿಕ್ಷಣದ ಮೂಲಕ ಮಹಿಳೆಯ ಬಲವರ್ಧನೆ ಮತ್ತು ಲಿಂಗ ತಾರತಮ್ಯತೆಯನ್ನು ಹೋಗಲಾಡಿಸಲು ಉಪಾಧ್ಯಾಯರಿಗೆ ಹಾಗೂ ಆಡಳಿತಗಾರರಿಗೆ ವಿಶೇಷ ತರಬೇತಿ, ಪಠ್ಯ ವಸ್ತುವಿನಲ್ಲಿ ಬದಲಾವಣೆ ಹಾಗೂ ಲಿಂಗಬೇಧವನ್ನು ತೊಡೆದು ಹಾಕುವಂತಹ ವಿಶೇಷ ಯೋಜನೆಗಳನ್ನು ಜಾರಿಗೆ ತರಲಾಯಿತು. ಇದರ ಜೊತೆಗೆ ಭಾರತ ಸರ್ಕಾರ ಪ್ರಾಥಮಿಕ ಶಿಕ್ಷಣ ಗುಣಮಟ್ಟವನ್ನು ಹೆಚ್ಚಿಸಲು ವಿಶೇಷ ಯೋಜನೆಗಳನ್ನು ಅನುಷ್ಠಾನಕ್ಕೆ ತಂದು ಇದರಲ್ಲಿ 'ಲಿಂಗಾಧಾರಿತ ದೃಷ್ಟಿಕೋನ'ವನ್ನು ವಿಶೇಷವಾಗಿ ಅಳವಡಿಸಿತು. 'ಕಪ್ಪುಹಲಗೆ'ಯೋಜನೆ, 'ಕನಿಷ್ಠ ಕಲಿಕಾ ಸಾಮರ್ಥ್ಯ', 'ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ', 'ಸಾಕ್ಷರತೆಯ ಮಿಶನ್ ' ಇನ್ನು ಹಲವಾರು ಯೋಜನೆಗಳನ್ನು ಅನುಷ್ಠಾನಗೊಳಿಸುವಲ್ಲಿ ವಿಶೇಷವಾಗಿ 'ಲಿಂಗಾತಾರತಮ್ಯ ವಿವೇಚನೆಗೆ' ಅತಿ ಹೆಚ್ಚು ಮಹತ್ವ ಕೊಟ್ಟಿರುವುದು ವಿಶೇಷ ಸಂಗತಿ.

ಎಂಟನೇ ಯೋಜನೆ (೧೯೯೨-೯೭) ಅವಧಿಯಲ್ಲಿ 'ಜಿಲ್ಲಾ ಪ್ರಾಥಮಿಕ ಶಿಕ್ಷಣ ಯೋಜನೆ'ಗಳು ಶೈಕ್ಷಣಿಕವಾಗಿ ಹಿಂದುಳಿದ ಜಿಲ್ಲೆಗಳಲ್ಲಿ ಜಾರಿಗೆ ಬಂದವು. ಇಲ್ಲೂ ಸಹ 'ಜೆಂಡರ್ 'ಗೆ ವಿಶೇಷ ಒತ್ತು ಕೊಟ್ಟು ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣದ ಗುರಿ ಮುಟ್ಟಲು ಮುನ್ನಡೆಯಿಟ್ಟಿದೆ. ಈ ಯೋಜನೆಯಲ್ಲಿ ಮಧ್ಯಾಹ್ನ ಉಪಹಾರವನ್ನು ಸಹ ಮುಂದುವರೆಸಿ ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಪ್ರೋತ್ಸಾಹ ಕೊಟ್ಟಿದೆ.

ಇದೇ ರೀತಿ ಒಂಭತ್ತನೆ ಯೋಜನೆಯಡಿಯಲ್ಲೂ ಸಹ (೧೯೯೮-೨೦೦೫) ಪ್ರಾಥಮಿಕ ಶಿಕ್ಷಣಕ್ಕೆ ಮಹತ್ವವನ್ನು ಕೊಡಲಾಯಿತು. ವಯಸ್ಕರ ಶಿಕ್ಷಣಕ್ಕೆ ಹೆಚ್ಚು ಒತ್ತುಕೊಟ್ಟು. ಬಾಲಕಿಯರು, ಮಹಿಳೆಯರಿಗೆ ವಿಶೇಷವಾಗಿ ಪ್ರೋತ್ಸಾಹಿಸಿತು.

ನಮಗೆ ಇಲ್ಲಿ ತಿಳಿದು ಬರುವುದೇನೆಂದರೆ ಈ ಎಲ್ಲಾ ಯೋಜನೆಗಳಲ್ಲಿ ಬಾಲಕಿಯರ ಶಿಕ್ಷಣಕ್ಕೆ ವಿಶೇಷ ಒತ್ತು ಕೊಟ್ಟು, ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಅನುಷ್ಠಾನಕ್ಕೆ ತಂದಿದ್ದರೂ ಸಹ ಪುರುಷ ಮಹಿಳೆಯರ ನಡುವಿನ ಶೈಕ್ಷಣಿಕ ಅಸಮಾನತೆ ಕಡಿಮೆಯಾಗದೇ ಉಳಿದಿರುವುದು. ಈ ಮಧ್ಯೆ ೧೯೭೫ರ ಅಂತರ ರಾಷ್ಟ್ರೀಯ ಮಹಿಳಾ ವರ್ಷ, ಮಹಿಳಾ ಸಮಾನತೆ ಹಾಗೂ ಮಹಿಳಾ ಶಿಕ್ಷಣದ ಮೌಲ್ಯವನ್ನು ವಿಶೇಷವಾಗಿ ಪ್ರಚಾರ ಮಾಡಿದುದರ ಫಲವಾಗಿ, ಹೊಸ ರಾಷ್ಟ್ರೀಯ ಶಿಕ್ಷಣ ನೀತಿ ಸಹಾ ಇದರಿಂದ ಹೆಚ್ಚು ಪ್ರಭಾವಿತವಾಗಿ 'ಮಹಿಳೆಯರಿಗೆ ಶಿಕ್ಷಣದಲ್ಲಿ ಸಮಾನತೆ'ಎಂಬ ವಾದದಿಂದ 'ಮಹಿಳಾ ಸಮಾನತೆಗಾಗಿ ಶಿಕ್ಷಣ' ಎಂಬ ಹೊಸ ತತ್ವವನ್ನು ಪ್ರತಿಪಾದಿಸಿದೆ.

ಯೋಜನೆಗಳಿಂದ ಹೊರಬಂದ ವಿಶೇಷ ಕಾರ್ಯಕ್ರಮ ಮಹಿಳಾ ಶಿಕ್ಷಣದ ಉನ್ನತಿಗೆ ಕಾರಣವಾಗದೆ ಇರುವುದು ಏಕೆಂದರೆ, ನಮ್ಮಲ್ಲಿನ ಒಂದು ಪುರುಷ ಪ್ರಧಾನ ಸಮಾಜದಲ್ಲಿ, ಹೆಣ್ಣು ಮಕ್ಕಳು ಶಿಕ್ಷಣದ ಒಂದು ಸೌಲಭ್ಯವನ್ನು ಪಡೆಯಬೇಕಾದರೆ ಹಲವಾರು ರೀತಿಯ ಅಡಚಣೆಗಳನ್ನು ದಾಟಿಕೊಂಡು ಬರಬೇಕಾಗುತ್ತದೆ. ಈ ಅಡಚಣೆಗಳು ಸಮಾಜದಲ್ಲಿ ಹಾಸು ಹೊಕ್ಕಾಗಿ ಬೆಳೆದಿರುವುದಲ್ಲದೆ, ಸಮಾಜದ ಒಂದು ಮುಖ್ಯ ಅಂಗವಾದ ಶಿಕ್ಷಣ ಪದ್ಧತಿಯಲ್ಲೂ ಹಾಸು ಹೊಕ್ಕಾಗಿ ಬೆಳೆದು ನಿಂತಿದೆ. ಶಿಕ್ಷಣದ ಒಂದು ಇಡೀ ವ್ಯವಸ್ಥೆ, ಆಚರಣೆ, ರೂಢಿ, ಪಠ್ಯಕ್ರಮ ಎಲ್ಲದರಲ್ಲೂ ಮಹಿಳೆಯನ್ನು ಬದಿಗೆ ತಳ್ಳುವ ಪ್ರಸಂಗ ಹೆಚ್ಚು ಮತ್ತು ಮಹಿಳೆಯ ಒಂದು ಸಾಂಪ್ರದಾಯಿಕ ಪಾತ್ರವಾದ ಗೃಹಿಣಿ, ತಾಯ್ತನದ ಕೊಡುಗೆಯ ಬಗ್ಗೆ, ಇದರ ಜೊತೆಗೆ ಶಿಕ್ಷಕ ವರ್ಗ, ಆಡಳಿತವರ್ಗಗಳು ಒಂದು ಮನೋದಾರ್ಢ್ಯ ಹಾಗೂ ಧೋರಣೆಗಳು ಹೆಣ್ಣುಮಕ್ಕಳು ಶಿಕ್ಷಣದಲ್ಲಿ ಪಾಲುಗೊಳ್ಳಲು ಪ್ರತಿಕೂಲವಾಗಿರುತ್ತವೆ. ಇಂತಹ ಒಂದು ಸಾಮಾಜಿಕ ಪರಿಸ್ಥಿತಿಯಲ್ಲಿ ಯೋಜನೆಗಳನ್ನು ಮೂಡಿಸಿದಾಗ, ಹೆಚ್ಚು ಭಾಗ ಮಹಿಳೆಯರ ಸಾಂಪ್ರದಾಯಿಕ ಪಾತ್ರವಾದ ತಾಯಿ, ಮಗಳು, ಹೆಂಡತಿಯಂತಹ ಕರ್ತವ್ಯಗಳನ್ನು ನಿರ್ವಹಿಸಲು ಹೆಚ್ಚು ದಕ್ಷತೆಯನ್ನು ಪೂರೈಸುವಲ್ಲಿ ನೆರವಾಗುತ್ತದೆ. ಇದರಿಂದ ಹೆಚ್ಚು ಹೆಚ್ಚು ಕಾರ್ಯಕ್ರಮಗಳು ಮಹಿಳಾ ಕಲ್ಯಾಣಕ್ಕಾಗಿಯೇ ಮೀಸಲಾಗಿರುತ್ತವೆ. ಬದಲಾಗಿ ಮಹಿಳೆಯರ ಸಮಾನತೆಯನ್ನು ಹೆಚ್ಚಿಸಲು ಅನಾನುಕೂಲವಾಗಿರುತ್ತವೆ.

# ಕನ್ನಡ ಕಥಾ ಸಾಹಿತ್ಯದಲ್ಲಿ ಉದ್ಯೋಗಸ್ಥ ಮಹಿಳೆಯ ಪ್ರತಿನಿಧೀಕರಣ

*ಎಚ್. ಎಸ್. ಶ್ರೀಮತಿ*

ದಿನಕ್ಕೆ ಇಪ್ಪತ್ತೆಂಟು ತಾಸು ದುಡಿಯುತ್ತಿದ್ದರೂ 'ಗೃಹಿಣಿ'ಯನ್ನು 'ಏನೂ ಮಾಡಲ್ಲ, ಸುಮ್ಮನೆ ಮನೇಲಿದಾಳೆ' ಅಂತ ಹೇಳುವುದನ್ನು ಜೋಕಾಗಿ, ವಾಸ್ತವವಾಗಿ ನಾವೆಲ್ಲ ಕೇಳಿಯೇ ಇದ್ದೇವೆ. ಈ ಪ್ರಬಂಧವನ್ನು ಮಂಡಿಸುತ್ತಿರುವಾಗ ನಾನೂ ಕೂಡ 'ಉದ್ಯೋಗಸ್ಥೆ' ಎಂದರೆ, ಮನೆಯಿಂದ ಹೊರಗೆ ಹೋಗಿ ನಿರ್ದಿಷ್ಟ ತಾಸುಗಳವರೆಗೆ ಎಲ್ಲೋ, ಏನೋ ದುಡಿದು ಹಣವನ್ನು ಗಳಿಸಿ ಮನೆಗೆ ತರುವ ಹೆಣ್ಣು ಎಂಬ ಚೌಕಟ್ಟಿನಲ್ಲೇ ಮಾತನಾಡುತ್ತಿದ್ದೇನೆ. 'ಹೆಣ್ಣಿನ ದುಡಿಮೆ'ಯ ವ್ಯಾಖ್ಯಾನ, ಸ್ಥಿತಿಗತಿ ಇತ್ಯಾದಿಗಳನ್ನು ಕುರಿತು ಹೇಳಲು ಹೊರಟರೆ ಅರ್ಥಶಾಸ್ತ್ರದ ವ್ಯಾಪ್ತಿಯಲ್ಲಿ ಅದೊಂದು ಬೃಹತ್ ಅಧ್ಯಯನವಾಗುವಂಥದು. ಈ ಪ್ರಬಂಧದ ಮಟ್ಟಿಗೆ-ತುಂಬಾ ಸೀಮಿತ ಅರ್ಥದಲ್ಲಿ ಗ್ರಹಿಸಿರುವಂತೆ- ಉದ್ಯೋಗ್ಯಸ್ಥೆ ಎಂಬುದರ ವ್ಯಾಖ್ಯಾನಕ್ಕಾಗಿ ಮಾತ್ರ ಅರ್ಥಶಾಸ್ತ್ರದ ವ್ಯಾಪ್ತಿಯಲ್ಲಿ 'ದುಡಿಮೆ' ಎಂಬುದನ್ನು ನಿರ್ವಚಿಸುವ ಬಗೆಯನ್ನು ಸಂಕ್ಷಿಪ್ತವಾಗಿ ವಿವರಿಸಿಕೊಳ್ಳೋಣ. ದುಡಿಯುವುದು, ಕೆಲಸ ಮಾಡುವುದು ಒಂದೇ ಅಲ್ಲ. ಅರ್ಥಶಾಸ್ತ್ರದಲ್ಲಿ ಮಾರುಕಟ್ಟೆ ಪ್ರವೇಶಿಸುವ, ವಿನಿಮಯ ಗುಣವುಳ್ಳ ಚಟುವಟಿಕೆಗಳಿಗೆ ಮಾತ್ರವೇ ಆರ್ಥಿಕ ಮನ್ನಣೆ ಮತ್ತು ಮಾಪನದ ಗುಣವಿರುವುದು. ಇಂಥಾ ಕೆಲಸವನ್ನು ಎಂಟು ಗಂಟೆಗಳಷ್ಟು ಮಾಡಿದರೆ ಅದು ಒಂದು ದಿನದ 'ದುಡಿಮೆ' ಎನಿಸುತ್ತದೆ. ಈ ನಿರ್ವಚನದ ಅಡಿಗೆ ಬಾರದೆ ಹೋಗುವುದರಿಂದ ಗೃಹಿಣಿಯು ಮಾಡುವ ಎಂಥಾ ಅಗಾಧ ಪ್ರಮಾಣದ, ಪರಿಶ್ರಮದ ಕೆಲಸವೂ 'ದುಡಿಮೆ'ಎನಿಸುವುದಿಲ್ಲ. ಈ ಅರ್ಥಶಾಸ್ತ್ರವೇ ಲೆಕ್ಕ ಹಾಕುವ ಪ್ರಕಾರ ಶ್ರಮದ ದೃಷ್ಟಿಯಿಂದ ನೋಡಿದರೆ ಉದ್ಯೋಗಸ್ಥ ಮಹಿಳೆಯರು ನಿರಂತರವಾಗಿ ದಿನವೊಂದಕ್ಕೆ ಎರಡು ದುಡಿಮೆಯ ದಿನಗಳನ್ನು, ಪ್ರಾಸಂಗಿಕವಾಗಿ ಮೂರು ದುಡಿಮೆಯ ದಿನಗಳನ್ನು ದುಡಿಯುತ್ತಾರೆ. ಉದ್ಯೋಗದ ಕ್ಷೇತ್ರದಲ್ಲಿ ಒಂದು, ಮನೆ ವಾರ್ತೆಯಲ್ಲಿ ಒಂದು, ಬಸಿರು ಬಾಣಂತನ ತಾಯ್ತನಗಳಲ್ಲಿ ಹೆಚ್ಚುವರಿಯಾಗಿ ಇನ್ನೊಂದು-ಹೀಗೆ ಮೂರು ಮೂರು ಶಿಫ್ಟ್ ಗಳಲ್ಲಿ ದುಡಿದರೂ 'ಗಳಿಕೆ'ಯ ಪರಿಗಣನೆಗೆ ದಕ್ಕುವುದು ಉದ್ಯೋಗ ಕ್ಷೇತ್ರದ್ದು ಮಾತ್ರ. ಅದೂ ಅಸಮಾನವಾಗಿ.

ಈಗ ಹೀಗೆ ಉದ್ಯೋಗಸ್ಥೆಯಾಗಿರುವ ಹೆಣ್ಣಿನ ಅವಸ್ಥೆಗಳನ್ನು ಕುರಿತ ವಾಸ್ತವಗಳನ್ನೊಂದಿಷ್ಟು ಪರಿಶೀಲಿಸೋಣ. ಮಹಿಳೆಯರಿಗೆ ಉದ್ಯೋಗಾವಕಾಶಗಳು ದಕ್ಕಿದ್ದು ಹೇಗೆ ಎಂಬುದೇ ಒಂದು ದೊಡ್ಡ ಕತೆ. ಹೊರಗಿನ ಕಾರ್ಯಕ್ಷೇತ್ರ ವಿಸ್ತಾರಗೊಳ್ಳುತ್ತಾ ಹೋಗಿ ಪುರುಷರಿಗೆ ಹೆಚ್ಚುವರಿಯಾಗಿ ಕಂಡ, ಸಾಕಷ್ಟು ಬೋರು ಹೊಡೆಸುತ್ತಿದ್ದ ಕೆಲಸಗಳಿಗೆ ಪರ್ಯಾಯ ವ್ಯವಸ್ಥೆ ಅಗತ್ಯವೆನಿಸಿದಾಗ ಆ ಪರಿಚಾರಿಕೆಗಾಗಿ ಮನೆಯೊಳಗಿದ್ದ ಮಹಿಳೆಯನ್ನು ಹೊರಗೆ ಕರೆದು, ಅದನ್ನೇ ಅವಳಿಗೆ ನೀಡಿದ ಒಂದು ಅವಕಾಶವೆಂದು ನಂಬಿಸಲಾಯಿತು. ಏನೇ ಆಗಲಿ. ಇಕ್ಕಟ್ಟಾದ ಬಂಧನವೊಂದರಿಂದ ಅಷ್ಟಿಷ್ಟು ಕೈಕಾಲು ಆಡಿಸಲು ಸಾಧ್ಯವಾಗುಷ್ಟಕ್ಕೆ ಹೆಣ್ಣಿಗೆ ಅವಕಾಶವಂತೂ ದೊರೆಯಿತು. ಇದನ್ನೇ ವಿಮೋಚನೆ, ಬಿಡುಗಡೆ ಎಂದೆಲ್ಲಾ ಹೇಳಿ ಭ್ರಮಿಸಿದರೆ ಕಷ್ಟ. ಈವರೆಗೆ ಅಡಿಗೆಮನೆ, ಶಿಕ್ಷಣ ದೊರೆತ ಸ್ವಲ್ಪ ಆಧುನಿಕತೆಯಲ್ಲಿ ಡ್ರಾಯಿಂಗ್ ರೂಮು, ಇಷ್ಟರಲ್ಲಿದ್ದ ಹೆಣ್ಣುಲೋಕಕ್ಕೆ ಉದ್ಯೋಗವಾಕಾಶಗಳು ದೊರಕಿದಾಗಿನ ಸಂದರ್ಭ ಆಕೆಯ ಮೇಲೆ ಹೇರಿದ ಒತ್ತಾಯವೋ, ಆಕೆಗೆ ಒದಗಿದ ಆಯ್ಕೆಯ ಅವಕಾಶವೋ ಎಂಬುದೇ ಚರ್ಚಾರ್ಹ. ಹೆಣ್ಣಿಗೆ ಉದ್ಯೋಗದ ಅವಕಾಶಗಳು ತೆರೆದುಕೊಳ್ಳುತ್ತಿದ್ದ ಹೊಸದರಲ್ಲೇ ತ್ರಿವೇಣಿಯವರು ದುಡಿಮೆ ಮತ್ತು ಸಂಪಾದನೆಗಳಿಂದ ಕುಟುಂಬದ ಜವಾಬ್ದಾರಿಯನ್ನು ನಿರ್ವಹಿಸಿದ ಮಹಿಳೆಯರ ಹಲವು ಮಾದರಿಗಳನ್ನು ಪರೀಕ್ಷಿಸಿದ್ದಾರೆ. ಹೂವು-ಹಣ್ಣು ಕಾದಂಬರಿಯ ರಮ, ಮೊದಲಹೆಜ್ಜೆಯ ಸುಬ್ಬಿ, ಮುಕ್ತಿಯ ರಮ ಹೀಗೆ. ಇವರಲ್ಲಿ ಮುಕ್ತಿಯ ರಮಳದು ಆಯ್ಕೆಯಾದರೆ, ಇನ್ನಿಬ್ಬರಿಗೆ ಅದು ಜೀವನ ನಿರ್ವಹಣೆಯ ಅನಿವಾರ್ಯ ದಾರಿ. ವಿರಾಮದ ಏಕತಾನತೆಯನ್ನು ಒಡೆಯುವ ಪ್ರಯತ್ನವಾಗಿ 'ಬಾನು ಬೆಳಗಿತು' ಕಾದಂಬರಿಯ ಕಲ್ಯಾಣಿ ಟೀಚರಾಗುತ್ತಾಳೆ. ಇದು ಹವ್ಯಾಸಿ ದುಡಿಮೆ. ಶಿಕ್ಷಣದ ಸಂದರ್ಭವನ್ನೂ ಮೊದಮೊದಲಿಗೆ ಹೀಗೆಯೇ ಮಹಿಳೆಯ ಬಿಡುವಿನ ಸಮಯದ ಸದುಪಯೋಗ ಎಂದೇ ಪರಿಗಣಿಸಿದ್ದು. ಅವಳ ಉದ್ಯೋಗ ಕೂಡ ಮೋಜು, ಲಗ್ಜುರಿಗಳೆಂಬ ಪರಿಗಣನೆಯಲ್ಲೇ ಮೊದಮೊದಲು ಬಂದದ್ದು.

ಹೆಣ್ಣಿಗೆ ಉದ್ಯೋಗಾವಕಾಶಗಳು ತೆರೆದುಕೊಂಡ ದಿನಗಳಿಂದ ಮುಂದಿನ ಹಲವಾರು ದಶಕಗಳವರೆಗೂ ಕತೆ ಕಾದಂಬರಿಗಳನ್ನು ಬರೆಯುತ್ತಾ ವ್ಯಾಸರಾಯ ಬಲ್ಲಾಳರು ಉದ್ಯೋಗಸ್ಥ ಮಹಿಳೆಯ ಸಂದರ್ಭವನ್ನು ಹೆಚ್ಚಿನ ಆಯಾಮಗಳಲ್ಲಿ ಚರ್ಚಿಸಿದ್ದಾರೆ. ಜೀವನ ನಿರ್ವಹಣೆ, ಕುಟುಂಬಕ್ಕೆ ನೆರವು, ಸ್ವಾವಲಂಬನೆಯ ದಾರಿಗಳಾಗಿ ಉದ್ಯೋಗ ಹೆಣ್ಣಿಗೆ ಒದಗಿ ಬಂದದ್ದನ್ನು ಉತ್ತರಾಯಣ, ಬಂಡಾಯಗಳ, ರುಕ್ಮಿಣಿ, ಯಾಮಿನಿಯರು ಪ್ರತಿನಿಧಿಸಿದರೆ, ಅವರ ಹಲವು ಸಣ್ಣಕತೆಗಳಲ್ಲಿ ಉದ್ಯೋಗ ಕ್ಷೇತ್ರದ ಬವಣೆಗಳು, ಉದ್ಯೋಗ ತರುವ ಅವಿವಾಹಿತ ಸ್ಥಿತಿ, ಸಾಧನೆ ಸಮಾನತೆಯ ಪ್ರಶ್ನೆಗಳು ಬಂದಿವೆ.

ಮಹಿಳೆ ಹೊರಗೆ ದುಡಿಯಲು ಬಂದಾಗಲೂ ಅವಳ ಕೆಲಸಗಳಲ್ಲೇನೂ ಹೊಸತನ ಬರಲಿಲ್ಲ. ಮನೆಯೊಳಗಿದ್ದ ಅವೇ ಏಕತಾನದ, ಸೇವೆಯ ಕೆಲಸಗಳನ್ನೇ ಇಲ್ಲೂ ಮಾಡಬೇಕಾಯಿತು. 'ಗಳಿಕೆ'ಯ ಮಾತೂ ಅಷ್ಟೇ. ಅಸಮಾನತೆ, ಅನನುಕೂಲ ಪರಿಸ್ಥಿತಿಗಳು.

'ಗಳಿಸಿ' ತಂದದ್ದನ್ನು ಮನೆಯ ಯಜಮಾನನಿಗೊಪ್ಪಿಸಿ, ಅಡಿಗೆ ಮನೆ ಸೇರಿ ಅಲ್ಲಿನ ಕೆಲಸಕ್ಕೆ ತೊಡಗಿದ್ದಷ್ಟೇ ಬಂತು. ಹೊರಗೂ ಒಳಗೂ ತಲೆಕೊಡುವ ದುಸ್ಥಿತಿ.

ಈ ಶತಮಾನದ ಆರಂಭಕ್ಕೆ ಮಹಿಳೆಯ ಪಾಲಿಗೆ ತೆರೆದುಕೊಳ್ಳತೊಡಗಿದ ಶಿಕ್ಷಣಾವಕಾಶ, ನಂತರದಲ್ಲಿ ದಕ್ಕ ತೊಡಗಿದ ಉದ್ಯೋಗಾವಾಕಾಶಗಳು ಮಹಿಳೆಗೆ ಬಿಡುಗಡೆಯನ್ನೊದಗಿಸಿ ಅವಳನ್ನು ಭವಿಷ್ಯದ ಬದಲಾವಣೆಗಳ ನಿಯೋಗಿಯನ್ನಾಗಿ ರೂಪಿಸುತ್ತವೆ ಎಂದೇ ನಂಬಿಸಲಾಗುತ್ತಿದೆ. ಆದರೆ ಶಿಕ್ಷಿತ-ಉದ್ಯೋಗಿ ಮಹಿಳೆಯರ ಸ್ಥಾನಮಾನಗಳನ್ನು ಕುರಿತಂತೆ ನಡೆದ ಅಧ್ಯಯನಗಳು ಮಾತ್ರ ಶಿಕ್ಷಣ-ಉದ್ಯೋಗ-ಸಾಮಾಜಿಕ ಸ್ಥಾನಮಾನಗಳ ನಡುವೆ ನೇರ ಸಂಬಂಧವಿರುವುದನ್ನೇನೂ ದೃಢಪಡಿಸುವುದಿಲ್ಲ.

'ಗಳಿಕೆ'ಯ ಸಾಧ್ಯತೆಗಳಿರುವ ದುಡಿಮೆಗಳನ್ನಷ್ಟೇ ಪರಿಗಣಿಸಿದರೆ ಶಿಕ್ಷಣದ ಸಾಧ್ಯತೆಯಿಲ್ಲದ ಸಮಾಜದ ಕೆಳವರ್ಗದ ಮಹಿಳೆಯರು ಮನೆಕೆಲಸ, ಕೂಲಿನಾಲಿಗಳಂತಹ ಅಸಂಘಟಿತ ವಲಯಗಳಲ್ಲಿದ್ದಾರೆ. ಸಂಘಟಿತರಾಗಲು ಅವಕಾಶಗಳಿರುವ ಸರ್ಕಾರಿ, ಅರೆ ಸರ್ಕಾರಿ ಕಛೇರಿಗಳಲ್ಲಿ ಹಾಗೂ ಇನ್ನಿತರ ಸಂಘ, ಸಂಸ್ಥೆ, ಕಾರ್ಖಾನೆಗಳಲ್ಲಿ ಮಧ್ಯಮ ವರ್ಗದ ಶಿಕ್ಷಿತ ಮಹಿಳೆಯರಿದ್ದಾರೆ. ಬಂಡವಾಳ ಹೂಡಲು ಸಮರ್ಥರಾದ ಮೇಲುವರ್ಗದವರು ಉದ್ದಿಮೆಗಳಲ್ಲಿರಬಹುದು. ಈ ಯಾವ ಮಾರ್ಗದಲ್ಲೂ ಪ್ರವೇಶ ಪಡೆಯಲಾರದ ಕೆಲವು ಸಂಕೀರ್ಣ ಸಂದರ್ಭಗಳಲ್ಲಿ ಮಹಿಳೆಯರು 'ಗಳಿಕೆ'ಯ ಬಂಡವಾಳವಾಗಿ ತಮ್ಮ ದೇಹಗಳನ್ನೇ ಬಳಸಿ ವೇಶ್ಯೆಯರಾಗುತ್ತಾರೆ. ಈ ನಾಲ್ಕು ಬಗೆಯ ದುಡಿಮೆಗಳಲ್ಲಿ ಪ್ರವೇಶ ಪಡೆದು ಗಳಿಸಲು ತೊಡಗುವ ಮಹಿಳೆಯರು ಆಯಾಯಾ ಸ್ತರಗಳಲ್ಲಿ ಎದುರಿಸುವ ಅನೇಕ ಸಮಸ್ಯೆಗಳಿವೆ. ಇದರ ಒಂದೊಂದು ಎಳೆಯೂ ಬಿಡಿಸಲಾಗದಷ್ಟು ಸಿಕ್ಕುಗಟ್ಟಿ ಹೋಗಿದೆ. ಈ ಗೋಜಲಿನಲ್ಲಿ ಸಿಲುಕಿದ ಮಹಿಳೆಗೆ ಸ್ವತಃ ತನ್ನ ಬದುಕಿನಲ್ಲಿ ಈ ದುಡಿಮೆ ತಂದಿರುವ ಸ್ಥಿತ್ಯಂತರಗಳನ್ನು ಗ್ರಹಿಸಲು ಪುರುಸೊತ್ತೇ ದೊರೆತಿಲ್ಲ.

ಇಷ್ಟೊಂದು ಸಂಕೀರ್ಣವಾದ ಉದ್ಯೋಗಸ್ಥ ಹೆಣ್ಣಿನ ಬದುಕು ಸಾಹಿತ್ಯಕ್ಕೆ ವಸ್ತುವಾಗಿ ಒದಗಿ ಬರುವ ಸಾಧ್ಯತೆಗಳು ಊಹಾತೀತವೆನಿಸಬೇಕಿತ್ತು. ನಮ್ಮ ಅಸಂಖ್ಯ ಕತೆ, ಕಾದಂಬರಿಗಳಲ್ಲಿ ಮೇಲಿನ ಎಲ್ಲ ಸ್ತರಗಳಲ್ಲಿನ ಉದ್ಯೋಗಿ ಹೆಣ್ಣುಗಳನ್ನು ಹೇರಳವಾಗಿ ಚಿತ್ರಿಸಲಾಗಿದೆ ಎಂಬುದೇನೋ ನಿಜ. ಆದರೆ ಚಿತ್ರಣದ ಮಾದರಿ ಮಾತ್ರ ಸೀಮಿತ ಚೌಕಟ್ಟಿನಲ್ಲೇ, ಪುರುಷ ಚಿಂತನೆಯ ಪರವಾಗಿ ಮಾತ್ರ ನಿಲ್ಲುವಂಥದಾಗಿದೆ. ಹೆಣ್ಣು ಸಾಮಾಜಿಕವಾಗಿ ಈವರೆಗೆ ನಿಭಾಯಿಸುತ್ತಾ ಬಂದ ಹೊಣೆಗಾರಿಕೆಗಳಲ್ಲಿ ಹೆಣ್ಣಿನ ಉದ್ಯೋಗ ತರುವ ಪಲ್ಲಟಗಳೇನು ಎಂಬುದೇ ಇದರ ಮುಖ್ಯ ಚಿಂತೆ ಎನಿಸಿಬಿಟ್ಟಿದೆ. ಅವಳ ಬದುಕಿನ ಕತೆ ಇಲ್ಲಿ ಅಮುಖ್ಯವೆನಿಸುತ್ತದೆ. ಹೆಣ್ಣಿನ ಬಾಳು ಈವರೆಗೆ ಬಾಲ್ಯ, ವಿವಾಹ, ಗಂಡ, ಮಕ್ಕಳು, ಕುಟುಂಬದ ಸಂಬಂಧಗಳು- ಈ ಕೇಂದ್ರಗಳಲ್ಲೇ ಗಿರಕಿ ಹೊಡೆಯುತ್ತಿದ್ದು, ಈಗಿನ ಶಿಕ್ಷಣ ಉದ್ಯೋಗಾವಕಾಶಗಳಲ್ಲೂ ಈ ಕೇಂದ್ರದಿಂದ

ಹೊರಬರುವಂತಿಲ್ಲ. ಗಂಡಿನ ಬದುಕು ಬಾಲ್ಯ, ಶಿಕ್ಷಣ, ತಾರುಣ್ಯ, ಉದ್ಯೋಗ, ಸಂಪಾದನೆ, ಸಾಧನೆ-ಹೀಗೆ ಅವನ ಬೆಳವಣಿಗೆಯ ಹಂತಗಳು. ಹೆಣ್ಣಿನ ಬದುಕು ಅವನ ಈ ಬೆಳವಣಿಗೆಯ ಸಂತೋಷಕ್ಕೆ ನೆರವಾಗುವ ಒಂದು ಪರಿಕರ ಮಾತ್ರ. ಅವಳು ಉದ್ಯೋಗಸ್ಥಳಾದರೂ ಅವನ ಬಳಕೆಗೆ ಸಿಗದೆ ತಪ್ಪಿಸಿಕೊಳ್ಳಬಾರದು ಎಂಬುದೇ ನಮ್ಮ ಸಮಾಜದ ನಿರೀಕ್ಷೆ, ಒತ್ತಾಯ. ಆದ್ದರಿಂದಲೇ ಮಹಿಳೆಯ ಉದ್ಯೋಗವನ್ನು ವಿವಾಹ, ಕುಟುಂಬ, ಸಂಸಾರ, ತಾಯ್ತನ, ನೈತಿಕತೆ, ಆರ್ಥಿಕತೆ-ಇವುಗಳೊಂದಿಗೆ ಇಟ್ಟು ನೋಡಲಾಗುತ್ತದೆಯೇ ಹೊರತು, ಮಹಿಳೆಯ ಸ್ಥಾನಮಾನ, ಅವಳ ಸಂತೋಷ, ವ್ಯಕ್ತಿತ್ವ, ಸ್ವಂತಿಕೆ, ಆತ್ಮಬಲ, ಸ್ವಾವಲಂಬನೆ, ಸಾಧನೆ ಎಂಬ ನೆಲೆಗಳಲ್ಲಿ ನೋಡುವುದಿಲ್ಲ. ಈ ಚಿಂತನೆ ನಮ್ಮ ಪುರುಷರ ಸಾಹಿತ್ಯದಲ್ಲಿ ಮಾತ್ರವೇ ಅಲ್ಲದೆ ಮಹಿಳೆಯರ ಸಾಹಿತ್ಯದಲ್ಲೂ ಪುಷ್ಟಿ ಪಡೆದು ಬಿಡುತ್ತದೆ.

ಅನುಪಮಾ ನಿರಂಜನರ 'ಮಗು' ಕತೆಯಲ್ಲಿ ನಾಯಕಿ ಸುನಂದೆ 'ಮಕ್ಕಳನ್ನು ಹೊರುವುದು, ಹೆರುವುದು ಅಡಿಗೆ ಮಾಡುವುದು ಇವಿಷ್ಟೇ ತನ್ನ ಹೊಣೆಯಂತೂ ಅಲ್ಲ. ತಾನು ಎಲ್ಲರಿಗಿಂತ ಬೇರೆ, ತನ್ನ ಸಾಧನೆಗೆ ಗೌರಿ ಶಂಕರವೇ ಎಲ್ಲೆ' ಎನ್ನುವ ಸ್ವಂತಿಕೆಯವಳು. ಮದುವೆ, ಮಗು ಎಂದಾದ ಮೇಲೂ ಓದಿನಲ್ಲಿ ತೊಡಗಿ ಮಗುವನ್ನು ತನ್ನ ತಾಯಿಯ ಆರೈಕೆಯಲ್ಲಿ ಬಿಡುತ್ತಾಳೆ. ಏನೋ ಸಂದರ್ಭವಾಗಿ ಮಗು ಸತ್ತು ಹೋಗುತ್ತದೆ. ಈ ದುರಂತಕ್ಕೂ ಸುನಂದೆಯ ಓದಿಗೂ ಲೇಖಕಿ ಗಂಟುಹಾಕಿ ಅವಳನ್ನು ಪಾಪಪ್ರಜ್ಞೆಗೆ ಸಿಲುಕಿಸುತ್ತಾರೆ. ಆದರೆ ಇದೇ ಲೇಖಕಿ ಮುಂದಿನ ದಶಕಗಳಲ್ಲಿ ಬರೆದ 'ಆಳ'ಕಾದಂಬರಿಯಲ್ಲಿ ನಾಯಕಿ ಡಾ.ಮಾಲಿನಿಗೆ ಹೆಚ್ಚಿನ ಆತ್ಮಸ್ಥೈರ್ಯವನ್ನು ತುಂಬಿದ್ದಾರೆ. ಹೆಣ್ಣನ್ನು ಅನಾದಿ ಕಾಲದಿಂದಲೂ ತನ್ನ ಇಚ್ಛೆಗೆ, ಅನುಕೂಲಕ್ಕೆ ತಕ್ಕಂತೆ ಪರಿಗಣಿಸುತ್ತಾ, ಬಳಸುತ್ತಾ ಬಂದ ಗಂಡಿನ ವರ್ತನೆಗೆ ಸ್ವಾಭಿಮಾನದ ಪ್ರತಿಕ್ರಿಯೆಯನ್ನು ತೋರುವ ಹೆಣ್ಣಾಗಿ 'ಮಾಧವಿ'ಯನ್ನು ಸೃಷ್ಟಿಸಿದ್ದಾರೆ. ಇವರಿಬ್ಬರೂ ದುಡಿದು, ಗಳಿಸಿಯೂ ಅಪಮಾನಕ್ಕೆ ತುತ್ತಾದ ಹೆಣ್ಣಿನ ಮಾದರಿಗಳು. ಈ ಮಾದರಿಗಳು ಸಾಮಾಜಿಕ ವಾಸ್ತವಗಳೆನಿಸಲು ಹೆಣ್ಣು ನಡೆಯಬೇಕಾದ ದಾರಿ ಇನ್ನೂ ದೂರವೇ ಇದೆ. ಸಾಹಿತ್ಯದಲ್ಲಿ ಆಶಯದ ರೂಪದಲ್ಲಾದರೂ ಜೀವ ತಳೆಯಬಹುದು. ಈ ಮೂಲಕ ಹೆಣ್ಣಿಗೆ ಮಾನಸಿಕ ಒತ್ತಾಸೆಯನ್ನೊದಗಿಸಬಹುದು.

ಈ ಪರಿಸ್ಥಿತಿಯ ವಾಸ್ತವ ಚಿತ್ರಣವನ್ನು ತ್ರಿವೇಣಿಯವರು ತಮ್ಮ ಅಪಸ್ವರ, ಅಪಜಯಗಳಲ್ಲಿ ಕೊಟ್ಟಿದ್ದಾರೆ. ಉದ್ಯೋಗ, ಶಿಕ್ಷಣಗಳು ಹೆಣ್ಣಿನ ಸಾಧನೆಯ ಅಂಶಗಳೆನಿಸುವ ಬದಲು ಸಮಾಜವು ಅವಳಿಂದ ನಿರೀಕ್ಷಿಸುವ ಕುಟುಂಬ ನಿರ್ವಹಣೆಯ ಕರ್ತವ್ಯಗಳಿಗೆ ಪೈಪೋಟಿಗಳಾಗಿ ಪರಿಗಣಿತವಾಗುತ್ತವೆ. ಈ ತಾಕಲಾಟದಲ್ಲಿ ಸಿಲುಕಿದ ಮೀರಾ ಶ್ಯಾಮನಂತಹ ಪ್ರೀತಿಯ ಗಂಡನನ್ನು ಪಡೆದು ಸಾಧನೆಗೆ ತೊಡಗಿದರೂ ಮತ್ತೆ ಪಾಪಪ್ರಜ್ಞೆಗೆ ಸಿಲುಕುತ್ತಾಳೆ. ಅವಳ ಆಸೆ ಆಕಾಂಕ್ಷೆಗಳೆಲ್ಲವೂ ಅಪಸ್ವರಗಳೆನಿಸಿ, ಸಾಧನೆಯ ಎಲ್ಲ ಪ್ರಯತ್ನಗಳೂ ಅಪಜಯಗಳಾಗಿ ಕೊನೆಗೊಳ್ಳುತ್ತವೆ.

ಉದ್ಯೋಗ, ಗಳಿಕೆಗಳಿಂದಾಗಿ ಹೆಣ್ಣಿಗೆ ಸಮಾನತೆಯ ಅವಕಾಶಗಳು ದಕ್ಕುವುದು ಸಾಮಾಜಿಕ ವಾಸ್ತವವಲ್ಲ. ಶಿಕ್ಷಣ, ಉದ್ಯೋಗಗಳಲ್ಲಿ ಸಾಮರ್ಥ್ಯ ತೋರುತ್ತಾ, ಅಲ್ಲಿನ ಸಾಧನೆಯ ತೃಪ್ತಿ ಕಾಣಲು ಬಯಸುವ ಹೆಣ್ಣು ನಮ್ಮ ಕತೆ ಕಾದಂಬರಿಗಳಲ್ಲಿ ಮನೆ, ಗಂಡ, ಮಕ್ಕಳು ಎಂಬ ನೆಮ್ಮದಿಯನ್ನು ಕಳೆದುಕೊಳ್ಳುತ್ತಾಳೆ. ಅವಿವಾಹಿತಳಾಗಿ ಉಳಿದು ಬಿಡುತ್ತಾಳೆ. ಮನೆ ಅಸ್ತವ್ಯಸ್ತವಾಗುತ್ತದೆ, ಮಕ್ಕಳು ಆರೈಕೆ ಇಲ್ಲದೆ ರೋಗ, ಸಾವುಗಳಿಗೆ ಈಡಾಗುತ್ತಾರೆ, ಇಲ್ಲವೇ ದಾರಿ ತಪ್ಪುತ್ತಾರೆ. ಗಂಡನ ಲೈಂಗಿಕಾಸಕ್ತಿಯನ್ನು ಪೂರೈಸಲಾರದ ಈ ಹೆಣ್ಣಿನಿಂದ ಗಂಡ ದೂರವಾಗಿ ಬೇರೊಂದು ಹೆಣ್ಣಿನತ್ತ ಹೋಗಿ ಬಿಡುತ್ತಾನೆ.....ಇತ್ಯಾದಿ, ಇತ್ಯಾದಿ. ಮಹಿಳೆಯ ಆಧುನಿಕತೆ, ಪ್ರಗತಿಗಳನ್ನು ಹಾಗೆಲ್ಲಾ ಯೋಚಿಸುವ ಚಿಂತನೆಗಳನ್ನು ಗೇಲಿ ಮಾಡುವ ಇಂಥಾ ಸ್ತ್ರೀ ಚಿತ್ರಣಗಳಿಗಾಗಿ ಹುಡುಕಬೇಕಾದ್ದೇ ಇಲ್ಲ. ಗಂಡಿನ ಸೌಖ್ಯವನ್ನು ಕೇಂದ್ರವಾಗಿಟ್ಟುಕೊಂಡ ಈ ಪುರುಷ ಚಿಂತನೆಗಳನ್ನು ವಸ್ತುವಾಗಿಸಿಕೊಂಡ ಕತೆ ಕಾದಂಬರಿಗಳಿಗೆ ಲೆಕ್ಕವಿಲ್ಲ. ಇದರಷ್ಟು ಜನಪ್ರಿಯವಾದ ವಸ್ತು ನಮ್ಮ ಕತೆಗಾರರಿಗೆ ಯಾವುದೂ ಒದಗಿಲ್ಲ. ಹೆಣ್ಣು ಹೊರಗೆ ದುಡಿಯಲು ಹೊರಟರೆ ಕುಟುಂಬ ನಿರ್ವಹಣೆಯಲ್ಲಿ ವ್ಯತ್ಯಯಗಳಾಗುವುದು ನಿಜ. ಆದರೆ ಇಲ್ಲಿ ಹೆಣ್ಣೇ ಅದರ ಎಲ್ಲ ಹೊಣೆಯನ್ನೂ ಹೊತ್ತು ಅಪರಾಧಿಯಾಗುತ್ತಾಳೆ. ಕುಟುಂಬ ಅಸ್ತವ್ಯಸ್ತವಾದರೆ ಗಂಡು ನೆಮ್ಮದಿಯನ್ನು ಹುಡುಕುತ್ತಾ ಹೊರಗೆ ಹೊರಟು ಹೋಗುತ್ತಾನೆ. ಕುಟುಂಬವನ್ನು ಸಾವರಿಸಿಬೇಕೆಂಬ ಕರ್ತವ್ಯದಲ್ಲಿ ಬೀಳಬೇಕಾದ ಅಗತ್ಯವೇನೂ ಅವನಿಗಿಲ್ಲ. ಈ ಚಿಂತನೆಯ ಪ್ರಕಾರ ಕುಟುಂಬ ನೆಟ್ಟಗಿರಬೇಕೆಂದರೆ ಹೆಣ್ಣು ತನಗಾಗಿ, ತಾನಾಗಿ ಏನೂ ಮಾಡಬಾರದು. ಹೆಣ್ಣಿನ 'ಸೌಖ್ಯ' ಇರುವುದೇ ಗಂಡ, ಮಕ್ಕಳು, ಮನೆಗಳನ್ನು ಚೆನ್ನಾಗಿಟ್ಟುಕೊಳ್ಳುವುದರಲ್ಲಿ.

ಮನೆಯ ಆರ್ಥಿಕತೆಯನ್ನು ನಿಭಾಯಿಸುವುದು ಗಂಡಿನ ಕರ್ತವ್ಯ ಎಂಬ ನಿಯಮವಿದ್ದರೂ, ಅದು ಅವನ ಮೇಲೆ ಒತ್ತಡವನ್ನೇನೂ ಹಾಕುವುದಿಲ್ಲ. ಅವನು ತನಗೆ ಬೇಕೆನಿಸಿದರೆ ಈ ನಿಯಮವನ್ನು ಉಲ್ಲಂಘಿಸುತ್ತಾನೆ. ಆದರೂ ಮನೆಯ ಯಜಮಾನನೇ ಆಗಿರುತ್ತಾನೆ. ಪಾಲನೆ, ಸಂಗೋಪನೆಯ ಹೊಣೆಹೊತ್ತ ಹೆಂಗಸು ಅದನ್ನು ನಿಭಾಯಿಸಲು ಈಗ ಈ ಹೆಚ್ಚುವರಿ ಹೊಣೆಯನ್ನೂ ಹೊರುತ್ತಾಳೆ. ನಮ್ಮ ಕತೆ ಕಾದಂಬರಿಗಳಲ್ಲಿ ಉದ್ಯೋಗಕ್ಕೆ ಹೋಗುವ ಬಹುತೇಕ ಮಹಿಳೆಯರು ಈ ಹೆಚ್ಚುವರಿ ಹೊಣೆಗೆ ತಲೆಕೊಟ್ಟವರೇ ಆಗಿದ್ದಾರೆ. ಊರು ಮನೆ ಬಿಟ್ಟು ಓಡಿಹೋದ ಗಂಡಸರ ಪಾಲಿನ ಕರ್ತವ್ಯ ನಿರ್ವಹಣೆಯಲ್ಲೇ ಜೀವ ಸವೆಸಿದ ಕಾರಂತರ ಕಾದಂಬರಿಗಳ ಹೆಂಗಸರು ಕುಟುಂಬ ನಿರ್ವಹಣೆಗೆ ಊರಲ್ಲೇ ದೊರೆತ ಸಣ್ಣಪುಟ್ಟ ಗಳಿಕೆಯ ಪರಿಶ್ರಮಗಳಲ್ಲಿ ನಿಂತವರು. ಭೈರಪ್ಪನವರ 'ಗೃಹಭಂಗ'ದ ನಂಜಮ್ಮ ಛಲತೊಟ್ಟು ಶಾನುಭೋಗಿಕೆಯ ಕೆಲಸವನ್ನಷ್ಟೂ ಮಾಡಿ ಗಂಡನನ್ನೂ, ಮಕ್ಕಳನ್ನೂ ಕಾಪಾಡುತ್ತಾಳೆ. ಈ ಶ್ರಮ ಅವಳ ಸಾಧನೆಯ ಆಯ್ಕೆಯಲ್ಲ. ಒದಗಿದ ಅನಿವಾರ್ಯ. ಉಳಿವಿನ ಪ್ರಶ್ನೆ. ಗಂಡ ಚೆನ್ನಿಗರಾಯನ ಹೆಸರಿನಲ್ಲಿ ಅವಳು ದುಡಿಯಬೇಕೇ ಹೊರತು ಅವಳೇನೂ ಶ್ಯಾನುಭೋಗಳೆನಿಸುವುದಿಲ್ಲ. ತ್ರಿವೇಣಿಯವರ ಸಮಕಾಲೀನರಾದ

ಕಾತ್ಯಾಯಿನಿಯವರು ತಮ್ಮ ಕತೆ 'ಸಾವಿತ್ರಿ'ಯಲ್ಲಿ ಇಂಥಾ ಚೆನ್ನಿಗರಾಯನಂಥಾ ಬೇಜವಾಬ್ದಾರಿಯ ಗಂಡನನ್ನು ಕಟ್ಟಿಕೊಂಡು, ಸಂಸಾರವನ್ನು ತೂಗಿಸಲು ಹೆಣಗಿದ ಹೆಣ್ಣಿನ ಚಿತ್ರಣವನ್ನು ನೀಡಿದ್ದಾರೆ. ಇಲ್ಲಿ ನಂಜಮ್ಮ, ಸಾವಿತ್ರಿಯರ ಹೋರಾಟಗಳು ಉಳಿವಿನ ಪ್ರಶ್ನೆಗಳೆಂಬಂತೆ ಬಂದಿದ್ದರೂ ಒಂದಿಷ್ಟು ಶಿಕ್ಷಣ, ಉದ್ಯೋಗ, ವಿವೇಚನೆಗಳ ನೆರವು ದೊರಕಿದರೆ ಹೆಣ್ಣು ಆರ್ಥಿಕವಾಗಿ ಸ್ವಾವಲಂಬಿಯಾಗಿ ಗಳಿಸುವ ಆತ್ಮವಿಶ್ವಾಸಕ್ಕೆ ಹೆಚ್ಚಿನ ಒತ್ತು ಇದೆ.

ಹೆಣ್ಣಿಗೆ ಆರ್ಥಿಕ ಸ್ವಾವಲಂಬನೆ ದೊರೆತರೆ ಕುಟುಂಬಕ್ಕೆ ಎಂಥದೋ ದುರಂತ ಬಡಿಯುತ್ತದೆ ಎಂಬಂತೆ ಪುರುಷ ಚಿಂತನೆ ರೇಗುತ್ತಿದ್ದರೂ, ಹೆಣ್ಣು ಗಳಿಸಿ ತಂದ ಹಣ ತನ್ನ ಕೈ ಸೇರುವುದಾದರೆ ಅವಳ ನೌಕರಿಯ ಬಗ್ಗೆ ವಿರೋಧವೇನೂ ಇರದು. ಬದಲಿಗೆ ಅಂಥಾ ಗಳಿಕೆಗೆ ಅವಳನ್ನು ತಳ್ಳುವ ಕುತಂತ್ರಗಳು ಬೇಕಾದಷ್ಟು ಹುಟ್ಟಿಕೊಳ್ಳುತ್ತವೆ. ಗಳಿಸುತ್ತಿರುವ ಮಗಳಿಗೆ ಮದುವೆ ಮಾಡಿ ಬಿಟ್ಟರೆ ನಷ್ಟವಾದೀತೆಂದು ತಂದೆ ತಾಯಿಯರೇ ಅವಳನ್ನು ಅವಿವಾಹಿತ ಸ್ಥಿತಿಗೇ ಕಟ್ಟಿಹಾಕಿ ಬಿಡಬಹುದು. ವೈದೇಹಿಯವರ 'ಸೌಗಂಧಿಯ ಸ್ವಗತಗಳು' ಈ ಮುಖವನ್ನು ತೆರೆದಿಡುವ ಕತೆ. ಜೊತೆಗೆ ಅವಳ ಶೀಲಕ್ಕೆ ಕಾವಲುಗಾರರಾಗಿ ಅಪ್ಪ ಅಮ್ಮಂದಿರಷ್ಟೇ ಏಕೆ ಮನೆ ಮಾಲೀಕಳಾದ ಅಜ್ಜಿಯೂ ನಡುಕಟ್ಟಿ ನಿಂತಿದ್ದಾಳೆ. ಕೌಮಾರ್ಯದ ಭಾರವನ್ನು ಹೊರಲಾಗದಿದ್ದರೂ ಸೌಗಂಧಿ ಕಂಡಲ್ಲಿ ಅದನ್ನು ಚೆಲ್ಲುವಷ್ಟು ಸ್ವತಂತ್ರಳಲ್ಲ. ಆದರೂ ಒಳಗೊಳಗೇ ಇದನ್ನು ಯಾರಾದರೂ ಕದ್ದು, ಲೂಟಿ ಮಾಡ ಬಾರದೇ ಎಂಬ ಆಸೆ, ನಿರೀಕ್ಷೆಗಳಲ್ಲಿ ಬೇಯುತ್ತಾಳೆ. ದುಡಿದು ಗಳಿಸಿ ಅಪ್ಪನಿಗೆ ಒಪ್ಪಿಸುವುದೊಂದೇ ದಾರಿ ಅವಳಿಗೆ ಉಳಿಯುತ್ತದೆ.

ನಮ್ಮ ಬಹುತೇಕ ಮನೆಗಳಲ್ಲಿ ಹೆಣ್ಣು ಮಕ್ಕಳು ಶಿಕ್ಷಣ, ಉದ್ಯೋಗಗಳಲ್ಲಿ ಪ್ರವೇಶಿಸಲು ಮನೆಯ ಗಂಡಸರ ಒಪ್ಪಿಗೆಗಾಗಿ ಕಾಯಬೇಕು. ಈಚಿನ ಕೆಲವು ದಶಕಗಳಲ್ಲಿ ಈ ಒಪ್ಪಿಗೆ ಬಲು ಸುಲಭವಾಗಿ, ಸಹಜವಾಗಿ ದೊರೆಯುತ್ತಿರುವಂತಿದೆ. ಇದರರ್ಥ ಹೆಣ್ಣಿಗೆ ಸ್ವಾತಂತ್ರ್ಯ, ಸ್ವಾವಲಂಬನೆ, ಬಿಡುಗಡೆಗಳನ್ನು ಈ ಸಮಾಜ ಉದಾರವಾಗಿ ಕೊಟ್ಟು ಬಿಡುತ್ತಿದೆ ಎಂದೇನಲ್ಲ. ಈ ಒಪ್ಪಿಗೆಯ ಕಣ್ಣು ಮನೆಗೆ ಹೆಚ್ಚುವರಿಯಾಗಿ ಬರುವ ಆದಾಯದ ಮೇಲಷ್ಟೇ ಇರುವುದು. ಉಳಿದಂತೆ ಗಳಿಸಿದ ಹಣದ ಮೇಲೆ ಯಾವ ಅಧಿಕಾರವೂ ಸಾಧ್ಯವಾಗದಿರುವ ನಿರ್ಬಂಧಗಳು ಮಾತ್ರವಲ್ಲ, ಮನೆ ಗಂಡ ಮಕ್ಕಳ ಕರ್ತವ್ಯದಲ್ಲಿ ಒಂದಿಷ್ಟೂ ಲೋಪತರಬಾರದೆಂಬ ನಿಯಾಮಾವಳಿಗಳ ಸಂಕೋಲೆಗಳನ್ನೂ ಈ ಒಪ್ಪಿಗೆ ಮುಚ್ಚಳಿಕೆಯಾಗಿ ಪಡೆದಿರುತ್ತದೆ. ಹೆಣ್ಣನ್ನು ದುಡಿಯಲು ಒತ್ತಾಯವಾಗಿ ದೂಡಿದಾಗಲೂ ಈ ಸಂಕೋಲೆಗಳು ಇದ್ದೇ ಇರುತ್ತವೆ. ಉದ್ಯೋಗ ಕ್ಷೇತ್ರವೇನೂ ಹೆಣ್ಣಿನ ಈ ಸಂದರ್ಭವನ್ನು ವಿಶೇಷ ಅನುಕಂಪದಿಂದ ನೋಡುವುದಿಲ್ಲ. ಅದೂ ಕೂಡ ಅವಳನ್ನು ಶೋಷಿಸುವ ದಾರಿಗಳನ್ನೇ ಸೃಷ್ಟಿಸುತ್ತಿರುತ್ತದೆ. ದಿನನಿತ್ಯ ಎರಡೆರಡು ದುಡಿಮೆ ದಿನಗಳನ್ನು ನಿರ್ವಹಿಸಬೇಕಾದ ಹೆಣ್ಣಿನ ಈ ಸಂದರ್ಭವನ್ನು ಕುರಿತ ಚಿಂತನೆ ತುಂಬಾ ಮಹತ್ವದ್ದೂ, ಆಸಕ್ತಿದಾಯಕವಾದ್ದೂ ಆಗಬೇಕು. ಆದರೆ ನಮ್ಮ ಚಿಂತನೆಗಳು ಪುರುಷ ಕೇಂದ್ರದಿಂದ

ಹೊರಟು ಕುಟುಂಬದ ಕ್ಷೇಮವನ್ನು ಚಿಂತಿಸುವ ಏಕಪಕ್ಷೀಯ ಗುಣವನ್ನೇ ಹೊಂದಿವೆ. ಮಹಿಳೆಯ ಪರವಾಗಿ ನಿಲ್ಲುವ ಅಗತ್ಯ ಅವುಗಳಿಗೆ ಕಂಡಂತಿಲ್ಲ.

ವೈದೇಹಿಯವರ 'ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು' ಆರ್ಥಿಕವಾಗಿ ಕಂಗೆಟ್ಟವರು. ಹೆಣ್ಣು ಮತ್ತು ಶೀಲವನ್ನು ಕುರಿತಂತೆ ಇರುವ ಸಾಮಾಜಿಕ ನಿರೀಕ್ಷೆಗಳನ್ನು ದಾಟಬಲ್ಲ ಸಾಮರ್ಥ್ಯವಿಲ್ಲದ ದುರ್ಬಲರು. ಕಲಾವತಿಯದು ಪುಟಿಯುವ ಚೈತನ್ಯ. ಆದರೆ ಬಳೆ, ಟೇಪುಗಳಂತಹ ಸಣ್ಣ ಆಸೆಗಳಿಂದಲೂ ವಂಚಿತಳಾಗಬೇಕಾದ ಬಡತನದಲ್ಲಿ ಎಂಥದಾರೂ ಸರಿ ಒಂದು ನೌಕರಿ ಸಿಕ್ಕರೆ ಎಂದು ಕನಸು ಕಾಣುತ್ತಾ ಕೊನೆಗೊಮ್ಮೆ ಹೊಲಿಗೆ ಕಲಿತು 'ರೆಡಿಮೇಡ್ ಅಂಗಿ ಹೊಲಿಯುಕೆ ಹೋತೆ' ಎಂದ ಹೊರಟರೆ ಅಜ್ಜಿಗೆ ಎಂಥದೋ ಭಯ. 'ತುದಿ ಕಡೆಗಾಲಕ್ಕೆ ಇದೊಂದು ಹಗಲುವೇಷ ಬೇಡ ಮಾರಾಯ್ತಿ. ಇಷ್ಟರವರೆಗೆ ಮರ್ಯಾದೆ ಒಂದಾದರೂ ಇತ್ತು. ಇನ್ನು ಅದೂ ಇಲ್ಲ ಅಂತಾಗುದು ಬೇಡ' ಎಂದಳು. ಹೆಣ್ಣು ದುಡಿದಾದರೂ ಜೀವ ಹಿಡಿದೇನು ಎನ್ನುವುದಕ್ಕೂ ಈ ಸಮಾಜ ಸುಮ್ಮನೆ ಒಪ್ಪಿಗೆ ನೀಡಲಾರದು. ಕಲಾವತಿಯೋ 'ಅಯ್ಯೋ ನನ್ನ ಮರ್ಯಾದೆಯನ್ನಾರೂ ಯಾರಾದರೂ ಅಪ್ಪಂಥವು ತೆಗೆಯುಕಾಗದಾ?' ಎನ್ನುವಂತಾಗಿದ್ದಳು.

ಹೆಣ್ಣಿನಿಂದ ಸೇವೆ, ತ್ಯಾಗ, ಕರುಣೆ, ಪ್ರೀತಿಗಳನ್ನೇ ಪಡೆಯುತ್ತಾ ಬಂದ ಸಮಾಜ ಹೆಣ್ಣಿಗೆ ಸ್ವಾಭಿಮಾನ ಇರುವ ಸಾಧ್ಯತೆಯನ್ನು ನಿರಾಕರಿಸುತ್ತದೆ. ಬಹುಮಟ್ಟಿಗೆ ಅವಳು ಸ್ವಾಭಿಮಾನವನ್ನು ತೋರುವ ಸಂದರ್ಭಗಳನ್ನೆಲ್ಲಾ ಅಹಂಕಾರವೆಂದು ವ್ಯಾಖ್ಯಾನಿಸಲಾಗುತ್ತದೆ. ತುಳಸಿ ವೇಣುಗೋಪಾಲ್ ಅವರ 'ತಪ್ತರು' ಸ್ವಾಭಿಮಾನವನ್ನು ಕಾಯ್ದುಕೊಳ್ಳಲು ಗಂಡನ ಅಶ್ರಯದಿಂದ ಹೊರಬಂದ ಹೆಣ್ಣಿನ ಕತೆ. ಹೆಣ್ಣು ತನ್ನ ಸ್ವಾಭಿಮಾನವನ್ನು ಕಾಯ್ದುಕೊಳ್ಳುವಲ್ಲಿ ಅಡ್ಡಿಯಾಗುವ ಮುಖ್ಯಸಂಗತಿ ಆರ್ಥಿಕ ಅವಲಂಬನೆ. ಉದ್ಯೋಗಸ್ಥಳಾಗಿ ಆರ್ಥಿಕವಾಗಿ ಸ್ವತಂತ್ರಳಾಗಿರುವ ಹೆಣ್ಣು ಸ್ವಾಭಿಮಾನಕ್ಕೆ ಧಕ್ಕೆಯೊದಗಿದಾಗ ಯಾವುದಾದರೂ ತೀರ್ಮಾನಕ್ಕೆ ಬರಲು ಧೈರ್ಯದಿಂದ ಯೋಚಿಸುವುದು ಸಾಧ್ಯ. ಈ ಶತಮಾನದ ಮೊದಮೊದಲ ದಶಕಗಳ ಕತೆಗಳಲ್ಲಿ ಹೆಣ್ಣುಗಳು ತಮ್ಮ ಸ್ವಾಭಿಮಾನಕ್ಕೆ ಸಹಿಸಲಾಗದ ಪೆಟ್ಟು ಬಿದ್ದರೆ ಆತ್ಮಹತ್ಯೆ ಮಾಡಿಕೊಂಡು ಬಿಡುತ್ತಿದ್ದರು. ಅಥವಾ ಜೀವಂತ ಹೆಣಗಳಾಗಿ ತ್ರಿವೇಣಿಯವರ 'ಕೀಲುಗೊಂಬೆ'ಯ ಸೀತೆಯರಾಗುತ್ತಿದ್ದರು. ಬಿಡುಗಡೆಯೇ ಬೇಕು ಎಂದರೆ ಸಮಾಜ ಸೇವೆ, ದೇಶ ಸೇವೆ ಎಂಬ ನೆಪಗಳಲ್ಲಿ ಪಲಾಯನವಾದಿಗಳಾಗುತ್ತಿದ್ದರು. ಈಗ ದಿನಗಳು ಬದಲಾಗುತ್ತಿವೆ. ಉದ್ಯೋಗಸ್ಥರಾಗಿ ಆರ್ಥಿಕವಾಗಿ ಸ್ವಾವಲಂಬನೆಯ ಬೆಂಬಲ ಸಾಧ್ಯವಾಗುತ್ತಿರುವಾಗ ತ್ರಿವೇಣಿಯವರೇ ಸೃಷ್ಟಿಸಿದ ಇನ್ನೊಬ್ಬ ನಾಯಕಿಯಂತೆ 'ಕೊನೆಯ ನಿರ್ಧಾರ'ಗಳನ್ನು ತೆಗೆದುಕೊಳ್ಳಲು ಅವರೀಗ ಸಮರ್ಥರಾಗುತ್ತಿದ್ದಾರೆ.

ಮಹಿಳೆಯರ ಸ್ಥಿತಿಗತಿಗಳು ಆಶಾದಾಯಕವಾಗುತ್ತಿವೆ ಎನ್ನುತ್ತಿರುವಾಗಲೇ, ಹೆಣ್ಣಿನ ಲೋಕವನ್ನು ಹೆಚ್ಚು ಸ್ಪಷ್ಟವಾಗಿ ತೆರೆದಿಟ್ಟ ದಿಟ್ಟೆ ಎಂದೇ ಪ್ರಸಿದ್ಧರಾದ ವೀಣಾ ಶಾಂತೇಶ್ವರ ಅವರ 'ಶೋಷಣೆ, ಬಂಡಾಯ, ಇತ್ಯಾದಿ.....' ಕಿರು ಕಾದಂಬರಿ ಮಾತ್ರ ಹೆಣ್ಣು ಏನೆಲ್ಲಾ

ಸಾಧಿಸಿದರೂ ಈ ಸಮಾಜದ ದಿಗ್ಬಂಧನಗಳಾಚೆಗೆ ನಡೆಯಲಾರದ ದುರ್ಬಲಳಾಗಿಯೇ ಉಳಿಯುತ್ತಾಳೆ ಎಂಬ ನೇತ್ಯಾತ್ಮಕ ತೀರ್ಮಾನವನ್ನು ಹೇಳುವಾಗ ಸ್ವಲ್ಪ ದಿಗಲೇ ಆಗುತ್ತದೆ. ಇಡೀ ಕಾದಂಬರಿಯ ಸಾರಾಂಶವೆಂಬಂತೆ ಕೊನೆಯ ಪುಟವಿದೆ. 'ಎಲ್ಲಾ ನನ್ನ ದೈವ'ವೆಂದು ಕ್ಷೀಣವಾಗಿ ಹೇಳಿ ಅರೆಗಣ್ಣು ಮುಚ್ಚಿ ಮಲಗಿದ್ದ ಪೂರ್ಣಿಮಾ ಸಿಂಗ್; ಗಂಡನ ಪೋಸ್ಟ್ ಕಾರ್ಡ್ ಬಂತೆಂದು ಎಲ್ಲ ಮರೆತು ಬೀಗುತ್ತಾ ತಿರುಗಿ ಬಂದ ರೋಶನ್ ಬಿ; ಪ್ರಮೋಶನ್ ಪಡೆದು ಲಗ್ನವಾಗಲಿರುವ ಖುಷಿಯಲ್ಲಿ ಬರಲಿರುವ ವಿಪತ್ತಿನ ಅರಿವಿಲ್ಲದ ಲೀಲಾ ಕುಲಕರ್ಣಿ; ಶೋಷಣೆಯ ವಿರುದ್ಧ ಬಂಡಾಯ ಹೂಡಬೇಕೆಂದು ಲೆಕ್ಚರ್ ಕೊಡುತ್ತಾ ತಿರುಗುವ ಮಾಲಿನಿ ಬಾಯಿ ಪಟೇಲ ಮತ್ತು ಹಾಸಿಗೆ ಹಿಡಿದ ಆಕೆಯ ಅಂಗವಿಕಲ ಗಂಡ; ನಗು ನಗುತ್ತಲಿದ್ದ ಅಪ್ಟೆ ದಂಪತಿಗಳು; ದಿನವೂ ತಾನೂ ನೋಡುವ ನೂರಾರು ಪೇಶೆಂಟುಗಳು; ತನ್ನೊಂದಿಗೆ ಇಡಿಯ ಮದ್ಯಾಹ್ನ ಸಂಜೆ ಕಳೆದು ರಾತ್ರಿ ಹೆಂಡತಿಯ ಹೆದರಿಕೆಗಾಗಿ ಬೇಗ ಮನೆ ಸೇರಲು ಓಡುವ ಸಹೋದ್ಯೋಗಿ ಡಾಕ್ಟರುಗಳು; ಹಾಗೂ ಇವರೆಲ್ಲರ ಆಚೆ ಧೈರ್ಯವಾಗಿ ಎಲ್ಲ ಧಿಕ್ಕರಿಸಿ ದೂರ ಹೋಗಿ ಕೆಲವಾರು ತಿಂಗಳಲ್ಲೇ ತಾನು ಧಿಕ್ಕರಿಸಿ ಹೋಗಿದ್ದ ಬದುಕನ್ನೇ ಅಪ್ಪಿಕೊಳ್ಳಲು ಸ್ವ ಇಚ್ಛೆಯಿಂದ ವಾಪಸ್ಸು ಬಂದಿದ್ದ ಕಮಲಾ......ಇನ್ನೂ ಆಚೆ....ಯಾರದು? ಡಾ.ಸತೀಶ ಪಾಂಡೆ......ಬೀಳುವ ಮೊದಲೇ ಏನನ್ನಾದರೂ ಆಧರಿಸಿ ಹಿಡಿಯಬೇಕೆಂದು ಆಕೆ ಧಾವಿಸಿ ಮುಂದೆ ಬಂದಳು. 'ಸತೀಶ, ನಿನ್ನ ಪ್ರಪೋಜಲ್ ಒಪ್ಪಿದೆ. ನಡೆ, ನಾವು ಲಗ್ನ ಆಗೋಣ'....ಎಲ್ಲ ಭಾರ ಇಳಿದಂತೆ ಅವಳು ದೀರ್ಘವಾಗಿ ನಿಟ್ಟುಸಿರು ಬಿಟ್ಟಳು. ಸತೀಶ ಅವಳನ್ನು ಕೈಯಿಂದ ಬಳಸಿ, 'ಈಗ ಮೊದಲು ಹಾಸ್ಪಿಟಲಿಗೆ ಹೋಗೋಣ....ರಜಾ ಹಾಕು.....ಊಟಕ್ಕೆ ಹೋಗೋಣ' ಇತ್ಯಾದಿ ಹೇಳುತ್ತಿರುವಾಗ ಎಂದಿನಂತೆ' ಏನಂತೀ ಶಶಿ? ಅಂತ ತನ್ನ ಅಭಿಪ್ರಾಯ ಕೇಳಲಿಲ್ಲವೆಂಬುದು ಶಶಿಯ ಗಮನಕ್ಕೆ ಬರಲಿಲ್ಲ. ಅವನ ಮಾತಿನಲ್ಲಿ ಅನುನಯ, ಅರ್ಜವತೆ ಮಾಯವಾಗಿ ಅಧಿಕಾರದ ಸೆಳಕು ಮಿಂಚಿದ್ದನ್ನು ಗಮನಿಸದೆ ಅವನ ಹಿಂದೆ ಹಿಂದೆ ಆಕೆ ನಡೆದಳು.

ವೀಣಾ ಅವರ ಈ ಗ್ರಹಿಕೆಯನ್ನು ಹೆಣ್ಣು ತನ್ನನ್ನು ತಾನೇ ನೋಡಿಕೊಳ್ಳುವ ದೃಷ್ಟಿಕೋನ ಎಂದು ಒಪ್ಪಿದರೆ, ಶಿಕ್ಷಣ ಉದ್ಯೋಗವಾಕಾಶಗಳು ನಿಜಕ್ಕೂ ಹೆಣ್ಣಿನ ಬಿಡುಗಡೆಯ ಹಾದಿಗಳಾಗಲಾರವೇ ಎಂದು ಸಂಶಯಪಡಬೇಕಾಗುತ್ತದೆ. ಕೊನೆಗೂ ಈವರೆಗೆ ಇತರರು - ಮುಖ್ಯವಾಗಿ ಪುರುಷ ಚಿಂತನೆಯ ಈ ಸಮಾಜ - ಹೆಣ್ಣನ್ನು ಕುರಿತು ನೀಡಿದ ನಿರ್ವಚನ, ನಿರ್ದೇಶನಗಳ ದೃಷ್ಟಿಕೋನವೇ ಹೆಣ್ಣಿನ ಬದುಕು ಹೌದೇ ಎಂಬ ನಿರಾಸೆ ಎದುರಾಗುತ್ತದೆ. ಶೋಷಣೆಯೇ ಶಾಶ್ವತ, ಬಂಡಾಯ ಕೇವಲ ಭ್ರಮೆ ಎಂಬಂತಾಗುತ್ತದೆ.

ಆದರೆ ಉದ್ಯೋಗ ಹೆಣ್ಣಿಗೆ ಹೊರ ಜಗತ್ತಿನಲ್ಲಿ ಬೆರೆಯುವ, ಅನುಭವಗಳಿಸುವ ಅವಕಾಶಗಳನ್ನು ಕಲ್ಪಿಸುತ್ತಿದೆ. ಆರ್ಥಿಕ ಸ್ವಾವಲಂಬನೆಯ ದಾರಿಯನ್ನು ತೆರೆಯುತ್ತಾ ಆತ್ಮ

ವಿಶ್ವಾಸವನ್ನು ಕುದುರಿಸುತ್ತಿದೆ. ಈವರೆಗೂ ಅವಳೆದುರು ದೊಡ್ಡ ಸಮಸ್ಯೆಯಾಗಿ ಕಾಡುತ್ತಲೇ ಬಂದಿರುವ ಪುರುಷಾವಲಂಬನೆಯೆದುರು ಹಲವು ಪ್ರಶ್ನೆಗಳನ್ನು ಕೇಳಲು, ಎದುರಿಸಲು ಸ್ಥೈರ್ಯವನ್ನೊದಗಿಸುತ್ತಿದೆ. ಹಾಗೆಂದು ಇದಿಷ್ಟರಿಂದಲೇ ವಿಮೋಚನೆ ಬಿಡುಗಡೆಗಳು ಒದಗಿ ಬಿಡುತ್ತವೆಂದೇನೂ ಸದ್ಯಕ್ಕೆ ಭ್ರಮಿಸುವಂತಿಲ್ಲ. ಹಿಂದಿನ ಎಲ್ಲ ಸಮಸ್ಯೆಗಳೂ ವಿವಿಧ ರೂಪವೇಷಗಳನ್ನು ಧರಿಸಿ, ಕೆಲವೊಮ್ಮೆ ಇನ್ನಷ್ಟು ಆಕ್ರಮಣಕಾರಿಯಾಗಿ ಅವಳನ್ನು ಆವರಿಸುತ್ತಿವೆ ಎಂಬುದೂ ನಿಜವೇ. ಆದರೆ ಅವಳಿಗೆ ಉದ್ಯೋಗಾವಕಾಶ ಮಾನಸಿಕ ಹಾಗೂ ನೈತಿಕ ಬೆಂಬಲಗಳನ್ನೊದಗಿಸುತ್ತಿದೆ ಎಂಬುದೂ ಅವಳ ಪಾಲಿನ ಆಶಾ ಕಿರಣ. ಹೆಣ್ಣು ಉದ್ಯೋಗಸ್ಥಳಾದ್ದರಿಂದ ತನಗೆ ದಕ್ಕುತ್ತಿದ್ದ ಅವಳ ಸೇವೆಗಳು ಕಡಿಮೆ ಬಿದ್ದ ಬಗ್ಗೆ ಪುರುಷ ಸಮಾಜ ಕ್ಯಾತೆ ಜಗಳ ತೆಗೆಯ ಹತ್ತಿದೆ. ಸಾಹಿತ್ಯವೂ ಈ ಆತಂಕವನ್ನು ದಾಖಲುಗೊಳಿಸುವುದರಲ್ಲೇ ಆಸಕ್ತವಾದಂತಿದೆ. ಉದ್ಯೋಗ ಮತ್ತು ಹೆಣ್ಣಿನ ಸಂಬಂಧಗಳನ್ನು ಅವಳ ಕಡೆಯಿಂದ ಯೋಚಿಸುವುದು ಯಾರಿಗೂ ಬೇಡವಾದ ಸಂಗತಿಯೇ. ಒಂದು ವೇಳೆ 'ಸ್ತ್ರೀಪರ'ವಾಗಿ ಸಾಹಿತ್ಯ ಈ ದಿಸೆಯಲ್ಲಿ ಹೊರಟರೂ ಸದ್ಯಕ್ಕೆ ಆಶಯಗಳ ರೂಪದಲ್ಲಷ್ಟೇ ಈ ಚಿಂತನೆಯನ್ನು ಮಂಡಿಸಬೇಕಷ್ಟೇ. ಸದ್ಯದ ವಾಸ್ತವವೆಂದರೆ ಹೆಣ್ಣಿನ ಬಾಳು ಈವರೆಗೆ ಬಾಲ್ಯ, ವಿವಾಹ, ಗಂಡ, ಮಕ್ಕಳು, ಕುಟುಂಬ ಎಂಬ ಈ ಕೇಂದ್ರಗಳಲ್ಲಿ ಸಿಲುಕಿ ಗಿರಿಕಿ ಹೊಡೆಯುತ್ತಿದೆಯಾದರೆ, ಹೊಸದಾಗಿ ಆಕೆಗೆ ದಕ್ಕುತ್ತಿರುವ ಶಿಕ್ಷಣ ಉದ್ಯೋಗಾವಕಾಶಗಳೂ ಈ ಕೇಂದ್ರವನ್ನು ಪಕ್ಕಕ್ಕೆ ಸರಿಸಿ ತನ್ನ ಬದುಕಿಗೆ ತಾನು ಕೇಂದ್ರವಾಗಬೇಕೆಂಬ ಸಾಮರ್ಥ್ಯವನ್ನು ಅವಳಿಗೆ ಒದಗಿಸಿಲ್ಲ. ಒದಗಿಸೀತು ಎಂಬ ಆಸೆಗೆ ಅವಕಾಶಗಳಂತೂ ಇದೆ.

ಹಾಗಾಗಿಯೇ ಉದ್ಯೋಗ ಕ್ಷೇತ್ರದಲ್ಲಿ ಮಹಿಳೆಯು ಪ್ರವೇಶಿಸಿ ದಶಕಗಳೇ ಕಳೆದಿದ್ದರೂ, ಸಹಜವಾಗಿಯೇ ಅಲ್ಲಿ ಅವಳಿಗೆ ಪುರುಷನಿಗೆ ದಕ್ಕುವಂಥವೇ ಅನುಭವಗಳು, ಸಾಧನೆಗಳು, ತುಮುಲಗಳು, ಸಿಕ್ಕುಗಳು ಎದುರಾಗುತ್ತಿದ್ದರೂ ಸಮಾಜಕ್ಕಾಗಲೀ, ಸಾಹಿತ್ಯಕ್ಕಾಗಲೀ ಅವುಗಳನ್ನು ದಾಖಲಿಸುವುದು ಅಷ್ಟೊಂದು ಮುಖ್ಯವಾಗುತ್ತಿಲ್ಲ. ಬದಲಿಗೆ ಕುಟುಂಬ ವ್ಯವಸ್ಥೆಗೆ - ಮುಖ್ಯವಾಗಿ ಪುರುಷನ ಸುಖ ಜೀವನಕ್ಕೆ-ಯಾವ ರೀತಿಯಲ್ಲಿ ತೊಡಕುಂಟಾಗುತ್ತಿದೆ ಎಂಬ ಪ್ರಶ್ನೆಯೇ ಮುಖ್ಯವಾಗಿ, ಇಂತಹ ತೊಡಕನ್ನುಂಟು ಮಾಡಲು ಹೊರಟಿರುವ ಹೆಣ್ಣನ್ನು ಯಾವ ರೀತಿಯಲ್ಲಿ ಮತ್ತೆ ಮನೆಗೆ ಕಟ್ಟಿಹಾಕಬೇಕು ಎಂಬ ಬಗ್ಗೆ ಬೇಕಾದಷ್ಟು ಹುನ್ನಾರಗಳು ನಡೆದಿವೆ. ಇದಕ್ಕೆ ಬಗ್ಗದೆ ಅವಳು ತಲೆ ಎತ್ತಿದರೆ ಹೇಗೆ ತರಾಟೆಗೆ ತೆಗೆದುಕೊಳ್ಳಲಾಗುವುದು ಎಂಬ ಬಗ್ಗೆ ಸೂಚನೆ, ಬೆದರಿಕೆ, ದಿಗ್ಬಂಧನ ಮೊದಲಾದ ಸಂದೇಶಗಳನ್ನು ಸಮಾಜ ಹಲವು ಮಾಧ್ಯಮಗಳ ಮೂಲಕ ಅವಳಿಗೆ ರವಾನಿಸುತ್ತಿದೆ. ಅಂತಹ ಒಂದು ಪ್ರಮುಖ ಮಾಧ್ಯಮವಾಗಿ ಸಾಹಿತ್ಯವೂ ದುಡಿಯುತ್ತಿದೆ.

# ಕಾನೂನು ಮತ್ತು ಮಹಿಳೆ

ಮಹಿಳೆಯರ ಬದುಕನ್ನು ಕೇಂದ್ರವಾಗಿಸಿಕೊಂಡು ನಡೆಯುತ್ತಿರುವ ಅಧ್ಯಯನಗಳು, ಚಿಂತನೆಗಳು, ಚಳುವಳಿಗಳು, ಹೋರಾಟಗಳು ಸಾಕಷ್ಟು ಪ್ರಖರವಾಗಿ, ಪರಿಣಾಮಕಾರಿಯಾಗಿಯೇ ಇವೆ ಎಂಬ ವಿಶ್ವಾಸ ಒಂದು ಕಡೆ ಬಲಗೊಳ್ಳುತ್ತಿದೆಯಾದರೆ, ಇಂಥಾ ಉಪಕ್ರಮಕ್ಕೆ ಎದುರು ನಿಲ್ಲುವ ಸವಾಲುಗಳ ಸ್ವರೂಪ ಆತಂಕವನ್ನು ಹೆಚ್ಚಿಸುವುದೂ ಇದೆ. ಇದು ನಿರಂತರ ಹೋರಾಟದ ಹಾದಿಯಾಗಿಯೇ ಉಳಿದುಬಿಡುತ್ತದೆ ಎಂದಾಗಲೂ ಈ ಹಾದಿಯಲ್ಲೇ ನಾವು ಸಾಗುತ್ತಲೇ ಹೋಗಬೇಕು. ನಮ್ಮ ಉಳಿವಿನ ಪ್ರಶ್ನೆ ಇದು. ನಿರಾಶವಾದದ ಮಾತಲ್ಲ. ನಾವು ಮಹಿಳೆಯರು ಸಬಲೀಕರಣಗೊಳ್ಳುವಲ್ಲಿ ಇರುವ ತೊಡಕುಗಳನ್ನು ಕುರಿತು ಇನ್ನಷ್ಟು ಸೂಕ್ಷ್ಮಗಳಲ್ಲಿ ವಿವೇಚಿಸಬೇಕು. ಅಂಥಾ ಒಂದು ಮುಖ್ಯ ಕ್ಷೇತ್ರ ಕಾನೂನಿಗೆ ಸಂಬಂಧಿಸಿದ್ದು. ಮಹಿಳೆಯರು ತಮ್ಮ ಹಕ್ಕುಗಳನ್ನು ಕುರಿತು ಸಾಧ್ಯವಾದಷ್ಟು ವಿವರಗಳಲ್ಲಿ ಅರಿತುಕೊಳ್ಳಲು ಪ್ರಯತ್ನಿಸಬೇಕು. ವಿದ್ಯಾವಂತ ಮಹಿಳೆಯರು ಓದು ಬರಹ ಬಾರದ ಮಹಿಳೆಯರಿಗೆ ಅಗತ್ಯದ ಸಮಯಗಳಲ್ಲಿ ಈ ಕುರಿತು ಸಲಹೆ ಸೂಚನೆಗಳನ್ನು ಕೊಡುವಷ್ಟು ಸಮರ್ಥರಾದರೆ ಅವರ ವಿದ್ಯೆಗೆ ಒಂದು ಬೆಲೆ. ಹಕ್ಕುಗಳ ಬಗೆಗೆ ಮಾಹಿತಿ ಇರಬೇಕದ್ದು ಒಂದು ಮಾತಾದರೆ, ಆ ಹಕ್ಕುಗಳನ್ನು ದಕ್ಕಿಸಿಕೊಳ್ಳುವುದು ಹೇಗೆ ಎಂಬುದನ್ನು ತಿಳಿಯುವುದು ಇನ್ನಷ್ಟು ಮುಖ್ಯವಾದ ಮಾತು. ಹಕ್ಕುಗಳು ತಮ್ಮಷ್ಟಕ್ಕೆ ಜಾರಿಗೊಳ್ಳುವುದಿಲ್ಲ. ಬದಲಿಗೆ ಅವನ್ನು ಪಡೆಯಲು ಸಾಕಷ್ಟು ಅಡ್ಡಿ ಆತಂಕಗಳೇ ನಿರ್ಮಾಣಗೊಳ್ಳುತ್ತವೆ. ಈ ಅಡೆತಡೆಗಳು ಉದ್ದೇಶಪೂರ್ವಕವಾಗಿಯೋ, ತಿಳುವಳಿಕೆಯ ಅಭಾವದಿಂದಲೋ, ಉದಾಸೀನ ನಿರ್ಲಕ್ಷ್ಯಗಳಿಂದಲೋ ಒದಗಬಹುದು. ನಮ್ಮಲ್ಲಿ ಸರಿಯಾದ ಮಾಹಿತಿ ಇದ್ದು, ಅಡೆತಡೆಗಳ ಸ್ವರೂಪವನ್ನು ಗ್ರಹಿಸುವ ವಿವೇಚನೆಯೂ ಇದ್ದರೆ, ನಮ್ಮ ಹೋರಾಟದ ಸ್ವರೂಪವನ್ನು ನಿರ್ಧರಿಸುವುದ ಸಾಧ್ಯ ವಾಗುತ್ತದೆ. ವ್ಯಕ್ತಿಗಳಾಗಲಿ, ಸಂಘಟನೆಗಳಾಗಲಿ ಧೈರ್ಯ ಸ್ಥೈರ್ಯಗಳಷ್ಟೇ ಅಲ್ಲದೆ ಈ ತಿಳುವಳಿಕೆಯನ್ನು ಪಡೆಯುವುದು ತುಂಬಾ ಅಗತ್ಯ. ಇಲ್ಲವಾದರೆ ನಮ್ಮನ್ನು ಯಾವುದೇ ಕ್ಷಣದಲ್ಲಿ ದಾರಿ ತಪ್ಪಿಸುವುದು ಯಾರಿಗಾದರೂ ತುಂಬಾ ಸುಲಭ ಸಾಧ್ಯವಾಗಿ ಬಿಡುತ್ತದೆ.

ಈ ಹಿನ್ನೆಲೆಯಲ್ಲಿ ಮಹಿಳೆ-ಕಾನೂನು-ನ್ಯಾಯಗಳನ್ನು ಕುರಿತು ಪರಿಚಯವನ್ನು ನೀಡುವ, ವಿಶ್ಲೇಷಣೆಯನ್ನು ನಡೆಸುವ ಎರಡು ಲೇಖನಗಳನ್ನು ಈ ಅಂಕಣದಲ್ಲಿ ಕೊಡಲಾಗಿದೆ.

ಸಂ.

# ಮಹಿಳೆ ಮತ್ತು ಹಕ್ಕುಗಳು

*ಜ್ಯೋತಿ ಶಶಿಕುಮಾರ್*

ಭಾರತಕ್ಕೆ ಸ್ವಾತಂತ್ರ್ಯ ಬಂದು ಅರ್ಧಶತಮಾನವೇ ಕಳೆದಿದ್ದರೂ ಮಹಿಳೆಯರನ್ನು ಇಂದಿಗೂ ಹಿಂದುಳಿದ ವರ್ಗಗಳಿಗೆ ಸೇರಿದ ಅತಿ ದೊಡ್ಡ "ಏಕೈಕ ಗುಂಪು"ಎಂದೇ ಪರಿಗಣಿಸಲಾಗುತ್ತಿರುವುದು ಸರ್ವವಿದಿತ ಸಂಗತಿ. ಅಷ್ಟೇಕೆ ಪ್ರಪಂಚದ ಎಲ್ಲ ದೇಶಗಳಲ್ಲೂ ಮಾನವ ಸಮಾಜದ ಕಟ್ಟುಪಾಡು, ನ್ಯಾಯ-ಶಾಸನ ಹಾಗೂ ಆಚಾರ-ವಿಚಾರಗಳು ಪುರುಷ ಪ್ರಧಾನವೇ ಆಗಿದೆ. ಮಾನವೇತಿಹಾಸದ ಮೂಲಕೇಂದ್ರವಾದ ಸ್ತ್ರೀಮಾತ್ರ ಇನ್ನೂ ತನ್ನ ಪರಿಧಿಯಿಂದ ಹೊರಬರಲು ಸಾಧ್ಯವಾಗಿಲ್ಲ. ಮಾನವ ಸಮಾಜದ ಅರ್ಧಭಾಗದಷ್ಟು ಸಂಖ್ಯೆಯಲ್ಲಿರುವ ಮಹಿಳೆಯರು ಇಂದು ಅಸಮಾನತೆ, ಅಜ್ಞಾನ ಅವಿದ್ಯೆಯಿಂದಾಗಿ ಪುರುಷರ ಶೋಷಣೆ ಹಾಗೂ ಹಿಂಸಾಚಾರದ ಬಲಿಪಶುಗಳಾಗಿದ್ದಾರೆ. ಯಾವ ಸಮಾಜದಲ್ಲಿ ಮಹಿಳೆಯರಿಗೆ ಆರ್ಥಿಕ, ಸಾಮಾಜಿಕ ಹಾಗೂ ರಾಜಕೀಯ ಹಕ್ಕುಗಳಲ್ಲಿ ಪುರುಷರೊಂದಿಗೆ ಸಮಾನತೆ ಇರುವುದಿಲ್ಲವೋ ಅಂಥ ಸಮಾಜ ರೋಗಗ್ರಸ್ತವಾಗಿರುತ್ತದೆ. ಕಾನೂನುಗಳು ಸಾಮಾಜಿಕ ಪಿಡುಗುಗಳನ್ನು ನಿರ್ಮೂಲನಗೊಳಿಸುವ ಮಹಾ ಆಯುಧಗಳಾಗದೇ ಇರಬಹುದಾದರೂ ಸಾಮಾಜಿಕ ಬದಲಾವಣೆಗಳನ್ನು ತರಲು ಅವು ಖಂಡಿತ ನೆರವಾಗುತ್ತವೆ. ನಮ್ಮ ದೇಶದಲ್ಲಿ ಸ್ವಾತಂತ್ರ್ಯೋತ್ತರ ಅವಧಿಯಲ್ಲಿ ಮಹಿಳೆಯರ ಅಭಿವೃದ್ಧಿ, ಕಲ್ಯಾಣ ಹಾಗೂ ಹಕ್ಕುಗಳನ್ನು ನೀಡುವಂಥ ಕಾನೂನುಗಳನ್ನು ರಚಿಸಲಾಗಿದೆ. ಆದರೆ ಸಾಕ್ಷರತೆಯ ಕೊರತೆಯಂತಹ ಹತ್ತು ಹಲವು ಕಾರಣಗಳಿಂದಾಗಿ ಬಹುಪಾಲು ಮಹಿಳೆಯರಿಗೆ ಆ ಬಗ್ಗೆ ಅರಿವು ಕೂಡ ಇಲ್ಲದಿರುವುದು ದುರಂತವೇ ಆಗಿದೆ. ಅಷ್ಟೇಕೆ ಸುಶಿಕ್ಷಿತ ಮಹಿಳೆಯರಿಗೂ ಕೂಡ ಸಾಮಾನ್ಯವಾಗಿ ಕಾನೂನುಗಳ ಮೂಲಕ ಮಹಿಳೆಯರ ಸ್ಥಾನಮಾನವನ್ನು ಬದಲಾಯಿಸಲು ಮಾಡಲಾಗುತ್ತಿರುವ ಪ್ರಯತ್ನಗಳ ಬಗ್ಗೆ ಏನೂ ತಿಳಿದಿರುವುದಿಲ್ಲ. ಎಂದ ಮೇಲೆ ತೀರ ಹಿಂದುಳಿದ, ಕೆಳಸ್ತರದ ಹಾಗೂ ನಿರ್ಗತಿಕ ಮಹಿಳೆಯರ ಪಾಡೇನು?

ವಿಶ್ವಸಂಸ್ಥೆಯು 'ವಿಶ್ವ ಮಾನವ ಹಕ್ಕುಗಳ ಪ್ರಕಟಣೆಯ ಪ್ರಸ್ತಾವನೆಯಲ್ಲಿ ಮಾನವನ ಮೂಲಭೂತ ಹಕ್ಕುಗಳು (ಆಹಾರ, ಆಶ್ರಯ, ಸಹಬಾಳ್ವೆ ಇತ್ಯಾದಿ), ವ್ಯಕ್ತಿಯ ಘನತೆ ಮತ್ತು ಮೌಲ್ಯ ಹಾಗೂ ಸ್ತ್ರೀ ಪುರುಷರ ನಡುವೆ ಸಮಾನ ಹಕ್ಕುಗಳ ಬಗ್ಗೆ ಅಚಲ ನಂಬಿಕೆಯನ್ನು ವ್ಯಕ್ತಪಡಿಸಿದೆ. ಇದಕ್ಕಾಗಿ ಹನ್ನೊಂದು ಅನುಚ್ಛೇದಗಳನ್ನು ಉಪಬಂಧಿಸಿ

ಮಹಿಳೆಯರ ವಿರುದ್ಧ ಭೇದಭಾವ, ಪುರುಷರೊಂದಿಗೆ ಸಮಾನವಾಗಿ ಪರಿಗಣಿಸದಿರುವುದು ಅಥವಾ ಸೀಮಿತಗೊಳಿಸುವುದು ಮೂಲಭೂತ ಅನ್ಯಾಯವಾಗಿದ್ದು ವ್ಯಕ್ತಿಯ ಘನತೆಗೆ ಮಾಡಲಾದ ಅಪರಾಧವೆನ್ನಲಾಗಿದೆ. ಮಹಿಳಾ ತಾರತಮ್ಯದ ಎಲ್ಲ ಕಾನೂನು ರೂಢಿ, ನಿಯಮ, ಪದ್ಧತಿಗಳನ್ನು ಕೊನೆಗಾಣಿಸಿ ಸಮಾನ ಹಕ್ಕುಗಳಿಗಾಗಿ ಕಾನೂನು ರಕ್ಷಣೆ ಒದಗಿಸುವುದು, ಅವುಗಳನ್ನು ಸಂವಿಧಾನ ಹಾಗೂ ಕಾನೂನು ಮೂಲಕ ಖಚಿತಪಡಿಸುವುದು, ಚುನಾವಣೆಗಳಲ್ಲಿ ಮತ ನೀಡುವುದು, ಚುನತಾಯಿತರಾಗಲು ಅರ್ಹತೆ ನೀಡುವುದು, ಪುರುಷನಂತೆ ರಾಷ್ಟ್ರೀಯತೆಯನ್ನು ಬದಲಿಸಿಕೊಳ್ಳುವುದು, ಆಸ್ತಿ ಹಕ್ಕು, ಸಮಾನ ವೇತನ, ರಜಾ ಹಕ್ಕು ಇವುಗಳನ್ನೂ ಹಾಗೂ ಇನ್ನೂ ಅನೇಕ ಹಕ್ಕುಗಳನ್ನು ವಿವರಿಸಲಾಗಿದೆ. ಇವೆಲ್ಲವುಗಳ ಬಗ್ಗೆ ದೀರ್ಘ ಚರ್ಚೆ ಹಾಗೂ ಅವುಗಳ ಮೇಲೆ ಹಕ್ಕುಗಳನ್ನು ಚಲಾಯಿಸು ವುದರಲ್ಲಿನ ತೊಡಕುಗಳ ಹಾಗೂ ಕಾನೂನುಗಳ ಅನುಪಾಲನೆಯ ಬಗ್ಗೆ ಅಧ್ಯಯನ ಅತ್ಯಗತ್ಯವಾಗಿದೆ.

(ಜಗತ್ತಿನಾದ್ಯಂತ ೧೯೭೫ನೇ ವರ್ಷವನ್ನು "ಅಂತಾರಾಷ್ಟ್ರೀಯ ಮಹಿಳಾ ವರ್ಷ"ವೆಂದು ಆಚರಿಸಲಾಯಿತಲ್ಲದೆ ವಿಶ್ವಸಂಸ್ಥೆಯು ೧೯೭೬ನೇ ವರ್ಷದಿಂದ ೧೯೮೫ರ ವರೆಗಿನ ಅವಧಿಯನ್ನು ಮಹಿಳಾ ದಶಕವೆಂದು ಸಾರಿತ್ತು. ೧೯೯೫ರ ಸೆಪ್ಟೆಂಬರ್ ೪ರಿಂದ ೧೫ರವರೆಗೆ ಬೀಜಿಂಗ್ ನಲ್ಲಿ ನಡೆಸಲಾದ ನಾಲ್ಕನೇ ಅಂತಾರಾಷ್ಟ್ರೀಯ ಮಹಿಳಾ ಸಮಾವೇಶವನ್ನು ಮಹತ್ವಪೂರ್ಣ ಮೈಲಿಗಲ್ಲು ಎಂದು ಬಣ್ಣಿಸಲಾಯಿತು.) 'ವಿಶ್ವವನ್ನು ಮಹಿಳಾ ದೃಷ್ಟಿಕೋನದಿಂದ ನೋಡುವ ಹಾಗೂ ಪರಸ್ಪರರ (ಮಹಿಳೆ ಮತ್ತು ಪುರುಷ) ದೃಷ್ಟಿಕೋನದಿಂದ ಅರ್ಥೈಸುವಂತಹ ಘೋಷಣೆ ಕೂಡ ಕೇಳಿಬಂದಿತು.

ಭಾರತದಲ್ಲಿ, ಸ್ವಾತಂತ್ರ್ಯಾನಂತರ ಮಹಿಳೆಯರ ಸಲುವಾಗಿ ಸಂವಿಧಾನದಿಂದಾರಂಭಿಸಿ ರಚಿಸಲಾದ ಕುಟುಂಬ, ಕಾನೂನು, ಔದ್ಯಮಿಕ ಹಾಗೂ ಇನ್ನಿತರ ಮಹಿಳಾ ಅಭಿವೃದ್ಧಿಪರ ಕಾನೂನು ಹಾಗೂ ಅವುಗಳ ಸೌಲಭ್ಯ ಪಡೆಯಲು ಮಹಿಳೆ ಚಲಾಯಿಸಬಹುದಾದ ಹಕ್ಕುಗಳು ಈ ಬಗೆಗಿನ ಮುಖ್ಯ ಮಾಹಿತಿಗಳನ್ನು ನೀಡಲು ಈ ಲೇಖನದಲ್ಲಿ ಪ್ರಯತ್ನಿಸಲಾಗಿದೆ. ಇದರಿಂದ ಕಡೇ ಪಕ್ಷ ವಿದ್ಯಾವಂತ ಮಹಿಳೆಯರಾದರೂ ಆ ಬಗ್ಗೆ ಆಸಕ್ತಿವಹಿಸಿ, ಹೆಚ್ಚಿನ ಮಾಹಿತಿ, ವಿಷಯ ಜ್ಞಾನ ಪಡೆದು ಇನ್ನೂ ಕತ್ತಲಲ್ಲಿರುವ ಕೋಟ್ಯಾಂತರ ಸೋದರಿಯರಿಗೆ ಈಗಲಾದರೂ ಬೆಳಕು ತೋರುವಂತಾಗಲಿ ಎಂಬುದು ಇಲ್ಲಿನ ಆಶಯ. ಮಹಿಳೆಯರ ಹಕ್ಕುಗಳ ಬಗ್ಗೆ ತೀರಾ ವಿಸ್ತೃತವಾದ ನಿರೂಪಣೆ ನೀಡಬೇಕಾದರೆ ಅದೊಂದು ಬೃಹದ್ಗ್ರಂಥವಾದೀತು. ಆದ್ದರಿಂದ ಇಲ್ಲಿ ಕೇವಲ ಅತಿ ಮುಖ್ಯ ಅಂಶಗಳನ್ನು ಸೂಚಿಸಿ ಅಗತ್ಯವುಳ್ಳವರಿಗೆ ಮಾರ್ಗದರ್ಶನವಾಗಲೆಂದು ಪರಿಚಯಾತ್ಮಕವಾಗಿ ನಿರೂಪಿಸಲಾಗಿದೆ.

**ಭಾರತ ಸಂವಿಧಾನ ಮತ್ತು ಮಹಿಳೆ**

ಭಾರತದ ಸಂವಿಧಾನದ ಉದ್ದೇಶ ಹೀಗಿದೆ : ನಮ್ಮ ದೇಶವನ್ನು ಸಾರ್ವಭೌಮ, ಸಮತಾವಾದಿ, ಜಾತ್ಯತೀತ ಪ್ರಜಾಪ್ರಭುತ್ವ ಮತ್ತು ಗಣತಂತ್ರೀಯ ರಾಷ್ಟ್ರವನ್ನಾಗಿಸುವುದಲ್ಲದೆ ಅದರ ಸರ್ವ ಪ್ರಜೆಗಳಿಗೂ

*ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ನ್ಯಾಯ*
*ವೈಚಾರಿಕ, ವಾಕ್, ನಂಬಿಕೆ, ಧರ್ಮಶ್ರದ್ಧೆ ಮತ್ತು*
*ಪೂಜಾ ಸ್ವಾತಂತ್ರ್ಯ;*
*ಸಮಾನ ಅವಕಾಶ ಮತ್ತು ಸ್ಥಾನಮಾನ*
*ವ್ಯಕ್ತಿಯ ಘನತೆ ಮತ್ತು ರಾಷ್ಟ್ರದ ಐಕ್ಯತೆ ಮತ್ತು*
*ಅಭೇದ್ಯತೆಯ ಭರವಸೆಯೊಂದಿಗೆ ಸಹಭ್ರಾತೃತ್ವವನ್ನು*
*ದೊರಕಿಸಿಕೊಡುವುದು.*

ಸಂವಿಧಾನದ ಈ ಘನೋದ್ದೇಶವನ್ನು ಕಾರ್ಯರೂಪಕ್ಕೆ ತರಲು ಅದರ ಮೂರನೆಯ ಭಾಗದಲ್ಲಿ ಮೂಲ ಭೂತ ಹಕ್ಕುಗಳನ್ನು (Fundamental Rights) ನಾಲ್ಕನೆಯ ಭಾಗದಲ್ಲಿ ರಾಜ್ಯ ನೀತಿ ನಿರ್ದೇಶನ ತತ್ವಗಳನ್ನು (Directive Principles) ಕಲ್ಪಿಸಲಾಗಿದೆ. ಯಾವುದೇ ಸರ್ಕಾರ, ಶಾಸಕಾಂಗ, ಸ್ಥಳೀಯ ಸಂಸ್ಥೆ ಹಾಗೂ ಇತರ ಪ್ರಾಧಿಕಾರಗಳು ಮೂಲಭೂತ ಹಕ್ಕುಗಳ ಪಾಲನೆಯನ್ನು ಅಕ್ರಮವಾಗಿ ಉಲ್ಲಂಘಿಸಿದರೆ ಅಂತಹ ವ್ಯಕ್ತಿ, ಸರ್ಕಾರ ಮುಂತಾದವುಗಳ ವಿರುದ್ಧ ಸಂವಿಧಾನದ ೩೨ನೇ ಅನುಚ್ಛೇದದ ಅಡಿಯಲ್ಲಿ ಸರ್ವೋಚ್ಚ ನ್ಯಾಯಾಲಯಕ್ಕೆ ಹಾಗೂ ಸಂವಿಧಾನದ ೨೨೬ನೇ ಅನುಚ್ಛೇದದ ಅಡಿಯಲ್ಲಿ ರಾಜ್ಯದ ಉಚ್ಚ ನ್ಯಾಯಾಲಯಕ್ಕೆ ಅರ್ಜಿಸಲ್ಲಿಸಿ ಪರಿಹಾರವನ್ನು ಪಡೆಯಬಹುದು. ಸಂವಿಧಾನದ ೩ ಮತ್ತು ೪೮ ಭಾಗಗಳನ್ನು ಅವಲೋಕಿಸಿದಾಗ ಮಹಿಳೆಯರಿಗೆಂದೇ ಪ್ರತ್ಯೇಕ ಮೂಲಭೂತ ಹಕ್ಕುಗಳನ್ನಾಗಲಿ, ಇತರ ಹಕ್ಕುಗಳನ್ನಾಗಲಿ ನಮೂದಿಸಿಲ್ಲವೆಂಬುದು ತಿಳಿಯುತ್ತದೆ. ಕೇವಲ ೬ ಸಂದರ್ಭಗಳಲ್ಲಿ ಮಾತೃಸ್ತ್ರೀಯರ ಬಗ್ಗೆ ಪುರುಷರು ಮತ್ತು ಮಕ್ಕಳೊಡನೆ ಉಲ್ಲೇಖಿಸಲಾಗಿದ್ದು, ಒಂದೇ ಸಲ ಎಂದರೆ ೪೨ನೇ ಅನುಚ್ಛೇದದಲ್ಲಿ ಪ್ರಸೂತಿ ರಜೆಯ ಬಗ್ಗೆ ಮಾತ್ರ ಮಹಿಳೆಯರನ್ನಷ್ಟೇ ಉಲ್ಲೇಖಿಸಲಾಗಿದೆ. ಇತರ ಸಂದರ್ಭಗಳಲ್ಲಿ ವ್ಯಕ್ತಿ, ಪ್ರಜೆ ಎಂಬ ಪದಗಳನ್ನು ಉಲ್ಲೇಖಿಸಲಾಗಿದೆ. ಈ ಪದಗಳ ಅರ್ಥವ್ಯಾಪ್ತಿಯಲ್ಲಿ ಸ್ತ್ರೀಯರನ್ನು ಸೇರಿಸಲಾಗಿದೆ ಎಂಬುದು ಗಮನಾರ್ಹ.

ಭಾರತದ ಸಂವಿಧಾನದ ೧೪ರಿಂದ ೧೮ರವರೆಗಿನ ಅನುಚ್ಛೇದಗಳಲ್ಲಿ ಕಾನೂನಿನ ದೃಷ್ಟಿಯಿಂದ ಯಾರೇ ವ್ಯಕ್ತಿಯು(ಸ್ತ್ರೀ, ಪುರುಷ ಭಾರತದ ಪ್ರಜೆ ಅಥವಾ ವಿದೇಶೀಯ) ಭಾರತದ ಸಂಘ ರಾಜ್ಯ ಕ್ಷೇತ್ರದಲ್ಲಿ ಸಮಾನವಾಗಿದ್ದು, ಕಾನೂನಿನ ಮೂಲಕ ಸಮಾನ ರಕ್ಷಣೆಗಳನ್ನು ಪಡೆಯುವ ಬಗ್ಗೆ ರಾಜ್ಯವು ಯಾರೇ ಒಬ್ಬ ನಾಗರಿಕನ/ಳ ವಿರುದ್ಧ ಮತ, ಜನಾಂಗ, ಜಾತಿ, ಲಿಂಗ, ಜನ್ಮ ಸ್ಥಳಗಳಲ್ಲಿ ಅಥವಾ ಅವುಗಳ ಪೈಕಿ ಯಾವುದಾದರೊಂದರ

ಆಧಾರದ ಮೇಲೆ ತಾರತಮ್ಯ ಮಾಡಕೂಡದೆಂದು ತಿಳಿಸಲಾಗಿದೆ. ಜೊತೆಗೆ ೧೫(೩)ನೇ ಅನುಚ್ಛೇದದಲ್ಲಿ ಮಹಿಳೆಯರು ಮತ್ತು ಮಕ್ಕಳಿಗಾಗಿ ವಿಶೇಷ ಉಪಬಂಧ ಕಲ್ಪಿಸಿಕೊಡುವುದಕ್ಕೆ ಸಮ್ಮತಿ ನೀಡಲಾಗಿದೆ. ಉದಾಹರಣೆಗೆ ಯೂಸೂಪ್ ಅಬ್ದುಲ್ ಅಜೀಜ್ ವಿರುದ್ಧ ಮುಂಬೈ ರಾಜ್ಯ ಮೊಕದ್ದಮೆಯಲ್ಲಿ ಅಪೀಲುದಾರನು ಭಾರತ ದಂಡ ಸಂಹಿತೆಯ ೪೬೭ನೇ ಪ್ರಕರಣದ ಸಂವಿಧಾನ ಬದ್ಧತೆಯನ್ನು ಪ್ರಶ್ನಿಸಿದ್ದನು. ಇದು ವ್ಯಭಿಚಾರ ಕುರಿತ ಪ್ರಕರಣ. ವ್ಯಭಿಚಾರ ಮಾಡಿದ ಪುರುಷನಿಗೆ ಶಿಕ್ಷೆ ವಿಧಿಸಲಾಗಿದೆ. ಆದೆ ದುಷ್ಪ್ರೇರಣೆ ಮಾಡಿದ ಸ್ತ್ರೀಯ ಅಪರಾಧ ಪುರುಷನ ಅಪರಾಧಕ್ಕೆ ಸಮಾನವಾಗಿದ್ದರೂ ಸಹ ಆಕೆಯನ್ನು ಶಿಕ್ಷೆಗೆ ಗುರಿಪಡಿಸಲಾಗಿಲ್ಲ. ಆದ್ದರಿಂದ ಲಿಂಗ ತಾರತಮ್ಯವಾದಂಗಾಗುತ್ತದೆ ಇದು ೬.೧೫(೧)ವಿರುದ್ಧವಾಗಿದೆ ಎಂಬುದು ಆತನ ವಾದವಾಗಿತ್ತು. ಆದರೆ ನ್ಯಾಯಾಲಯವು ೬.೪೯೭ರಲ್ಲಿ ಲಿಂಗ ಹಾಗೂ ಸ್ತ್ರೀಯರ ಸಾಮಾಜಿಕ ಸ್ಥಿತಿಯನ್ನು ಗಮನಿಸಿ ಅದನ್ನು ತಿರಸ್ಕರಿಸಿತಲ್ಲದೆ ಇದೇ ಪ್ರಕರಣದ ಪೂರ್ವನಿದರ್ಶನದ ಆಧಾರದ ಮೇಲೆ ಸರ್ಕಾರವು ಮಹಿಳೆಯರ ಪರವಾಗಿ ಉಪಬಂಧಗಳನ್ನು ಕಲ್ಪಿಸಬಹುದೆಂದು ತೀರ್ಪು ನೀಡಿತು. ಅಲ್ಲದೆ ಸರ್ಕಾರವು ಮಹಿಳೆಯರ ಪರವಾಗಿ ಕಾನೂನು ರಚನೆ ಮಾಡಬಹುದೇ ಹೊರತು, ಅವರ ವಿರುದ್ಧವಾಗಿ ಅಥವಾ ಲಿಂಗಭೇದ ಮಾಡುವಂತಹ ಕಾನೂನು ರಚಿಸಬಾರದೆಂದು ಸೂಚಿಸಿತು.

ಜಾತಿ-ವಿರುದ್ಧ-ರಾಜಸ್ತಾನ ರಾಜ್ಯ ಮೊಕದ್ದಮೆಯಲ್ಲಿ ಮಹಿಳೆಯರು ಮತ್ತು ಮಕ್ಕಳನ್ನು ಕೆಲವು ವಿಶೇಷ ಸಂದರ್ಭಗಳಲ್ಲಿ ಜಾಮೀನಿನ ಮೇಲೆ ಬಿಡುಗಡೆ ಮಾಡಲು ಅವಕಾಶವಿರುವ ದಂಡ ಪ್ರಕ್ರಿಯಾ ಸಂಹಿತೆಯು (ಕ್ರಿಮಿನಲ್ ಪ್ರೊಸೀಜರ್ ಕೋಡ್ )೪೯೭(೧)ನೇ ಉಪಬಂಧವನ್ನು 'ಲಿಂಗ'ದ ಕಾರಣದಿಂದ ಪುರುಷರಿಗೆ ತಾರತಮ್ಯವೆಸಗಿ ಸಂವಿಧಾನದ ೧೫(೧)ನೇ ಅನುಚ್ಛೇದಕ್ಕೆ ಅಸಂಗತವಾಗಿದೆಯೆಂಬ ವಾದವನ್ನು ತಳ್ಳಿಹಾಕಿದ ರಾಜಸ್ತಾನ ಉಚ್ಚನ್ಯಾಯಾಲಯವು ಆ ಉಪಬಂಧವು ಮಹಿಳೆಯರಿಗೆ ಅನುಕೂಲಕರವಾಗಿರುವುದರಿಂದ ಸಂವಿಧಾನದ ೧೫(೩)ನೇ ಅನುಚ್ಛೇದವು ಅದನ್ನು ಸಮರ್ಥಿಸುತ್ತದೆ ಎಂದು ತೀರ್ಪು ನೀಡಿತು. ಏರ್ ಇಂಡಿಯಾ ವಿರುದ್ಧ ನರ್ಗೇಶ್ ಮಿರ್ಜಾ ಮತ್ತು ಇತರರು ಹೂಡಿದ ಮೊಕದ್ದಮೆ ಮತ್ತೊಂದು ಮಹತ್ವದ ಮೊಕದ್ದಮೆಯಾಗಿದೆ. ಗಗನ ಸಖಿಯರ ಉದ್ಯೋಗಾವಧಿಗೆ ಸಂಬಂಧಿಸಿದ ಈ ಮೊಕದ್ದಮೆಯಲ್ಲಿ ೩೦-೩೫ ವರ್ಷ ಮೀರಿದ ಮಹಿಳೆಯರನ್ನು ಕಡ್ಡಾಯವಾಗಿ ಸೇವೆಯಿಂದ ವಜಾ ಮಾಡುವುದಕ್ಕೆ ಸಂಬಂಧಪಟ್ಟ ವಿಷಯ ಚರ್ಚಿತವಾಗಿದೆ. ಈ ಸೇವಾ ನಿಯಮಾವಳಿಯಲ್ಲಿ ಮಹಿಳೆಯರ ವಿವಾಹ, ಗರ್ಭಧಾರಣೆ ಶಕ್ತಿ, ಸಾಮರ್ಥ್ಯದ ಬಗ್ಗೆ ಹಲವಾರು ಪ್ರಶ್ನೆಗಳನ್ನು ಎತ್ತಿದ್ದುದರಿಂದ ಸರ್ವೋಚ್ಚ ನ್ಯಾಯಾಲಯವು ಈ ವಾದಗಳನ್ನು ಕಾಲ್ಪನಿಕ ಮತ್ತು ಊಹಾಪೋಹದ ವಾದವೆಂದು ತೀರ್ಮಾನಿಸಿ ೧೯೬೧ರ ಪ್ರಸೂತಿ ಸೌಲಭ್ಯ ಮತ್ತು ಅಧಿನಿಯಮದ ಅನುಸಾರ ಉದ್ಯೋಗಸ್ಥ ಮಹಿಳೆ ಸೇವೆಯಲ್ಲಿ ಮುಂದುವರಿಯಲು, ತಾಯ್ತನದ

ಸೌಲಭ್ಯಗಳನ್ನು, ರಜೆಯನ್ನು ಹಾಗೂ ಅಧಿನಿಯಮದಡಿಯ ಇನ್ನಿತರ ಸೌಲಭ್ಯಗಳನ್ನು ಪಡೆಯಲು ಹಕ್ಕುಳ್ಳವಳಾಗಿರುತ್ತಾಳೆಂದು ತೀರ್ಪು ನೀಡಿತು.

ಇದೇ ರೀತಿ ೧೦,೨೦, ೨೧, ೨೨, ೨೩, ೨೪, ೨೫, ೨೯(೧)(೨), ೩೮(೨), ೩೯(ಎ), ೪೨, ೪೪, ೪೫, ೫೧ ಈ ಎಲ್ಲ ಅನುಚ್ಛೇದಗಳನ್ನು ವಿವರವಾಗಿ ವಿಶ್ಲೇಷಿಸಿದಾಗ ಸಂವಿಧಾನ ರಚನೆಯ ಮೊದಲು ಮಹಿಳೆಯರಿಗೆ ಲಭ್ಯವಿರದಿದ್ದ ಅನೇಕ ಹಕ್ಕುಗಳನ್ನು ಸಂವಿಧಾನವು ನಂತರದಲ್ಲಿ ಪ್ರದತ್ತ ಮಾಡಿರುವುದನ್ನು ಗಮನಿಸಬಹುದು.

ಸಂವಿಧಾನದಲ್ಲಿ ಪುರುಷರು ಮತ್ತು ಮಹಿಳೆಯರ ನಡುವಣ ಅಸಮಾನತೆಯನ್ನು ಹೋಗಲಾಡಿಸಿ ಮಹಿಳೆಯರಿಗೂ ಮೂಲಭೂತ ಹಕ್ಕುಗಳನ್ನು ಅನ್ವಯಿಸಲಾಗಿದೆ. ವಿಶೇಷ ಸಂದರ್ಭಗಳಲ್ಲಿ ಮಹಿಳೆಯರಿಗಾಗಿ ವಿಶೇಷ ಉಪಬಂಧಗಳನ್ನು ಕಲ್ಪಿಸಲು ಅನುವು ಮಾಡಿಕೊಡಲಾಗಿದೆ. ಸಂಸತ್ತು ಸಂವಿಧಾನ ಪ್ರದತ್ತವಾದ ಶಾಸನಾಧಿಕಾರವನ್ನು ಬಳಸಿಕೊಂಡು ಮಹಿಳೆಯರನ್ನು ಪುರುಷರ ನಿಯಂತ್ರಣದಿಂದ ಹೊರತಂದು ಅವರು ತಮ್ಮ ಹಕ್ಕುಗಳನ್ನು ಅನುಭವಿಸಲು ಹಲವಾರು ಕಾನೂನುಗಳನ್ನು ರಚಿಸಿದೆ. ಉದಾ: ವರದಕ್ಷಿಣೆ ನಿಷೇದ ಕಾನೂನು, ಹೆಂಗಸರು ಮತ್ತು ಬಾಲಕಿಯ ಅನೈತಿಕ ದುರ್ವ್ಯಾಪಾರ ನಿಷೇದ ಕಾನೂನು, ವಧೂ ವರರ ವಿವಾಹ ವಯಸ್ಸು ನಿಗದಿಪಡಿಸುವ ಕಾನೂನು, ಸಮಾನ ವೇತನ ಕಾನೂನು ಮುಂತಾದವುಗಳನ್ನು ಹೆಸರಿಸಬಹುದು.

**ವೈಯಕ್ತಿಕ ಕಾನೂನು ಮತ್ತು ಮಹಿಳೆ**

ವ್ಯಕ್ತಿ ಜೀವನ ಕುಟುಂಬದೊಂದಿಗೆ ಆರಂಭವಾಗುತ್ತದೆ. ಎಂದ ಮೇಲೆ ಕುಟುಂಬವೆಂದರೆ ರಕ್ತ ಸಂಬಂಧ ವಿವಾಹ ಹಾಗೂ ದತ್ತಕ ಮುಂತಾದವುಗಳ ಮೂಲಕ ಒಟ್ಟುಗೂಡಿದ ವ್ಯಕ್ತಿಗಳಿರುತ್ತಾರೆ. ಹೀಗಾಗಿ ವಿವಾಹ, ಉತ್ತರಾಧಿಕಾರ, ಜೀವನಾಂಶ, ಮಕ್ಕಳಪಾಲನೆ, ಅಪ್ರಾಪ್ತ ವಯಸ್ಕರು ಹಾಗೂ ಪಾಲಕರು ಮುಂತಾದ ವಿಷಯಗಳ ಬಗ್ಗೆ ಪ್ರತಿಯೊಂದು ಸಮಾಜ ಅಥವಾ ಸಮುದಾಯವು ಅದರದೇ ಆದ ಕಟ್ಟುಪಾಡು, ನಿಯಮಗಳನ್ನು ಹೊಂದಿರುತ್ತದೆ. ಇದನ್ನೇ ವೈಯಕ್ತಿಕ ಕಾನೂನು ಎಂದು ಕರೆಯುಬಹುದು. ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ಅವರು ಭಾರತದಲ್ಲಿ ರೂಢಿಯಲ್ಲಿದ್ದ ವೈಯಕ್ತಿಕ ಕಾನೂನುಗಳನ್ನು ಬದಲಿಸುವ ಪ್ರಯತ್ನ ಮಾಡಲಿಲ್ಲ. ಆದರೆ ಭಾರತ ಸಂವಿಧಾನದ ೪೪ನೇ ಅನುಚ್ಛೇದದಲ್ಲಿ ಕೇಂದ್ರ ಸರ್ಕಾರವು ಅದರ ಸಮಸ್ತ ಪ್ರಜೆಗಳಿಗೂ ಏಕರೂಪ ನಾಗರಿಕ ಸಂಹಿತೆಯನ್ನು ಅನ್ವಯಿಸಬೇಕೆಂಬುದಾಗಿ ವಿಧಿಸಲಾಗಿದೆ. ಹಲವಾರು ಮೊಕದ್ದಮೆಗಳ ಬಗ್ಗೆ ತೀರ್ಪು ನೀಡುವಾಗ ಸರ್ವೋಚ್ಚ ನ್ಯಾಯಾಲಯವು ಕೂಡ ಏಕರೂಪ ನಾಗರಿಕ ಸಂಹಿತೆಗಾಗಿ ಒತ್ತು ನೀಡಿದೆಯಾದರೂ ಈವರೆಗೆ ಅದನ್ನು ನಿರ್ದಿಷ್ಟವಾಗಿ ಜಾರಿಗೊಳಿಸಲು ಯಾವ ಸರ್ಕಾರಕ್ಕೂ ಸಾಧ್ಯವಾಗಿಲ್ಲ.

ಭಾರತದಲ್ಲಿ ನಾಲ್ಕು ಪ್ರಧಾನ ಧರ್ಮಗಳಿದ್ದು, ಎಂದರೆ ಹಿಂದೂ, ಮುಸ್ಲಿಂ, ಕ್ರಿಶ್ಚಿಯನ್ ಮತ್ತು ಪಾರ್ಸಿ ಧರ್ಮಗಳಿಗೆ ಸೇರಿದ ಜನರಿದ್ದಾರೆ. ಇವೆಲ್ಲ ಧರ್ಮಗಳಿಗೂ

ಪ್ರತ್ಯೇಕವಾದ ಕಾನೂನುಗಳಿವೆ. ಬೌದ್ಧರು, ಜೈನರು ಮತ್ತು ಸಿಖ್ಖರು ಹಿಂದೂ ಕಾನೂನನ್ನೇ ಅನುಸರಿಸುತ್ತಾರೆ. ಸ್ವಾತಂತ್ರ್ಯೋತ್ತರ ಭಾರತದಲ್ಲಿ ಸುಮಾರು ೧೯೫೫ ಹಾಗೂ ೫೬ರಲ್ಲಿ ಹಿಂದೂಗಳಿಗೆ ಸಂಬಂಧಿಸಿದ ಅನೇಕ ಶಾಸನಗಳ ರಚನೆಯಾಯಿತು.

**ವಿಶೇಷ ವಿವಾಹ ಅಧಿನಿಯಮ ೧೯೫೪**

ವಿವಿಧ ಧರ್ಮಗಳಿಗೆ ಸೇರಿದ ಜನರು ಅಯಾ ಧಾರ್ಮಿಕ ಪದ್ಧತಿಯಂತೆ ವಿವಾಹ ಮಾಡಿಕೊಳ್ಳುವಂತೆಯೇ ಧರ್ಮ, ಜಾತಿ, ಪಂಥ ಇತ್ಯಾದಿಗಳನ್ನು ಮೀರಿ ವಿವಾಹ ಮಾಡಿಕೊಳ್ಳಬಯಸುವವರಿಗೆ ವಿಶೇಷ ವಿವಾಹ ಅಧಿನಿಯಮ, ೧೯೫೪ರ ಅನುಸಾರ ವಿವಾಹವಾಗಲು ಅವಕಾಶವಿದೆ. ಇದನ್ನು ಸಿವಿಲ್ ವಿವಾಹವೆಂದೂ ಕರೆಯಲಾಗಿದೆ. ಇದರಲ್ಲಿ ಯಾವುದೇ ಧಾರ್ಮಿಕ ಸಂಪ್ರದಾಯ ಅಥವಾ ಆಚರಣೆಗಳನ್ನು ಅನುಸರಿಸಬೇಕಾಗಿಲ್ಲ. ಇದೊಂದು ಕ್ರಾಂತಿಕಾರಕ ವಿವಾಹವೆನಿಸಿದೆ.

ವಿಶೇಷ ವಿವಾಹ ಅಧಿನಿಯಮ, ೧೯೫೪ರಲ್ಲಿ ಸೂಚಿಸಿರುವ ಕೆಲವು ಷರತ್ತುಗಳು ಹೀಗಿವೆ:

೧. ವಧೂವರರ ವಯಸ್ಸು ಅನುಕ್ರಮವಾಗಿ ೧೮ ಮತ್ತು ೨೧ವರ್ಷ ಪೂರ್ಣಗೊಂಡಿರಬೇಕು.
೨. ಈ ವಿವಾಹವಾಗುವುದಕ್ಕೆ ಮೊದಲು ಜೀವಂತ ಪತಿ/ಪತ್ನಿಯನ್ನು ಹೊಂದಿರಬಾರದು.
೩. ಉಭಯ ಪಕ್ಷಕಾರ/ಳು ವಿವಾಹಕ್ಕೆ ಸ್ವಯಿಚ್ಛೆಯಿಂದ ಸಮ್ಮತಿ ಸೂಚಿಸಿರಬೇಕು.
೪. ಮಾನಸಿಕ, ದೈಹಿಕ ಅಥವಾ ಸಂತಾನೋತ್ಪತ್ತಿಗೆ ಅನರ್ಹತೆ ಇರಬಾರದು.
೫. ಲೈಂಗಿಕ ರೋಗಗಳಿರಬಾರದು.
೬. ನಿಷೇಧಿತ ಕುಟುಂಬ ಸಂಬಂಧದ ವರ್ಗಗಳಿಗೆ ಸೇರಿರಬಾರದು.
೭. ವಿವಾಹ ನೊಂದಣಿಯಾಗಬೇಕಾದ ತಾಲೂಕು ಅಥವಾ ಜಿಲ್ಲೆಯಲ್ಲಿ ನೋಂದಣಿ ದಿನಾಂಕಕ್ಕೆ ಮೊದಲು ಕನಿಷ್ಟ ೩೦ ದಿನಗಳ ಕಾಲ ವಾಸ ಮಾಡಿರಬೇಕು.

ಈ ಅಧಿನಿಯಮದ ಅಡಿಯಲ್ಲಿ ವಿವಾಹವಾಗುವವರು ಭಾರತ ಉತ್ತರಾಧಿಕಾರ ಅಧಿನಿಯಮ, ೧೯೨೫ಕ್ಕೆ ಅನುಸಾರವಾಗಿ ಕೌಟುಂಬಿಕ ಆಸ್ತಿಯನ್ನು ಪಡೆಯುವರೇ ವಿನಃ ಹಿಂದೂಗಳಾಗಿದ್ದರೂ ಕೂಡ ಹಿಂದೂ ಉತ್ತರಾಧಿಕಾರ ಅಧಿನಿಯಮದ ಮೂಲಕ ಪಡೆಯದೆ ಒಟ್ಟು ಕುಟುಂಬ ಅಥವಾ ಅವಿಭಕ್ತ ಕುಟುಂಬದಲ್ಲಿನ ಅಸ್ತಿ ಉತ್ತರಾಧಿಕಾರದ ಹಕ್ಕುಗಳನ್ನು ಕಳೆದುಕೊಳ್ಳುತ್ತಾರೆ. ಆದರೆ ಹಾಗೆ ವಿವಾಹಿತರಾದ ವ್ಯಕ್ತಿಗಳು ಹಿಂದೂ, ಸಿಖ್, ಜೈನ್ ಅಥವಾ ಬೌದ್ಧ ಧರ್ಮೀಯರಾಗಿದ್ದರೆ ಅವರಿಗೆ ಅವರವರ ವೈಯಕ್ತಿಕ ಕಾನೂನಿಗನುಸಾರವಾಗಿ ಆಸ್ತಿಯಲ್ಲಿನ ಉತ್ತರಾಧಿಕಾರ ದೊರೆಯುತ್ತದೆ.

ವಿಶೇಷ ವಿವಾಹ ಅಧಿನಿಯಮ, ೧೯೫೪ರ ಅಡಿಯಲ್ಲಿ ಪತಿ/ಪತ್ನಿಗೆ ದಾಂಪತ್ಯಾಧಿಕಾರ ಪುನಃ ಸ್ಥಾಪನೆ, ನ್ಯಾಯಿಕ ಬೇರ್ಪಡೆ ಹಾಗೂ ವಿಚ್ಛೇದನೆ, ಜೀವನಾಂಶದಂತಹ ವಿವಾಹ ಸಂಬಂಧಿತ ಪರಿಹಾರಗಳಿಗೆ ಉಪಬಂಧ ಕಲ್ಪಿಸಲಾಗಿದೆ.

**ಹಿಂದೂ ವಿವಾಹ ಅಧಿನಿಯಮ ೧೯೫೫**

ಈ ಅಧಿನಿಯಮವು ಹಿಂದೂ, (ಇದರಲ್ಲಿ ವೀರಶೈವ, ಲಿಂಗಾಯಿತ ಅಥವಾ ಬ್ರಹ್ಮಸಮಾಜಕ್ಕೆ ಸೇರಿದವರು, ಪ್ರಾರ್ಥನಾ ಅಥವಾ ಆರ್ಯಸಮಾಜಕ್ಕೆ ಸೇರಿದವರೂ ಒಳಗೊಳ್ಳುತ್ತಾರೆ) ಬೌದ್ಧ, ಜೈನ ಅಥವಾ ಸಿಖ್ ಧರ್ಮೀಯರಿಗೆ ಅನ್ವಯವಾಗುತ್ತದೆ. ವಿಭಿನ್ನ ಜಾತಿಗಳಿಗೆ ಸೇರಿದವರು ಅಂತರ್ಜಾತಿ ವಿವಾಹವಾಗಲು ಅನುಮತಿ ನೀಡಲಾಗಿದೆ.

ಹಿಂದೂ ವಿವಾಹ ಅಧಿನಿಯಮದನ್ವಯ ವಿವಾಹದ ಸಿಂಧುತ್ವಕ್ಕೆ ನಾಲ್ಕು ಷರತ್ತುಗಳನ್ನು ಸೂಚಿಸಲಾಗಿದೆ. ಅವುಗಳೆಂದರೆ:

೧. ಈ ಅಧಿನಿಯಮದಲ್ಲಿ ಬಹುಪತ್ನಿತ್ವ/ಬಹುಪತಿತ್ವವನ್ನು ನಿಷೇಧಿಸಲಾಗಿದ್ದು, ಅಧಿನಿಯಮವು ಜಾರಿಗೆ ಬಂದ ದಿನಾಂಕದ ತರುವಾಯ ನಡೆದ ವಿವಾಹದ ವಧೂವರರಿಗೆ ವಿವಾಹವಾಗುವ ಸಮಯದಲ್ಲಿ ಜೀವಂತ ಪತಿ ಅಥವಾ ಪತ್ನಿ ಇದ್ದರೆ ಅಂಥ ವಿವಾಹವು ಅಸಿಂಧು ಹಾಗೂ ಶೂನ್ಯವಾಗುತ್ತದೆ.

೨. ನಿಷೇಧಿತ ಕುಟುಂಬ ವರ್ಗ ಸಂಬಂಧ ಮತ್ತು ಸಪಿಂಡ ಸಂಬಂಧಿಗಳಲ್ಲಿ ವಿವಾಹವನ್ನು ನಿಷೇಧಿಸಲಾಗಿದೆ(ಈ ಬಗ್ಗೆ ಅಧಿನಿಯಮದಲ್ಲಿ ಕೂಲಂಕುಷ ವಿವರಣೆ ಇದೆ).

ಮೇಲ್ಕಂಡ (೧) ಮತ್ತು (೨)ನೇ ಷರತ್ತುಗಳನ್ನು ಉಲ್ಲಂಘಿಸಿ ನಡೆಸಲಾದ ವಿವಾಹ ಶೂನ್ಯವಾಗುವುದಾದರೂ ಅಂಥ ವಿವಾಹದಿಂದ ಜನಿಸಿದ ಮಕ್ಕಳು ನ್ಯಾಯಸಮ್ಮತ ಮಕ್ಕಳಾಗುವರಲ್ಲದೆ, ಅವರ ತಾಯ್ತಂದೆಯರ ಆಸ್ತಿ ಪಡೆಯಲು ಹಕ್ಕುಳ್ಳವರಾಗಿರುತ್ತಾರೆ.

೩. ವಿವಾಹ ವಯೋಮಿತಿ ವಧು/ವರನಿಗೆ ಅನುಕ್ರಮವಾಗಿ ೧೮ವರ್ಷ ಹಾಗೂ ೨೧ ವರ್ಷವಾಗಿರಬೇಕು. ಈ ಷರತ್ತಿನ ಉಲ್ಲಂಘನೆಯಾದರೆ ವಿವಾಹ ಊರ್ಜಿತವಾಗುವುದಿಲ್ಲ. ಮಾತ್ರವಲ್ಲ ಈ ಅಧಿನಿಯಮ ಹಾಗೂ ಬಾಲ್ಯವಿವಾಹ ನಿಷೇಧ ಅಧಿನಿಯಮ, ೧೯೨೯ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವಾಗುತ್ತದೆ.

೪. ವಧು/ವರನು ವಿವಾಹಕ್ಕೆ ಕಾನೂನುಸಮ್ಮತ ಒಪ್ಪಿಗೆ ನೀಡಲು ಅಸಮರ್ಥರಾಗಿರಬಾರದು. ಎಂದರೆ ಮಾನಸಿಕ ಅಸ್ವಸ್ಥತೆ, ಮೂರ್ಛೆರೋಗ ಅಥವಾ ಲೈಂಗಿಕ ರೋಗಗಳಿಂದ ನರಳುತ್ತಿರಬಾರದು.

ಹಿಂದೂ ವಿವಾಹವನ್ನು ಧಾರ್ಮಿಕ ಸಂಪ್ರದಾಯ ಅಥವಾ ವಧೂವರರ ಸಂಪ್ರದಾಯಗಳಿಗನುಸಾರವಾಗಿ ನೆರವೇರಿಸಬಹುದು. ಆದರೆ ೭ನೇ ಪ್ರಕರಣದಡಿ ಅಗ್ನಿಸಾಕ್ಷಿಯಾದ ಸಪ್ತಪದಿ ಶಾಸ್ತ್ರದಿಂದ ಮಾತ್ರವೇ ವಿವಾಹ ಪೂರ್ಣವೆಂದು ತಿಳಿಸಲಾಗಿದೆ.

ಈ ಅಧಿನಿಯಮದಲ್ಲಿ ನ್ಯಾಯಿಕ ಬೇರ್ಪಡೆ (Judicial Separation) ದಾಂಪತ್ಯಾಧಿಕಾರಗಳ ಪುನಃ ಸ್ಥಾಪನೆ(Restitution of Conjugal Rights) ಮತ್ತು ವಿವಾಹ ವಿಚ್ಛೇದನೆ(Diverce) ಮೊದಲಾದ ವೈವಾಹಿಕ ಪರಿಹಾರಗಳನ್ನು ಕಲ್ಪಿಸಲಾಗಿದೆ. ಇವೆಲ್ಲದಕ್ಕೆ ಮಹಿಳೆ ಮತ್ತು ಪುರುಷರಿಗೆ ನೀಡಬಹುದಾದ ಕಾರಣಗಳು ಏಕಸ್ವರೂಪದ್ದಾಗಿದ್ದರೂ ಕೆಲವು ವಿಶೇಷ ಸಂದರ್ಭಗಳಲ್ಲಿ ಮಹಿಳೆಯರಿಗೆ ಪ್ರತ್ಯೇಕ ಅಥವಾ

ಮಹಿಳಾಪರ ಕಾರಣಗಳನ್ನೂ ನೀಡುವ ಅವಕಾಶ ಕಲ್ಪಿಸಲಾಗಿದೆ. ಹೀಗಾಗಿ ಈ ಅಧಿನಿಯಮದ ಕೆಲವು ಉಪಬಂಧಗಳ ಸಂವಿಧಾನ ಬದ್ಧತೆಯನ್ನೂ ಪ್ರಶ್ನಿಸಲಾಗಿದೆ. ಉದಾ:ಚಿತ್ರನಟಿ ಟಿ.ಸರೀತಾ-ವಿರುದ್ಧ-ಟಿ.ವೆಂಕಟಸುಬ್ಬಯ್ಯ ಮೊಕದ್ದಮೆಯಲ್ಲಿ ಪತಿಪತ್ನಿಯರು ಭಿನ್ನಾಭಿಪ್ರಾಯದಿಂದಾಗಿ ಬೇರೆಯಾಗಿದ್ದರು. ಪತಿಯು ಹಿಂದೂವಿವಾಹ ಅಧಿನಿಯಮದ ೯ನೇ ಪ್ರಕರಣದಡಿ ಎತ್ತಿದ್ದ ಪ್ರಶ್ನೆಯನ್ನು ಆಂಧ್ರದ ಶ್ರೇಷ್ಠ ನ್ಯಾಯಾಲಯವು ವ್ಯಕ್ತಿಯ ವೈಯಕ್ತಿಕ ಸ್ವಾತಂತ್ರ್ಯ, ಏಕಾಂತತೆ, ಘನತೆಯ ಹಕ್ಕುಗಳಿಗೆ ಅಪಚಾರವಾಗಿದೆಯೆಂದು ಚಿತ್ರನಟಿ ಸರಿತ ಮಾಡಿದ ವಾದವನ್ನು ಅಂಗೀಕರಿಸಿ ಅಧಿನಿಯಮದ ೯ನೇ ಪ್ರಕರಣವು ಸಂವಿಧಾನದ ವಿರುದ್ಧವಾಗಿದೆಯೆಂದು ತೀರ್ಮಾನಿಸಿತ್ತು.

ಆದರೆ ಹರವಿಂದರ್ ಕೌರ್-ವಿರುದ್ಧ-ಹರಮೆಂದರ್ ಕೌರ್ ಮೊಕದ್ದಮೆಯಲ್ಲಿ ದೆಹಲಿ ಶ್ರೇಷ್ಠನ್ಯಾಯಾಲವು ಹಿಂದೂವಿವಾಹ ಅಧಿನಿಯಮದ ೯ನೇ ಪ್ರಕರಣದಡಿ ದಾಂಪತ್ಯದ ಹಕ್ಕುಗಳನ್ನು ಕೊಡಿಸಿದ್ದ ನಂತರವೂ ಅವರು ಕೂಡಿ ಬಾಳದಿದ್ದರೆ ವಿಚ್ಛೇದನೆ ಪಡೆಯಬಹುದಿತ್ತೆಂದು ನೀಡಿದ ತೀರ್ಪನ್ನು ಸರ್ವೋಚ್ಚನ್ಯಾಯಾಲಯವು ಅನುಮೋದಿಸಿತ್ತು. ನ್ಯಾಯಿಕ ಬೇರ್ಪಡೆಯಿಂದ ದಂಪತಿಗಳು ಬೇರೆಯಾಗುವರಾದರೂ ವಿವಾಹಬಂಧನ ಮುಕ್ತರಾಗಿರುವುದಿಲ್ಲ. ಆದರೆ ಮರುವಿವಾಹ ಸಾಧ್ಯವಿಲ್ಲ. ವಿವಾಹ ವಿಚ್ಛೇದನೆ ವಿವಾಹವನ್ನು ಸಂಪೂರ್ಣವಾಗಿ ರದ್ದುಗೊಳಿಸುತ್ತದೆ ಹಾಗೂ ಪತಿ/ಪತ್ನಿ ಬೇರೆ ಬೇರೆ ವಿವಾಹವಾಗಲು ಸ್ವತಂತ್ರರಾಗುತ್ತಾರೆ. ಅಧಿನಿಯಮದಲ್ಲಿ ಇಂಥ ಮೊಕದ್ದಮೆಗಳನ್ನು 'ರಹಸ್ಯ'ವಾಗಿ (In camera) ನಡೆಸುವುದನ್ನು ಕಡ್ಡಾಯಗೊಳಿಸಲಾಗಿದೆ. ಈ ಅಧಿನಿಯಮದಡಿ ಸಂದರ್ಭಕ್ಕೆ ತಕ್ಕಂತೆ ಪತಿ/ಪತ್ನಿ ಯಾವುದೇ ಸ್ವತಂತ್ರ ವರಮಾನ ಹೊಂದಿರದಿದ್ದರೆ ನ್ಯಾಯಾಲಯ ವೆಚ್ಚ ಹಾಗೂ ಜೀವನ ವೆಚ್ಚಗಳನ್ನು ಭರಿಸಲು ಅರ್ಜಿಯನ್ನು ಸಲ್ಲಿಸಬಹುದು.

ಪಾರ್ಸಿಗಳಿಗೆ ಪಾರ್ಸಿ ವಿವಾಹ ಮತ್ತು ವಿಚ್ಛೇದನ ಅಧಿನಿಯಮ, ೧೯೩೬ ಹಾಗೂ ಕ್ರೈಸ್ತರಿಗೆ ಭಾರತೀಯ ಕ್ರೈಸ್ತರ ವಿವಾಹ ಅಧಿನಿಯಮ, ೧೯೭೨ರ ಅನ್ವಯ ವಿವಾಹವಾಗಲು ಅವಕಾಶವಿದೆ. ಭಾರತದಲ್ಲಿ ವಿದೇಶಿಯ ವಿವಾಹ ಅಧಿನಿಯಮ, ೧೯೬೯ ಕೂಡ ಜಾರಿಯಲ್ಲಿದೆ. ಮುಸ್ಲಿಮರಿಗೆ 'ಶರಿಯತ್' ಕಾನೂನು ವಿವಾಹಕ್ಕೆ ಅನ್ವಯವಾಗುತ್ತದೆ. ವಿವಾಹವು ಇತರ ಧರ್ಮೀಯರಂತೆ ಧಾರ್ಮಿಕ ಪವಿತ್ರ ಬಂಧನವಾಗಿರದೆ ಸಂತಾನೋತ್ಪತ್ತಿಗಾಗಿ ಮಾಡಿಕೊಳ್ಳುವ ಕರಾರು ಒಪ್ಪಂದ ಮಾತ್ರವಾಗಿರುತ್ತದೆ.

ಹೀಗೆ ವೈವಾಹಿಕ ಜೀವನದಲ್ಲಿ ಪತಿ/ಪತ್ನಿಯರನ್ನು ನಿಯಂತ್ರಿಸಲು ಅನೇಕ ಕಾನೂನುಗಳು ಆಯಾ ದೇಶ, ಧರ್ಮಗಳಿಗನುಸಾರವಾಗಿ ರೂಢಿಯಲ್ಲಿದೆ. ಇಬ್ಬರ ನಡುವೆ ಅನ್ಯೋನ್ಯತೆ, ನಿಷ್ಠೆ, ಸಹನೆ ಇಲ್ಲದಾಗ ಶಾಸನರೀತ್ಯಾ ವಿವಾಹ ಸಂಬಂಧವನ್ನು ಕಳಚಿಕೊಳ್ಳಬೇಕಾಗುತ್ತದೆ. ಹಿಂದೂ ವಿವಾಹ ಅಧಿನಿಯಮ, ೧೯೫೫ರಲ್ಲಿ ವಿವಾಹ ವಿಚ್ಛೇದನೆ ಕೋರಿ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಲು ಇರಬೇಕಾದ ಸಕಾರಣಗಳನ್ನು ಸೂಚಿಸಿದ್ದು ಅವು ಈ ಮುಂದಿನಂತಿವೆ: ೧. ವ್ಯಭಿಚಾರ ೨.ಮತಾಂತರ(ಧರ್ಮಬದಲಾವಣೆ), ೩.ಹುಚ್ಚು ೪.ಗುಹ್ಯರೋಗಗಳು ೫.

ಅಲ್ಲದೆ, ಈ ಪ್ರಕರಣದಲ್ಲಿ ಪತ್ನಿ, ಮಕ್ಕಳು ಮಾತ್ರವಲ್ಲದೆ ಆರ್ಥಿಕ ತೊಂದರೆಯಲ್ಲಿರುವ, ಜೀವನಾಧಾರವಿಲ್ಲದ ತಾಯ್ತಂದೆ, ವಿವಾಹಬಾಹಿರ ಸಂಬಂಧದಿಂದ ಜನಿಸಿದ ಮಕ್ಕಳು, ಪ್ರಾಪ್ತ ಅಥವಾ ಅಪ್ರಾಪ್ತ ವಯಸ್ಸಿನವರು ಪತಿ ಅಥವಾ ತಂದೆ ಅಥವಾ ಮಕ್ಕಳ ವಿರುದ್ಧ ಜೀವನಾಂಶಕ್ಕಾಗಿ ಅರ್ಜಿ ಸಲ್ಲಿಸಬಹುದಾಗಿದ್ದು ಇದೊಂದು ಅತಿ ಮಹತ್ವದ ಕಾನೂನಾಗಿದೆ. ಯುಕ್ತ ಕಾರಣವಿಲ್ಲದೆ ಯಾರೇ ಮಹಿಳೆ ಸ್ವತಂತ್ರಳಾಗಿ, ಪರಸ್ಪರ ಒಪ್ಪಿಗೆಯಿಂದ ಅಥವಾ ವ್ಯಭಿಚಾರದಿಂದ ಪ್ರತ್ಯೇಕವಾಗಿ ವಾಸಿಸುತ್ತಿದ್ದರೆ ಜೀವನಾಂಶ ಕೋರಲು ಸಾಧ್ಯವಿಲ್ಲ. ಈ ಅಧಿನಿಯಮದ ದೋಷವೆಂದರೆ, ವಿಧವೆಯಾದ ಮಗಳು ಜೀವನಾಂಶ ಕೇಳಲು ಸಾಧ್ಯವಿಲ್ಲ. ಎಂದರೆ ತಾಯ್ತಂದೆ ಅಥವಾ ಅತ್ತೆ-ಮಾವ ಅಥವಾ ಇತರರನ್ನು ಜೀವನಾಂಶ ನೀಡಲು ನ್ಯಾಯಾಲಯ ಆಜ್ಞೆ ನೀಡಲಾಗುವುದಿಲ್ಲ. ಅಂಥ ಸಂದರ್ಭದಲ್ಲಿ ಮಹಿಳೆ ವೈಯಕ್ತಿಕ ಕಾನೂನಿನ ಅಡಿಯಲ್ಲಿ ಜೀವನಾಂಶ ಕೇಳಬಹುದು. ಹಿಂದೂ ಅಪ್ರಾಪ್ತ ವಯಸ್ಕರು ಮತ್ತು ಸಂರಕ್ಷಕರ ಅಧಿನಿಯಮ, ೧೯೫೬ ಹಿಂದೂ ಪೋಷಕರು ಮತ್ತು ಸಂರಕ್ಷಕರ ಅಧಿನಿಯಮ, ೧೮೯೦ ಇವುಗಳಲ್ಲಿ ಪೋಷಣೆ ಹಕ್ಕುಗಳ ಬಗ್ಗೆ ಉಪಬಂಧಗಳನ್ನು ಕಲ್ಪಿಸಲಾಗಿದೆ.

**ಕುಟುಂಬ ನ್ಯಾಯಾಲಯಗಳ ಅಧಿನಿಯಮ, ೧೯೮೮**

ಈ ಅಧಿನಿಯಮದಡಿ ವಿವಾಹ ಮತ್ತು ಕೌಟುಂಬಿಕ ವಿವಾದಗಳ ಬಗ್ಗೆ ಶೀಘ್ರ ನ್ಯಾಯ ನೀಡಿಕೆಗಾಗಿ ಪ್ರತ್ಯೇಕ ನ್ಯಾಯಾಲಯಗಳನ್ನು ರಚಿಸಲಾಗಿದೆ. ನ್ಯಾಯಾಲಯಗಳಲ್ಲಿ ಕೌನ್ಸಿಲರು, ಅಧಿಕಾರಿ ಹಾಗೂ ಇತರರಿದ್ದು, ರಾಜ್ಯ ಸರ್ಕಾರದಿಂದ ನೇಮಿತರಾಗಿರುತ್ತಾರೆ.

**ಮುಸ್ಲಿಂ ಮಹಿಳಾ (ವಿವಾಹ ವಿಚ್ಛೇದನೆಯಿಂದ) ಹಕ್ಕುಗಳ ಸಂರಕ್ಷಣಾ ಅಧಿನಿಯಮ, ೧೯೮೬ :**

ಇದರಲ್ಲಿ ವಿಚ್ಛೇದಿತ ಮಹಿಳೆಯ ಹಕ್ಕುಗಳನ್ನು ತಿಳಿಸಲಾಗಿದ್ದು ದಂಡ ಪ್ರಕ್ರಿಯಾ ಸಂಹಿತೆಯ ೧೨೫ ರಿಂದ ೧೨೮ನೇ ಪ್ರಕರಣಗಳ ಉಪಬಂಧಗಳು ಪತಿ/ಪತ್ನಿಗೆ ಅನ್ವಯವಾಗುತ್ತದೆ.

ಅಪರಾಧಿಕ ಕಾನೂನುಗಳ ಮಹಿಳೆ ಪುರುಷರಿಬ್ಬರಿಗೂ ಸಮಾನವಾಗಿ ಅನ್ವಯವಾಗುವುದಾದರೂ, ದಂಡ ಪ್ರಕ್ರಿಯಾ ಸಂಹಿತೆ ಹಾಗೂ ಭಾರತ ದಂಡ ಸಂಹಿತೆಯಡಿ ಮಹಿಳೆಯರಿಗೆ ವಿಶೇಷ ರಕ್ಷಣೆ ನೀಡಲಾಗಿದೆ. ಇವು ಸ್ವಾತಂತ್ರ್ಯ ಪೂರ್ವದಿಂದಲೂ ಜಾರಿಯಲ್ಲಿವೆ. ಆದರೆ ಮಹಿಳೆಯರು ಎಲ್ಲ ಕ್ಷೇತ್ರಗಳಲ್ಲೂ ಮುನ್ನಡೆಯುತ್ತ ಬಂದಂತೆ ಈ ಉಪಬಂಧಗಳು ಅಷ್ಟೇನು ಅವರಿಗೆ ಉಪಯುಕ್ತವಾಗಲಿಲ್ಲ. ಮಹಿಳೆಯರ ಮೇಲೆ ಲೈಂಗಿಕ ಕಿರುಕುಳ, ಹಿಂಸೆ ಇವು ಹೆಚ್ಚಾಗುತ್ತಲೇ ಬರುತ್ತಿವೆ. ವರದಕ್ಷಿಣೆ ಸಾಮಾಜಿಕ ಪಿಡುಗು ಎಂಬಂತೆ ಭೂತಾಕಾರವಾಗಿ ಬೆಳೆದು ವಿವಾಹಿತ ಮಹಿಳೆಯರ ಆತ್ಮಹತ್ಯೆಗೆ, ವಧೂ ದಹನ, ಕೊಲೆ ಇತ್ಯಾದಿ ದೌರ್ಜನ್ಯಕ್ಕೆ ಕಾರಣವಾಗಿದೆ. ಈ ಜ್ವಲಂತ ಸಮಸ್ಯೆಗಳನ್ನು ಅತ್ಯಂತ ತೀವ್ರವಾಗಿ ಪರಿಗಣಿಸಬೇಕಾಗಿದ್ದು, ಮಹಿಳೆಯರ ಮೇಲೆ ನಡೆಯುವ ಅತ್ಯಾಚಾರ, ದೈಹಿಕ ಹಿಂಸೆ, ಮಾನಭಂಗಗಳನ್ನು ತಡೆಯಲು ಹಾಗೂ ಅಪರಾಧಿಗಳಿಗೆ ತೀವ್ರ ಶಿಕ್ಷೆ ವಿಧಿಸಲು ಅಪರಾಧಿಕ ಕಾನೂನು (ತಿದ್ದುಪಡಿ) ಅಧಿನಿಯಮ, ೧೯೮೩ ಮತ್ತು ಅಪರಾಧಿಕ

ಕಾನೂನು (ಎರಡನೇ ತಿದ್ದುಪಡಿ) ಅಧಿನಿಯಮ, ೧೯೮೩ ಇವುಗಳನ್ನು ಜಾರಿಗೊಳಿಸಲಾಯಿತು. ಇವುಗಳ ಮೂಲಕ ದಂಡ ಪ್ರಕ್ರಿಯಾ ಸಂಹಿತೆ ಭಾರತ ದಂಡ ಸಂಹಿತೆ ಹಾಗೂ ಭಾರತ ಸಾಕ್ಷ್ಯ ಅಧಿನಿಯಮಗಳಿಗೆ ತಿದ್ದುಪಡಿ ಮಾಡಲಾಗಿದೆ (ಇವುಗಳ ಬಗ್ಗೆ ಪ್ರತ್ಯೇಕ ಲೇಖನಗಳೇ ಬೇಕಾದೀತು).

**ಮಹಿಳೆ ಮತ್ತು ಕಾರ್ಮಿಕರ ಕಾನೂನುಗಳು**

ಅಸಂಖ್ಯಾತ ಮಹಿಳೆಯರು ಸೆಣಬು, ಜವಳಿ, ಗಣಿ, ಪ್ಲಾಂಟೇಷನ್ನುಗಳಲ್ಲಿ ಪುರುಷರಿಗೆ ಸಮಾನವಾಗಿ ಅಥವಾ ಇನ್ನೂ ಹೆಚ್ಚು ಕಷ್ಟಕರ ಪರಿಸ್ಥಿತಿಯಲ್ಲಿ ಕೆಲಸ ಮಾಡುತ್ತಿದ್ದಾರೆ. ಅಲ್ಲದೆ ವಿವಿಧ ಅಸಂಘಟಿತ ವಲಯದ ಕಾರ್ಖಾನೆಗಳಲ್ಲಿ (ಬೀಡಿ, ಊದು ಬತ್ತಿ, ರಾಸಾಯನಿಕ ವಸ್ತುಗಳು, ಪಟಾಕಿ ಇತ್ಯಾದಿ) ದುಡಿಯುವ ಮಹಿಳೆಯರಿಗೆ ಹಲವು ಹನ್ನೊಂದು ಸಂಕಷ್ಟಗಳು ಎದುರಾಗುತ್ತವೆ. ಇವುಗಳ ಪರಿಹಾರಕ್ಕೆಂದು ಅನೇಕ ವಿಶೇಷ ಉಪಬಂಧಗಳನ್ನು ಕಲ್ಪಿಸಲಾಗಿದೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಸೂಚಿಸಲಾಗಿದೆ.

೧. ಕಾರ್ಖಾನೆಗಳ ಅಧಿನಿಯಮ, ೧೯೪೮(ಅಪಾಯಕಾರ ಕಾರ್ಯಾಚರಣೆಗಳಲ್ಲಿ ಮಹಿಳೆಯರನ್ನು ತೊಡಗಿಸದಿರುವುದು)
೨. ಗಣಿಗಳ ಅಧಿನಿಯಮ ೧೯೫೨-ಮತ್ತು ಬೀಡಿ ಮತ್ತು ಸಿಗಾರ್ ಕಾರ್ಮಿಕರ (ನೌಕರಿ ಪರಿಸ್ಥಿತಿ) ಅಧಿನಿಯಮ, ೧೯೬೬ಗಳಲ್ಲಿ ಮಹಿಳಾ ಕಾರ್ಮಿಕರು ಸಂಜೆ ೭ ಗಂಟೆಯಿಂದ ಬೆಳಗ್ಗೆ ೬ ಗಂಟೆಯವರೆಗೆ ಹಾಗೂ ರಾತ್ರಿ ಹತ್ತರಿಂದ ಬೆಳಿಗ್ಗೆ ಐದು ಗಂಟೆಯವರೆಗೆ ಕೆಲಸ ಮಾಡದಿರುವಂತೆ ಉಪಬಂಧಿಸಲಾಗಿದೆ. ಹಾಗೂ ಶೌಚಾಲಯ, ಮಕ್ಕಳ ಪಾಲನಾ ಕೇಂದ್ರ, ಅರಾಮ ಕೊಠಡಿಗಳನ್ನು ಒದಗಿಸುವ ಬಗ್ಗೆ ಕೂಡ ಉಪಬಂಧ ಕಲ್ಪಿಸಲಾಗಿದೆ.
೩. ಪ್ರಸೂತಿ ಸೌಲಭ್ಯ ಅಧಿನಿಯಮ, ೧೯೬೧
೪. ಸಮಾನ ವೇತನ ಅಧಿನಿಯಮ, ೧೯೭೬
೫. ನೌಕಕರ ನಷ್ಟ ಪರಿಹಾರ ಅಧಿನಿಯಮ, ೧೯೨೩
೬. ಔದ್ಯಮಿಕ ವಿವಾದಗಳ ಅಧಿನಿಯಮ, ೧೯೪೭
೭. ಕನಿಷ್ಠ ಮಜೂರಿ ಅಧಿನಿಯಮ, ೧೯೪೮
೮. ನೌಕರರ ರಾಜ್ಯ ವಿಮಾ ಅಧಿನಿಯಮ, ೧೯೪೮
೯. ನೌಕರರ ಭವಿಷ್ಯ ನಿಧಿ ಮತ್ತು ಸಂಕೀರ್ಣ ಉಪಬಂಧಗಳ ಅಧಿನಿಯಮ, ೧೯೫೨ ಇತ್ಯಾದಿ.

**ಸಮಾಜ ಕಲ್ಯಾಣ ಶಾಸನಗಳು**

೦೧. ಶಿಶುವಿವಾಹ ಪ್ರತಿಬಂಧಕ ಅಧಿನಿಯಮ, ೧೯೨೯ (೧೯೭೮ರಲ್ಲಿ ತಿದ್ದುಪಡಿಯಲ್ಲಿ)
೦೨. ಅನೈತಿಕ ವ್ಯವಹಾರ ನಿಷೇಧ ಅಧಿನಿಯಮ, ೧೯೫೬
೦೩. ವರದಕ್ಷಿಣೆ ನಿಷೇಧ ಅಧಿನಿಯಮ, ೧೯೬೧

೦೪. ವೈದ್ಯಕೀಯ ಗರ್ಭಪಾತ ಅಧಿನಿಯಮ, ೧೯೭೨
೦೫. ಮಹಿಳೆಯರ ಅಸಭ್ಯ ಪ್ರದರ್ಶನ (ನಿಷೇಧ) ಅಧಿನಿಯಮ, ೧೯೮೬
೦೬. ಸತಿ(ನಿಷೇಧ) ಅಧಿನಿಯಮ, ೧೯೮೭
೦೭. ಲಿಂಗ ಪರೀಕ್ಷೆ ತಂತ್ರಗಳು (ನಿಯಂತ್ರಣ ಮತ್ತು ದುರುಪಯೋಗ ತಡೆಯುವುದು)ಅಧಿನಿಯಮ, ೧೯೯೪
೦೮. ಗಣಿಗಳ ಅಧಿನಿಯಮ, ೧೯೬೨
೦೯. ಮುಸ್ಲಿಂ ಮಹಿಳೆಯರ (ವಿವಾಹ ವಿಚ್ಛೇದನ ಹಕ್ಕುಗಳ ರಕ್ಷಣೆ) ಅಧಿನಿಯಮ, ೧೯೮೬
೧೦. ಮಾನವ ಹಕ್ಕುಗಳ ಅಧಿನಿಯಮ, ೧೯೯೩

ಈ ಮೇಲ್ಕಂಡ ಎಲ್ಲ ಅಧಿನಿಯಮಗಳಲ್ಲಿ ಮಹಿಳೆಯ ಸ್ಥಾನಮಾನ ಸ್ಥಿತಿಗತಿಗಳನ್ನು ಸುಧಾರಿಸುವ ಹಾಗೂ ಸಂವಿಧಾನದ ಪ್ರದತ್ತ ವೈಯಕ್ತಿಕ ಘನತೆಯನ್ನು ಸಮಾನ ಜೀವನವನ್ನು ಒದಗಿಸಲು ಉಪಬಂಧಗಳಿವೆ. ಎಲ್ಲಕ್ಕಿಂತ ಮುಖ್ಯವಾಗಿ ಮಹಿಳೆಯರನ್ನು ವ್ಯಕ್ತಿತ್ವ ಹೀನರನ್ನಾಗಿ ನೋಡುವ ಪುರುಷ ದೃಷ್ಟಿಕೋನದ ಕಾಮಾಲೆ ರೋಗಕ್ಕೆ ಚಿಕಿತ್ಸೆಯಾದರೆ ಮಹಿಳೆಯ ಜೀವನ ತನ್ನಿಂತಾನೆ ಉತ್ತಮಗೊಂಡೀತು ಎಂದು ಹಲವು ಮಹಿಳೆಯರು ಉದ್ಗಾರ ತೆಗೆಯುತ್ತಾರೆ. ಅದು ಕಷ್ಟ ಸಾಧ್ಯವೆಂಬುದು ಅರಿವಿಗೆ ಬಂದಾಗ ಮಹಿಳೆ ತಾನೇ ಎಚ್ಚೆತ್ತುಕೊಂಡು ತನ್ನ ಅಸ್ತಿತ್ವವನ್ನು ಸ್ವಯಂ ಪೂರ್ಣತೆಯನ್ನು ಸಾಧಿಸಲು ತಾನೇ ಸ್ವಾವಲಂಬಿಯಾಗಬೇಕು; ಎಂದರೆ ತನ್ನ ಸೌಲಭ್ಯಕ್ಕಾಗಿ ಇರುವ ಕಾನೂನುಗಳನ್ನು ಅರಿತು ಹಕ್ಕು ಸ್ಥಾಪನೆ ಮಾಡಬೇಕು, ಹೋರಾಡಬೇಕು ಎಂದಾದರೊಂದು ದಿನ ಜಯ ದೊರಕಿಸಿಕೊಳ್ಳುವ ಛಲ ಹೊಂದಿರಬೇಕು.

# ಕಾನೂನು ಮತ್ತು ನ್ಯಾಯ

*ಗೀತಾ ಕೃಷ್ಣಮೂರ್ತಿ*

ನಮ್ಮ ಸಮಾಜ ವ್ಯವಸ್ಥೆಯಲ್ಲಿ 'ನ್ಯಾಯ' ಮತ್ತು 'ಕಾನೂನು' ಬೇರ್ಪಡಿಸಲಾಗದಂಥ ಎರಡು ಪರಿಕಲ್ಪನೆಗಳು. ನ್ಯಾಯ ಎಂಬುದು ಸಮಾಜದ ಪರಮೋತ್ಕೃಷ್ಟ ಮೌಲ್ಯ. ನಮ್ಮ ಶಾಸ್ತ್ರಗಳಲ್ಲಿ 'ನ್ಯಾಯ'ವನ್ನು 'ಧರ್ಮ'ದೊಂದಿಗೆ ಮೇಳೈಸಿ ನೋಡಿದ್ದಾರೆ. ಇದೇ ಇಡೀ ವಿಶ್ವದ ಅಡಿಗಲ್ಲು ಎಂದೂ ಹೇಳಿದ್ದಾರೆ.

ದೇಶದ ಕಾನೂನು ತನ್ನ ಪ್ರಜೆಗಳಿಗೆ ನ್ಯಾಯವನ್ನು ದೊರಕಿಸಿಕೊಡುತ್ತದೆ ಅಥವಾ ದೊರಕಿಸಿಕೊಡಬೇಕು ಎಂಬ ಉದ್ದೇಶದಿಂದ ಕಾನೂನುಗಳನ್ನು ರೂಪಿಸಲಾಗಿರುತ್ತದೆ. ಆದ್ದರಿಂದ ಕಾನೂನುಗಳನ್ನು ಅನ್ವಯಿಸಿ ತಪ್ಪು ಸರಿಗಳ ನಿರ್ಣಯವನ್ನು ಮಾಡುವ ಸ್ಥಾನಗಳನ್ನೇ ನ್ಯಾಯ ನೀಡುವ ಆಲಯಗಳು ಎನ್ನುತ್ತೇವೆ. ನ್ಯಾಯವನ್ನು ಎತ್ತಿ ಹಿಡಿಯುವುದೇ ಕಾನೂನಿನ ಕರ್ತವ್ಯವಾಗಿದೆ ಎಂಬುದರಿಂದ ಹೀಗೆ ಹೇಳುತ್ತೇವೆ. ಆದರೆ ಅನೇಕ ಬಾರಿ ಕಾನೂನು ರಚನೆಯಲ್ಲಿಯೇ ಅನ್ಯಾಯ ಅಂತರ್ಗತವಾಗಿರುತ್ತದೆ. ಆದರೂ ಒಂದು ಸಾಮಾಜಿಕ ವ್ಯವಸ್ಥೆಯಲ್ಲಿ ಆ ಕಾನೂನು ಊರ್ಜಿತವಾಗಿರುತ್ತದೆ. ಆದ್ದರಿಂದ 'ಕಾನೂನು' ಏನನ್ನು ವಿಧಿಸುತ್ತದೆ ಅದೇ 'ನ್ಯಾಯ'ಎನ್ನಲಾಗದು. ಹಾಗೆಂದ ಮಾತ್ರಕ್ಕೆ ಕಾನೂನು ಹಾಗೂ ನ್ಯಾಯವನ್ನು ಸಂಪೂರ್ಣವಾಗಿ ಬೇರೆ ಮಾಡಲೂ ಆಗದು.

ಮನುಷ್ಯನಿಂದ ಮನುಷ್ಯನಿಗೆ ಲೆಕ್ಕವಿಲ್ಲದಷ್ಟು ಅನ್ಯಾಯಗಳು ಆಗುತ್ತಲೇ ಇವೆ ಎಂಬುದಕ್ಕಾಗಿ ಇಂದಿನ ನಾಗರಿಕ ಸಮಾಜಗಳು 'ನ್ಯಾಯ' ಒದಗಿಸಲು ಒಟ್ಟಾರೆಯಾಗಿ ಪ್ರಯತ್ನಿಸುತ್ತಿವೆ. ಸಮಾಜಗಳು, ಸಂಬಂಧಗಳು ಸಂಕೀರ್ಣವಾಗುತ್ತಾ ಹೋದಂತೆ, ಈ ಸಮಸ್ಯೆ ಬೃಹದಾಕಾರವಾಗಿ ಬೆಳೆಯುತ್ತಿದೆ. ಅನ್ಯಾಯ ಹೆಚ್ಚಾದಷ್ಟೂ ನ್ಯಾಯಕ್ಕಾಗಿನ ಹುಡುಕಾಟ, ಹೋರಾಟ ತೀವ್ರವಾಗುತ್ತಿದೆ.

ನಮ್ಮ ರಾಜಕೀಯ ವ್ಯವಸ್ಥೆಯಲ್ಲಿ ನ್ಯಾಯಾಂಗಕ್ಕೆ ಅತ್ಯುನ್ನತ ಸ್ಥಾನವಿದೆ. ಇದಕ್ಕೆ ಕಾರಣ ಅದು ಶ್ರೀ ಸಾಮಾನ್ಯನಿಗೂ 'ನ್ಯಾಯ'ದೊರಕಿಸಿಕೊಡುವ ಒಂದು ವ್ಯವಸ್ಥೆ ಎಂಬುದು. ಈ ನ್ಯಾಯಾಂಗ 'ಪ್ರಭುತ್ವ' ಎಂದರೆ ಸರ್ಕಾರವು ಜಾರಿಗೊಳಿಸುವ ಕಾನೂನುಗಳನ್ನು ಅನುಸರಿಸಿ ನ್ಯಾಯ ವಿತರಣೆ ಮಾಡುತ್ತದೆ. ಎಂದರೆ 'ನ್ಯಾಯ'ಎಂಬ ಪರಿಕಲ್ಪನೆಯ ಅಮೂರ್ತತೆಯನ್ನು ಹಾಗೂ ಅದಕ್ಕಿರುವ ವ್ಯಾಖ್ಯಾನಗಳನ್ನು ಸೀಮಿತಗೊಳಿಸಿ 'ನ್ಯಾಯ' ಕಾನೂನಿಗನುಗುಣವಾಗಿ ಇರಬೇಕು ಮತ್ತು ಇರುತ್ತದೆ ಎಂಬುದನ್ನು ಒಪ್ಪಿಕೊಂಡು,

ನ್ಯಾಯ ಮತ್ತು ಕಾನೂನುಗಳಿಗೆ ಸಂಬಂಧ ಕಲ್ಪಿಸಬೇಕಾಗುತ್ತದೆ ಮತ್ತು 'ನ್ಯಾಯ'ದ ಅನ್ವೇಷಣೆ ಕಾನೂನಿನ ಮೂಲ ಉದ್ದೇಶವಾಗಿರುತ್ತದೆ. ಹೀಗಾಗಿ ಕಾನೂನು ಕ್ರಮದ ಪೂರ್ಣ ಉದ್ದೇಶವೇ ನ್ಯಾಯಯುತವಾದ ತೀರ್ಮಾನಕ್ಕೆ ಬರುವುದು. ಆಯಾ ಸಮಯದಲ್ಲಿರುವ ಕಾನೂನುಗಳಿಗೆ ಅನುಸಾರವಾಗಿ ವ್ಯಕ್ತಿಯ ನಡುವೆ ಹಾಗೂ ವ್ಯಕ್ತಿ ಮತ್ತು ಸರ್ಕಾರದ ನಡುವೆ ಉಂಟಾಗುವ ವಿವಾದಗಳನ್ನು ನ್ಯಾಯಯುತವಾಗಿ ಬಗೆಹರಿಸುವುದು ನ್ಯಾಯಾಂಗ, ಎಂದರೆ ನ್ಯಾಯಾಧೀಶರು. ಅವರ ತೀರ್ಮಾನ ಅಧಿಕೃತ ತೀರ್ಮಾನವಾಗಿರುತ್ತದೆ ಎಂಬುದು ಸ್ವಯಂ ವೇದ್ಯ. ನ್ಯಾಯಾಧೀಶರು, ನ್ಯಾಯಾಲಯಗಳಲ್ಲಿ ಪರ ವಿರುದ್ಧ ಸಾಕ್ಷಿಗಳ ಉತ್ತರಗಳನ್ನು ಆಲಿಸಿ ಭಯಮುಕ್ತರಾಗಿ ನಿಷ್ಪಕ್ಷಪಾತವಾಗಿ ತೀರ್ಮಾನ ನೀಡಬೇಕು. ಎರಡೂ ಪಕ್ಷಕಾರರು ತಮ್ಮ ಪರವಾಗಿ ಆಗುವ ತೀರ್ಮಾನವೇ ನ್ಯಾಯಯುತವಾದದ್ದು ಎಂದು ಅನೇಕ ಬಾರಿ ಭಾವಿಸುವುದರಿಂದ, ನ್ಯಾಯಾಧೀಶರ ತೀರ್ಪು ಹೊರಬಿದ್ದ ನಂತರವೂ ಅದು ಒಬ್ಬ ಪಕ್ಷಕಾರನ ದೃಷ್ಟಿಯಿಂದ 'ಅನ್ಯಾಯ'ದ ತೀರ್ಮಾನವಾಗಿರಲು ಸಾಧ್ಯ. ಅಲ್ಲದೆ, ಸಮಾಜ ಒಪ್ಪಿರುವ 'ನ್ಯಾಯ'ದ ಮಾನ ದಂಡದಿಂದಲೂ 'ಅನ್ಯಾಯದ' ತೀರ್ಪು ಆಗಿರಲು ಸಾಕು. ಹೀಗೆ ನ್ಯಾಯ ಸಾಧಿಸಬೇಕು ಎಂಬ ಗುರಿಯಲ್ಲಿಯೇ ವೈಫಲ್ಯದ ಸಾಧ್ಯತೆ ಅಂತರ್ಗತವಾಗಿರುತ್ತದೆ. ಆದ್ದರಿಂದ ಬದಲಿಸಲಾಗದ ಅಧಿಕೃತ ತೀರ್ಮಾನ ನ್ಯಾಯಯುತವಾದುದು ಆಗಿಲ್ಲದಿರಬಹುದು. ಹಾಗೆಯೇ ಒಂದು ಕಾನೂನನ್ನು ಕ್ರಮಬದ್ಧವಾದ ರೀತಿಯಲ್ಲಿ ಹೊರಡಿಸಿದ್ದರೂ, ಅದು ಅಧಿಕೃತವಾದುದಾಗಿದ್ದರೂ ಅದು ನ್ಯಾಯಯುತವಾದುದು ಆಗಿಲ್ಲದಿರಬಹುದು. ಹೀಗೆ ನ್ಯಾಯ ಸಾಧನೆಯಲ್ಲಿ ಅನೇಕ ತೊಡಕುಗಳು. ಕಾನೂನಿನ ಮೂಲಕ 'ನ್ಯಾಯ' ದೊರಕಿಸಿ ಕೊಡಬೇಕೆನ್ನುವ ಉದ್ದೇಶಕ್ಕೆ ತೊಡಕುಗಳೆಂದರೆ ಕಾನೂನಿನಲ್ಲಿಯೇ ಇರುವ ದೋಷ.

ಕಾನೂನನ್ನು ಅನ್ವಯಿಸುವಲ್ಲಿನ ದೋಷ;
ಕಾನೂನಿನ ವ್ಯಾಖ್ಯಾನದಲ್ಲಿನ ದೋಷ;
ನ್ಯಾಯ ನೀಡಿಕೆಯಲ್ಲಿ ತೋರುವ ಪಕ್ಷಪಾತ; ಮತ್ತು
ಕಾನೂನು ರಚನೆಯ ಹಿಂದಿನ ಉದ್ದೇಶವನ್ನು ಗಣಿಸದೆಯೇ ಕಾನೂನನ್ನು ಕಟ್ಟುನಿಟ್ಟಾಗಿ ಅನ್ವಯಿಸುವುದು.

ಪಿತೃಪ್ರಧಾನ ಸಮಾಜ ವ್ಯವಸ್ಥೆಯಲ್ಲಿ ಮಹಿಳೆ ಇಂದಿಗೂ 'ಎರಡನೇ ಪ್ರಜೆಯಾಗಿಯೇ' ಪರಿಗಣಿತವಾಗುತ್ತಿದ್ದಾಳೆ. ನಮ್ಮ ಸಂವಿಧಾನ ಸ್ತ್ರೀ-ಪುರುಷರಿಗೆ ಸಮಾನ ಸ್ಥಾನಮಾನ ನೀಡಿರುವುದೇ ಅಲ್ಲದೆ ಸ್ತ್ರೀಯರಿಗೆ ಸಂಬಂಧಿಸಿದಂತೆ ವಿಶೇಷ ಸವಲತ್ತುಗಳನ್ನು ನೀಡಲೂ ರಾಜ್ಯಗಳಿಗೆ ಅಧಿಕಾರ ನೀಡುತ್ತದೆ. ಆದರೂ, ನಮ್ಮ ಕಾನೂನುಗಳ ರಚನೆಯಲ್ಲಿಯೇ ಸ್ತ್ರೀಪುರುಷರ ನಡುವೆ ತಾರತಮ್ಯವೆಸಗಿರುವುದನ್ನು ಕಾಣಬಹುದು. ಕಾನೂನುಗಳಲ್ಲಿರಲಿ ಸಾಮಾಜಿಕ ಚಿಂತನೆಯಲ್ಲಿಯೇ ಈ ತಾರತಮ್ಯ ಮನೋಭಾವ ಅಂತರ್ಗತವಾಗಿದೆ. ಹೆಣ್ಣುಮಗುವಿನ ಜನನವಾದ ಸಂದರ್ಭದಲ್ಲಿ ಹೆಣ್ಣು ಮಕ್ಕಳನ್ನು ಹೊರತುಪಡಿಸಿ ಪೌಷ್ಟಿಕ

ಆಹಾರವನ್ನು ಗಂಡುಮಕ್ಕಳಿಗೆ ಎತ್ತಿಟ್ಟು ಕೊಡುವ, ಮನೆಗೆಲಸಗಳನ್ನು ಹೆಣ್ಣುಮಕ್ಕಳೇ ಮಾಡಬೇಕೆನ್ನುವ, ಹೆಣ್ಣುಮಕ್ಕಳನ್ನು ಶಿಕ್ಷಣದಿಂದ ವಂಚಿತರನ್ನಾಗಿಸುವ, ಕೆಲಸದ ಸ್ಥಳಗಳಲ್ಲಿ ಲೈಂಗಿಕ ಕಿರುಕುಳಕ್ಕೆ ಒಳಗಾಗಿಸುವ ಹಾಗೂ ತಂದೆಯ ಆಸ್ತಿಯಿಂದ ವಂಚಿತರನ್ನಾಗಿಸುವ ಎಲ್ಲ ಸಂದರ್ಭಗಳಲ್ಲಿಯೂ ಪ್ರದರ್ಶಿತವಾಗಿರುವುದು ಈ ತಾರತಮ್ಯ ಮನೋಭಾವವೇ. ಈ ಮನೋಭಾವದಿಂದ ನಮ್ಮ ಕಾನೂನು ಶಿಲ್ಪಿಗಳೂ ಹೊರತಾಗಿಲ್ಲ ಎಂಬುದು ನಮ್ಮ ಕಾನೂನುಗಳನ್ನು ಸ್ಥೂಲವಾಗಿ ಅಧ್ಯಯನ ಮಾಡಿದರೂ ಸಾಕು ತಿಳಿಯುತ್ತದೆ. ಪುರುಷನಿಗಿಂತ ಮಹಿಳೆ ಕೀಳು ಎಂಬುದರಿಂದ ರೂಪುಗೊಂಡ ನಿಯಂತ್ರಣಗಳು ಕುಟುಂಬಗಳಲ್ಲಿ, ಸಾಮಾಜಿಕ ಸಂಬಂಧಗಳಲ್ಲಿ, ಧರ್ಮಗಳಲ್ಲಿ, ಕಾನೂನುಗಳಲ್ಲಿ, ಶಾಲೆಗಳಲ್ಲಿ, ಮಾಧ್ಯಮ ಗಳಲ್ಲಿ ಕಾರ್ಖಾನೆಗಳಲ್ಲಿ, ಕಚೇರಿಗಳಲ್ಲಿ ಹೀಗೆ ಎಲ್ಲೆಡೆ ಸರ್ವಾಂತರ್ಯಾಮಿಯಾಗಿ ಹರಡಿಕೊಂಡಿವೆ. ಆದರೆ ಈ ತಾರತಮ್ಯ ಮನೋಭಾವದಿಂದ ನ್ಯಾಯಾಧೀಶರು ಹೊರತಾಗಿರಬೇಕು. ಆದರೆ ಅನೇಕ ತೀರ್ಪುಗಳು ನ್ಯಾಯಾಧೀಶರೂ ಸಹ ಇಂಥ ಮನೋಭಾವದಿಂದ ಹೊರತಾಗಿಲ್ಲ ಎಂಬುದನ್ನು ಸಾಬೀತುಪಡಿಸುತ್ತವೆ. ತೀರ್ಪು ನೀಡುವಾಗ ಪುರುಷರಿಗೆ ಅನ್ವಯಿಸುವ ಮಾನದಂಡವೇ ಬೇರೆ ಸ್ತ್ರೀಯರಿಗೆ ಅನ್ವಯಿಸುವ ಮಾನದಂಡವೇ ಬೇರೆಯಾಗಿರುತ್ತದೆ ಎಂಬುದು ಮಹಿಳಾ ಸಂಬಂಧೀ ಪ್ರಕರಣಗಳಲ್ಲಿ ಹೊರಬಿದ್ದ ತೀರ್ಪುಗಳಿಂದ ಅವರ ಚಿಂತನಾ ಕ್ರಮಗಳಿಂದ ಸ್ಪಷ್ಟವಾಗುತ್ತದೆ. ಉದಾಹರಣೆಗೆ ಅತ್ಯಾಚಾರ ಪ್ರಕರಣದಲ್ಲಿ, ಅತ್ಯಾಚಾರಕ್ಕೆ ಒಳಗಾದ ಮಹಿಳೆಯ ಹೇಳಿಕೆಯ ಸತ್ಯಾಸತ್ಯತೆಯನ್ನು ಪರೀಕ್ಷಿಸುವಾಗ ಅವಳು Woman of easy virtue ಅಂದರೆ ಸುಲಭದಲ್ಲಿ ಶೀಲವನ್ನು ಬಿಡುವವಳು ಆಗಿದ್ದಳೇ ಎಂಬುದನ್ನು ವಿವಿಧ ನ್ಯಾಯಾಲಯಗಳು ತೀರ್ಪು ನೀಡುವಾಗ ಗಮನಿಸಿವೆ. ಹೌದು ಎಂದಾದರೆ ಅದು ಅವಳ ವಿರುದ್ಧದ ಸಾಕ್ಷಿಯಾಗುತ್ತದೆ. ಆದರೆ ಅದೇ ನ್ಯಾಯಾಂಗ ವ್ಯವಸ್ಥೆ, ಆ ಸಂದರ್ಭದಲ್ಲಿ ಪುರುಷನ ಚಾರಿತ್ರ್ಯವನ್ನು ಪ್ರಶ್ನಿಸುವುದಿಲ್ಲ. ಒಂದು ವೇಳೆ ಅವಳು ನಡೆತೆಗೆಟ್ಟವಳಾಗಿದ್ದರೂ ಸಹ ಆ ಅಂಶ ಅಪರಾಧಿಗೆ ವಿಧಿಸುವ ಶಿಕ್ಷೆಯನ್ನು ಕಡಿಮೆ ಮಾಡಲು ಪರಿಗಣಿಸುವಂಥ ಅಂಶವಾಗಬಾರದು ಮತ್ತು ಅತ್ಯಾಚಾರಕ್ಕೆ ಅಂಥ ಮಹಿಳೆ ಒಳಗಾಗಬಹುದಾದಂಥವಳಾಗಿರುತ್ತಾಳೆ ಎಂಬ ಅರ್ಥ ತೀರ್ಪಿನಿಂದ ಹೊರಬಿದ್ದರೂ ಅದು ಅಪಾಯಕಾರಿಯಾದಂಥದ್ದು. ಇಂಥ ತೀರ್ಪುಗಳಿಗೆ, ನ್ಯಾಯಾಧೀಶರು ಅದೇ ಪುರುಷ ಪ್ರಧಾನ ಚಿಂತನೆಯುಳ್ಳ ಸಮಾಜದ ಭಾಗ ಎಂಬುದು ಕಾರಣವಾದರೂ, ಇಂತಹ ಚಿಂತನೆಗೆ ಅತೀತವಾದ ಸಮತೋಲನ ದೃಷ್ಟಿಯನ್ನು ಬೆಳೆಸಿಕೊಳ್ಳುವುದು ಅನಿವಾರ್ಯವಾಗಬೇಕು ಎಂದೆನಿಸುವುದೂ ಇಂಥ ತೀರ್ಪುಗಳನ್ನು ನೋಡಿದಾಗ.

ಕುಟುಂಬಗಳಿಗೆ ಹಾಗೂ ಕುಟುಂಬದ ಹೊರಗೆ ಮಹಿಳೆ ಅನ್ಯಾಯಗಳಿಗೆ ಶೋಷಣೆಗೆ ಗುರಿಯಾಗುತ್ತಲೇ ಬಂದಿದ್ದಾಳೆ. ಹತ್ತೊಂಬತ್ತನೇ ಶತಮಾನದಲ್ಲಿ ಪ್ರಾರಂಭವಾದ ಸಮಾಜ ಸುಧಾರಣಾ ಚಳುವಳಿಗಳು, ರಾಷ್ಟ್ರೀಯತಾ ಹೋರಾಟದ ಕಾಲದಿಂದ ಹಿಡಿದು

ಇಂದಿನ ಮಹಿಳಾ ಚಳುವಳಿವರೆಗಿನ ಅವಧಿಯಲ್ಲಿಯೂ, ಮಹಿಳೆಗೆ ಪುರುಷನೊಂದಿಗೆ ಸಮಾನತೆ ದೊರಕಿಸಿಕೊಡಬೇಕಾದರೆ ಕಾನೂನು ಸುಧಾರಣೆಯಾಗಬೇಕು ಎಂಬ ಅಂಶವೇ ಪ್ರಾಮುಖ್ಯತೆಯನ್ನು ಪಡೆದಿದೆ. ಭಾರತದಲ್ಲಿ ಸಮಕಾಲೀನ ಸ್ತ್ರೀವಾದೀ ಚಳವಳಿಯ ದಾಖಲೆಯಾಗಿರುವ 'ಭಾರತದಲ್ಲಿ ಮಹಿಳೆಯ ಸ್ಥಾನಮಾನ ಕುರಿತ ಸಮಿತಿ'ಯು ೧೯೭೫ರಲ್ಲಿ 'ಸಮಾನತೆಯತ್ತ'ಎಂಬ ವರದಿಯನ್ನು ಸಲ್ಲಿಸಿತು. ಇದರಲ್ಲಿ ಸ್ತ್ರೀ-ಪುರುಷ ತಾರತಮ್ಯವಿಲ್ಲದ, ಸಮಾನತೆಯನ್ನು ಆದರಿಸುವ ಸಾಮಾಜಿಕ ವಾತಾವರಣ ಕಲ್ಪಿಸಬೇಕಾದರೆ ಕಾನೂನುಗಳಿಂದ ಹಾಗೂ ಕಾನೂನುಗಳ ಸುಧಾರಣೆಯಿಂದ ಸಾಧ್ಯ ಎಂಬ ಅಭಿಪ್ರಾಯ ವ್ಯಕ್ತವಾಗಿದೆ. ಸಾಮಾಜಿಕ ಅಭಿಪ್ರಾಯ ರೂಪಿಸುವ ಮೂಲಕ ನೇರವಾಗಿ, ಹಾಗೂ ಸಾಮಾಜಿಕ ಬದಲಾವಣೆಗಳನ್ನು ಶೀಘ್ರವಾಗಿ ಒಪ್ಪಿಕೊಳ್ಳುವಂತೆ ಮಾಡಬಲ್ಲ, ಕಾನೂನು ಜಾರಿಗೊಳಿಸುವ ವ್ಯವಸ್ಥೆಗಳನ್ನು ಒದಗಿಸುವ ಮೂಲಕ ಪರೋಕ್ಷವಾಗಿ ಕಾನೂನುಗಳು ಕೆಲಸ ಮಾಡಬಲ್ಲವು ಎಂದು ಅಭಿಪ್ರಾಯಪಡಲಾಗಿದೆ.

ಮಹಿಳೆಯರ ಮೇಲೆ ನಡೆಯುತ್ತಿರುವ ದೌರ್ಜನ್ಯಗಳ ವಿರುದ್ಧ ದನಿಯೆತ್ತಿದ್ದ ಮಹಿಳಾ ಚಳುವಳಿಗಳು ಕಾನೂನುಗಳಲ್ಲಿ ಇರುವ ನ್ಯೂನತೆಗಳ ಹಾಗೂ ಆಗಬೇಕಿರುವ ತಿದ್ದುಪಡಿಗಳ ಬಗ್ಗೆ ಒತ್ತಾಯಿಸುತ್ತಲೇ ಬಂದಿವೆ. ಇದರ ಪರವಾಗಿ ಮಹಿಳಾ ಸಂಬಂಧಿ ಕಾನೂನುಗಳಲ್ಲಿ ಹಾಗೂ ಇತರ ಕಾನೂನುಗಳಲ್ಲಿರುವ ಮಹಿಳೆಯರಿಗೆ ಸಂಬಂಧಿಸಿದ ಉಪಬಂಧಗಳಲ್ಲಿ ಗಮನೀಯ ಬದಲಾವಣೆಗಳೂ ಆಗಿವೆ. ಅತ್ಯಾಚಾರಕ್ಕೆ ಸಂಬಂಧಿಸಿದ ಕಾನೂನಿನಲ್ಲಿ ತಂದ ತಿದ್ದುಪಡಿಗೆ ಕಾರಣವಾದ ಮಥುರಾ ಅತ್ಯಾಚಾರ ಪ್ರಕರಣ ದೇಶಾದ್ಯಂತ ಸುದ್ದಿಮಾಡಿತು.

ಮಥುರಾ ಎಂಬ ತನ್ನ ೧೫ ವರ್ಷದ ತಂಗಿಯನ್ನು ಅವಳ ಪ್ರಿಯತಮ ಅಪಹರಿಸಿದ್ದಾನೆಂದು ಮಥುರಾಳ ಅಣ್ಣ ದೂರು ನೀಡಿದ್ದ. ದೂರಿನ ವಿಚಾರಣೆಗಾಗಿ ಮಥುರಾ ಹಾಗೂ ಅವಳ ಪ್ರಿಯತಮನನ್ನು ಠಾಣೆಗೆ ಕರೆಸಲಾಗಿತ್ತು. ಹುಡುಗಿಯ ಅಣ್ಣ ಹಾಗೂ ಪ್ರಿಯತಮನ ಮುಂದೆಯೇ ಅವಳನ್ನು ಪೋಲೀಸು ಪೇದೆಯೊಬ್ಬ ಠಾಣೆಯೊಳಕ್ಕೆ ಎಳೆದೊಯ್ದು ಅವಳ ಮೇಲೆ ಇಬ್ಬರು ಪೋಲೀಸು ಪೇದೆಗಳು ಅತ್ಯಾಚಾರವೆಸಗಿದರು. ಪೋಲೀಸರ ಕೃತ್ಯಕ್ಕೆ ಮಥುರಾ ವಿರೋಧ ವ್ಯಕ್ತಪಡಿಸಲಿಲ್ಲ. ಸಹಾಯಕ್ಕಾಗಿ ಕೂಗಿಕೊಳ್ಳಲಿಲ್ಲ ಎಂಬ ಅಂಶವನ್ನು ಆಧರಿಸಿ ಅಧೀನ ನ್ಯಾಯಾಲಯ ಅಪರಾಧಿಗಳನ್ನು ಖುಲಾಸೆ ಮಾಡಿತು. ಆದರೆ, ಪೋಲೀಸರ ಹೆದರಿಕೆಯಿಂದ ಸುಮ್ಮನಿದ್ದುದನ್ನು 'ಸಮ್ಮತಿ'ಎಂದು ಭಾವಿಸಬಾರದು ಎಂಬ ಅಭಿಪ್ರಾಯ ವ್ಯಕ್ತಪಡಿಸಿ ಉಚ್ಚ ನ್ಯಾಯಾಲಯ ಅವರನ್ನು ಅಪರಾಧಿಗಳೆಂದು ನಿರ್ಣಯಿಸಿತು. ಆದರೆ ಮಥುರಾ ಪೋಲೀಸರ ಕೃತ್ಯಕ್ಕೆ ವಿರೋಧ ವ್ಯಕ್ತಪಡಿಸದಿರುವುದನ್ನು 'ಸಮ್ಮತಿ' ಎಂದು ಅರ್ಥೈಸಿ ಸರ್ವೋಚ್ಚ ನ್ಯಾಯಾಲಯ ಮತ್ತೆ ಅಪರಾಧಿಗಳನ್ನು ಬಿಡುಗಡೆ ಮಾಡಿತು.

ಸರ್ವೋಚ್ಚ ನ್ಯಾಯಾಲಯದ ಈ ತೀರ್ಪಿಗೆ ದೇಶಾದಾದ್ಯಂತ ಸಾರ್ವಜನಿಕರ ವಿರೋಧ ವ್ಯಕ್ತವಾಯಿತು. ಮಹಿಳಾ ವಾದಿಗಳೂ ಮಹಿಳಾ ಸಂಘಟನೆಗಳೂ ಕಾನೂನುವೇತ್ತರೂ ಈ

ತೀರ್ಪಿನ ವಿರುದ್ಧ ತಮ್ಮ ದನಿಯೆತ್ತಿದರು.

ಅತ್ಯಾಚಾರ ನಡೆಯುವುದು ಜನರಿಂದ ದೂರವಾದ ಸ್ಥಳಗಳಲ್ಲಿ ಇಲ್ಲವೇ ಯಾರೂ ಇಲ್ಲದಿದ್ದಾಗ ನಾಲ್ಕು ಗೋಡೆಗಳ ನಡುವೆ. ಇಂಥ ಒಂದು ಅಪರಾಧಕ್ಕೆ ಪ್ರತ್ಯಕ್ಷ ಸಾಕ್ಷಿಗಳು ದೊರೆಯುವ ಸಂಭವ ಇಲ್ಲವೇ ಇಲ್ಲವೆನ್ನಬಹುದು. ಮೇಲಿನ ಸಂದರ್ಭದಲ್ಲಂತೂ, ಮಥುರಾ ೧೫ ವರ್ಷಗಳ ಬಾಲೆ. ತನ್ನ ಮೇಲೆ ಎರಗುತ್ತಿರುವವರು ಪೋಲೀಸರು ಎಂಬ ಭಯದಿಂದಲೇ ಅವಳ ಶಕ್ತಿ ಉಡುಗಿ ಹೋಗಿರುತ್ತದೆ. ಅಲ್ಲದೆ ಇಬ್ಬರು ಪುರುಷರ ಬಲಿಷ್ಠ ಬಾಹುಗಳಿಗೆ ಅವಳು ಯಾವ ರೀತಿಯ ವಿರೋಧವನ್ನು ವ್ಯಕ್ತಪಡಿಸಲಿಲ್ಲ ಎಂಬುದೇ ಅಪರಾಧಿಗಳ ಖುಲಾಸೆಗೆ ಸಾಕಷ್ಟು ಸಾಕ್ಷ್ಯವಾಗಬಹುದೆ? ರಾಷ್ಟ್ರದ ಅತ್ಯುನ್ನತ ನ್ಯಾಯವಿತರಣೆಯ ಆಲಯದಲ್ಲಿಯೇ ಇಂಥ ಒಂದು 'ಅನ್ಯಾಯ'ದ ತೀರ್ಪು ಹೊರಬಿತ್ತೆಂದರೆ ದೋಷವಿರುವುದು ಕಾನೂನು ರಚನೆಯಲ್ಲಿಯೇ, ನ್ಯಾಯ ವಿತರಣಾ ವ್ಯವಸ್ಥೆಯಲ್ಲಿಯೇ ಕಾನೂನಿನ ವ್ಯಾಖ್ಯಾನದಲ್ಲಿಯೇ ಅಥವಾ ತನಿಖಾ ಕಾರ್ಯವಿಧಾನದಲ್ಲಿಯೇ?

ಈ ಪ್ರಕರಣ ಅಪರಾಧಿಕ ಕಾನೂನಿನ ತಿದ್ದುಪಡಿಗೆ ಕಾರಣವಾಯಿತು ನಿಜ. ತನ್ನ ಮೇಲೆ ಅತ್ಯಾಚಾರ ನಡೆಯಿತು, ಅದಕ್ಕೆ ತನ್ನ ಸಮ್ಮತಿಯಿರಲಿಲ್ಲ ಎಂಬುದನ್ನು ಅತ್ಯಾಚಾರಕ್ಕೊಳಗಾದ ಮಹಿಳೆಯೇ ರುಜುವಾತು ಪಡಿಸಬೇಕಿದ್ದ ಮಾನಸಿಕ ಹಿಂಸೆಯಿಂದ ಅವಳಿಗೆ ಮುಕ್ತಿ ದೊರೆಯಿತು. ಮಥುರಾ ಪ್ರಕರಣದ ನಂತರ ಆದ ತಿದ್ದುಪಡಿಯಿಂದ, ತನ್ನ ಮೇಲೆ ಅತ್ಯಾಚಾರ ನಡೆಯಿತೆಂದು ಮಹಿಳೆ ಹೇಳಿಕೆ ನೀಡಿದರೆ, ತಾನು ಅತ್ಯಾಚಾರ ನಡೆಸಿಲ್ಲವೆಂಬುದನ್ನು ರುಜುವಾತು ಪಡಿಸುವ ಹೊಣೆ ಈಗ ಆರೋಪಿಯ ಮೇಲಿರುತ್ತದೆ.

ಆದರೆ ಮಥುರಾ ಪ್ರಕರಣಕ್ಕೆ ಮುಂಚೆಯೇ ಸಮ್ಮತಿಯ ವಿಷಯವಾಗಿ ಪೂರ್ವ ನಿದರ್ಶನವಿತ್ತೆಂದರೆ ಬಹು ಜನರಿಗೆ ಆಶ್ಚರ್ಯವಾದೀತು. ೧೯೫೮ರಷ್ಟು ಹಿಂದೆಯೇ ರಾವ್ ಹರಿನಾರಾಯಣಸಿಂಗ್ ಪ್ರಕರಣದಲ್ಲಿ ಸರ್ವೋಚ್ಚನಾಯಾಲಯ ಕೊಟ್ಟ ತೀರ್ಪು ಅತ್ಯಾಚಾರ ಪ್ರಕರಣದ 'ಸಮ್ಮತಿ'ಯ ಬಗ್ಗೆ ಸಿದ್ಧ ದೃಷ್ಟಿಕೋನವನ್ನು ಹಾಕಿಕೊಟ್ಟಿತ್ತು. ಹಾಗೆ ನೋಡಿದರೆ ಮಥುರಾ ಪ್ರಕರಣದ ತೀರ್ಪು ಇದಕ್ಕೆ ವಿರುದ್ಧವಾಗಿತ್ತು. ಅದು ಸಾಮಾಜಿಕವಾಗಿ ಒಪ್ಪಿತವಾದ 'ನ್ಯಾಯ'ದ ವಿರುದ್ಧ ನೀಡಿದ ತೀರ್ಪು ಆಗಿತ್ತಾದ್ದರಿಂದ ಅದಕ್ಕೆ ಸಾರ್ವಜನಿಕ ವಿರೋಧ ವ್ಯಕ್ತವಾಯಿತು. ರಾವ್ ಹರಿನಾರಾಯಣ ಸಿಂಗ್ ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯ ಹೀಗೆ ಅಭಿಪ್ರಾಯಪಟ್ಟಿತ್ತು.

“ಭಯದಿಂದ ಅಥವಾ ಬಲಾತ್ಕಾರದಿಂದ ಇಚ್ಛಾಶಕ್ತಿ ಉಡುಗಿ ಹೋದಾಗ, ಅನಿವಾರ್ಯತೆಯಿಂದ ನಿಶ್ಚೇಷ್ಟತಳಾಗಿ ವಿರೋಧ ವ್ಯಕ್ತಪಡಿಸದೆ ಅಸಹಾಯಕಳಾಗಿ ತನ್ನನ್ನು ಒಪ್ಪಿಕೊಳ್ಳುವುದನ್ನು 'ಸಮ್ಮತಿ' ಎಂದು ಭಾವಿಸಬಾರದು. ಅತ್ಯಾಚಾರದ ಆರೋಪಕ್ಕೆ ಪ್ರತಿರಕ್ಷೆಯಾಗಿ ಮಹಿಳೆಯ ಸಮ್ಮತಿಯಿತ್ತು ಎಂದಾಗ, ವಿರೋಧ ಮತ್ತು ಒಪ್ಪಿಗೆಯ ಬಗ್ಗೆ ಆಲೋಚಿಸಿ ಸ್ವಯಿಚ್ಛೆಯಿಂದ ಭಾಗವಹಿಸಿದ್ದಾಳೆ ಎಂಬುದು ರುಜುವಾತಾಗಬೇಕಾಗುತ್ತದೆ. ಹೆದರಿಕೆಗೆ ಒಳಗಾದಾಗ ತನ್ನ ದೇಹವನ್ನು ಒಪ್ಪಿಸಿದರೆ ಅದು ಸಮ್ಮತಿ ಎನಿಸುವುದಿಲ್ಲ. 'ಸಮ್ಮತಿ'ಗೂ 'ಒಪ್ಪಿಸುವಿಕೆ'ಗೂ ವ್ಯತ್ಯಾಸವಿದೆ. 'ಸಮ್ಮತಿ'

ಎಂದಾಗ ಅದು ಒಪ್ಪಿಸುವುದನ್ನು ಒಳಗೊಂಡರೂ 'ಒಪ್ಪಿಸುವುದು' ಎಂದಾಗ ಅದು 'ಸಮ್ಮತಿ'ಯನ್ನು ಒಳಗೊಳ್ಳುವುದಿಲ್ಲ'.

'ಸಮ್ಮತಿ'ಇತ್ತು ಎಂದು ಯಾವಾಗ ಪರಿಗಣಿಸಬೇಕಾಗುತ್ತದೆ ಎಂಬುದರ ಬಗ್ಗೆ ಸರ್ವೋಚ್ಚನ್ಯಾಯಾಲಯ ನೀಡಿದ ಈ ತೀರ್ಪನ್ನು ತಿದ್ದುಪಡಿಗೆ ಮುನ್ನ, ಅನಂತರದ ಅನೇಕ ತೀರ್ಪುಗಳಲ್ಲಿ ಪೂರ್ವ ನಿದರ್ಶನವಾಗಿ ಅನುಸರಿಸಲಾಗಿತ್ತು. ಆದರೆ ನ್ಯಾಯಾಲಯದ ತೀರ್ಪುಗಳಲ್ಲಿ ಏಕರೂಪತೆ ಇರಲಿಲ್ಲ. ಅತ್ಯಾಚಾರದ ಪ್ರಕರಣಗಳಲ್ಲಿ ಹೊರಬೀಳುವ ತೀರ್ಪು ಯಾವ ಪಕ್ಷದ ಪರವಾಗಿರಬಹುದು ಎಂಬುದನ್ನು ಯಾರಿಗೂ ಊಹಿಸಲಾಗುವುದಿಲ್ಲ. ಏಕೆಂದರೆ ತೀರ್ಪು ಆಯಾ ನ್ಯಾಯಾಧೀಶರ ದೃಷ್ಟಿಕೋನವನ್ನು ಅವಲಂಬಿಸಿರುತ್ತದೆ.

ನ್ಯಾಯ ನೀಡುವ ದೇಶದ ಅತ್ಯುನ್ನತ ಅಂಗವಾಗಿ ಸರ್ವೋಚ್ಛ ನ್ಯಾಯಾಲಯದ ತೀರ್ಪು ಬದಲಿಸಲಾಗದ ತೀರ್ಪು ಮೇಲ್ಮನವಿಗೆ ಅವಕಾಶವಿರದ ತೀರ್ಪು ನ್ಯಾಯಯುತ ವಾದುದಾಗಿಲ್ಲದೇ ಹೋಗಬಹುದು. ಇದಕ್ಕೆ ಕಾರಣವಾಗುವುದು ಜಾರಿಯಲ್ಲಿರುವ ಕಾನೂನಿಗಿಂತ ಹೆಚ್ಚಾಗಿ, ಕಾನೂನನ್ನು ಅನ್ವಯಿಸಿ 'ನ್ಯಾಯ'ಯಾವುದೆಂಬುದನ್ನು ನಿರ್ಧಾರ ಮಾಡಿ 'ಇದಮಿತ್ಥಂ' ಎಂದು ಹೇಳುವ ಸ್ಥಾನದಲ್ಲಿರುವ ನ್ಯಾಯಾಧೀಶರ ವಿವೇಚನಾ ಸಾಮರ್ಥ್ಯ.

ಮೇಲೆ ಹೇಳಿದಂಥ ಪ್ರಕರಣಗಳಲ್ಲಿ, ಕುಟುಂಬ ವಿವಾದಗಳಲ್ಲಿ ತೀರ್ಪು ನೀಡಿದಾಗ ನ್ಯಾಯಾಧೀಶರ ವಿವೇಚನೆಗೆ ಹೆಚ್ಚು ಮಹತ್ವ. ನ್ಯಾಯಿಕ ವಿವೇಚನೆಯ ಅಗತ್ಯವಿಲ್ಲದಂತೆ ಕಾನೂನುಗಳನ್ನು ರಚಿಸಬೇಕಾದರೆ ಏನೆಲ್ಲ ಅಂಶಗಳನ್ನು ಪರಿಗಣಿಸಬೇಕು ಎಂಬ ಬಗ್ಗೆ ಬಹಳಷ್ಟು ಹಿಂದಿನಿಂದಲೂ ಪ್ರಯತ್ನಗಳು ನಡೆಯುತ್ತಲೇ ಇವೆ. ಆದರೆ ಕಾನೂನಿನಲ್ಲಿ ಉಪಬಂಧ ಕಲ್ಪಿಸಿಲ್ಲದ ಹಾಗೂ ಕಾನೂನಿನಿಂದ ಮಾರ್ಗದರ್ಶನ ದೊರೆಯದಂಥ ಅಂಶಗಳು ಕೆಲವಾದರೂ ಪ್ರಕರಣಗಳಲ್ಲಿ ಮತ್ತೆ ಮತ್ತೆ ತಲೆದೋರುತ್ತದೆ. ಅಂಥ ಸಂದರ್ಭಗಳಲ್ಲಿ ಕೈಹಿಡಿದು ಮುನ್ನಡೆಸುವ ಶಕ್ತಿ ಎಂದರೆ ನ್ಯಾಯಿಕ ವಿವೇಚನೆಯೇ.

ಇದು ಅಸಾಧ್ಯವಾದ ಕೆಲಸವಲ್ಲವಾದರೂ ಕಷ್ಟದ ಕೆಲಸ. ನ್ಯಾಯಾಧೀಶರು Men of Wisdom ಆದಾಗ ಈ ವಿವೇಚನೆಯ ದುರುಪಯೋಗ ಆಗುವುದಿಲ್ಲ. ವಿವೇಚನೆಯನ್ನು ಬಳಸಬೇಕಾದ ಸಂದರ್ಭ ಬಂದಾಗಲೆಲ್ಲ ನೆರವಿಗೆ ಬರುವುದು 'ಪೂರ್ವ ನಿದರ್ಶನಗಳು. 'Treat like cases alike' ಇದು ನ್ಯಾಯ ವಿತರಣೆಯ ದಿಕ್ಸೂಚಿ. ಒಂದು ಪ್ರಕರಣಕ್ಕೆ ಸಂಬಂಧಿಸಿದಂತೆ ಪೂರ್ವ ನಿದರ್ಶನವಿದೆ ಎಂದ ಮಾತ್ರಕ್ಕೆ ಅಲ್ಲಿ ಪ್ರಸ್ತುತ ನ್ಯಾಯಾಧೀಶರ ವಿವೇಚನೆಯ ಅಗತ್ಯ ಇಲ್ಲವೆಂದಾಗಲೀ ಬಳಸಬಾರದೆಂದಾಗಲೀ ಅಲ್ಲ. ಅದೇ ಬಗೆಯ ಪ್ರಕರಣದಲ್ಲಿ ಹಿಂದೆ ನೀಡಲಾದ ತೀರ್ಪು 'ತನ್ನ ವಿವೇಚನೆಯ ಮೂಸೆ'ಯಲ್ಲಿಯೂ ಗೆದ್ದು ಬರಬೇಕು. ಹಾಗೆ ಆದಾಗ 'ಪೂರ್ವ ನಿದರ್ಶನವನ್ನು ತಾನು ನೀಡಿದ ತೀರ್ಪಿಗೆ ಸಮರ್ಥನೆಯಾಗಿ ಬಳಸಬಹುದು. ಇಲ್ಲವಾದಲ್ಲಿ ಪೂರ್ವ ನಿದರ್ಶನದಲ್ಲಿ ನೀಡಿದ ತೀರ್ಪಿನಿಂದ ಭಿನ್ನವಾಗಿ ತೀರ್ಪನ್ನು ನೀಡುವ ಅವಕಾಶ ನ್ಯಾಯಾಧೀಶರಿಗೆ ಇದ್ದೇ ಇರುತ್ತದೆ.

ಶಾಬಾನು ಎಂಬ ಮುಸ್ಲಿಂ ಮಹಿಳೆಯ ಪ್ರಕರಣ ದೇಶಾದ್ಯಂತ ಸುದ್ದಿ ಮಾಡಿದ ಮತ್ತೊಂದು ಪ್ರಕರಣ. ನಲವತ್ನಾಲ್ಕು ವರ್ಷಗಳ ಕಾಲ ತನ್ನೊಂದಿಗೆ ಜೀವನ ನಡೆಸಿದ ಶಾಬಾನು ಪತಿ ವಿಚ್ಛೇದನೆ ನೀಡಿದರು. ಶಾಬಾನು ತನ್ನ ವೃದ್ಧಾಪ್ಯದಲ್ಲಿ ೧೯೭೫ರಲ್ಲಿ ಕ್ರಿಮಿನಲ್ ಪ್ರಕ್ರಿಯೆ ಸಂಹಿತೆಯ ೧೨೫ನೇ ಪ್ರಕರಣದ ಮೇರೆಗೆ ಪತಿಯಿಂದ ಜೀವನಾಂಶ ಕೋರಿ ಇಂದೂರಿನ ನ್ಯಾಯಾಲಯದ ಮೊರೆ ಹೊಕ್ಕರು. ನ್ಯಾಯಾಲಯ ೧೯೭೯ರಲ್ಲಿ ಆಕೆಗೆ ೨೫ರೂ.ಗಳ ಮಾಶಾಸನ ನಿಗದಿಪಡಿಸಿ ತೀರ್ಪು ನೀಡಿತು. ಪತಿಯ ವಾರ್ಷಿಕ ಆದಾಯ ೬೦,೦೦೦ ರೂಪಾಯಿಗಳಿರುವುದರಿಂದ ಜೀವನಾಂಶದ ಮೊತ್ತವನ್ನು ಹೆಚ್ಚಿಸಬೇಕೆಂದು ಕೋರಿ ಶಾಬಾನು ಪುನಃ ಮಧ್ಯಪ್ರದೇಶ ಉಚ್ಚ ನ್ಯಾಯಾಲಯಕ್ಕೆ ರಿಟ್ ಅರ್ಜಿ ಸಲ್ಲಿಸಿದರು. ಅಲ್ಲಿ ಆಕೆಗೆ ೧೭೯-೨೦ರೂ.ಗಳ ಮಾಸಾಶನವನ್ನು ನಿಗದಿಪಡಿಸಲಾಯಿತು. ಈ ತೀರ್ಪನ್ನು ಪ್ರಶ್ನಿಸಿ ಪತಿ ಮೊಹಮದ್ ಅಹಮದ್ ಖಾನ್ ಸರ್ವೋಚ್ಚ ನ್ಯಾಯಾಲಯಕ್ಕೆ ಅಪೀಲು ಸಲ್ಲಿಸಿದರು. ಸರ್ವೋಚ್ಚ ನ್ಯಾಯಾಲಯ ೧೯೮೫ರಲ್ಲಿ ಮಧ್ಯಪ್ರದೇಶ ಉಚ್ಚ ನ್ಯಾಯಾಲಯದ ತೀರ್ಪನ್ನು ಎತ್ತಿ ಹಿಡಿದು ಪತಿಯಾಗಿದ್ದವನು ವಿಚ್ಛೇದಿತ ಪತ್ನಿಗೆ ಕ್ರಿಮಿನಲ್ ಪ್ರಕ್ರಿಯಾ ಸಂಹಿತೆಯ ೧೨ನೇ ಪ್ರಕರಣದ ಮೇರೆಗೆ ಆಕೆ ಬೇರೆ ವಿವಾಹವಾಗುವವರೆಗೆ ಜೀವನಾಂಶ ನೀಡಬೇಕು ಎಂದು ತೀರ್ಪು ನೀಡಿತು. ತನ್ನ ತೀರ್ಪಿಗೆ ಸಮರ್ಥನೆಯಾಗಿ ಕುರಾನ್ ಭಾಗವನ್ನು ಉದ್ಧರಿಸಿತು.

ಶಾಬಾನು ಪ್ರಕರಣಕ್ಕೂ ಮೊದಲು ಅನೇಕ ವಿಚ್ಛೇದಿತ ಮುಸ್ಲಿಂ ಮಹಿಳೆಯರು ಕ್ರಿಮಿನಲ್ ಪ್ರಕ್ರಿಯಾ ಸಂಹಿತೆಯ ೧೨೫ನೇ ಪ್ರಕರಣದ ಅಡಿಯಲ್ಲಿ ಜೀವನಾಂಶ ಪಡೆಯುತ್ತಿದ್ದರು. ವಿವಾಹ, ಜೀವನಾಂಶ, ದತ್ತಕ ಆಸ್ತಿಹಕ್ಕು ಮುಂತಾದುವುಗಳಿಗೆ ಸಂಬಂಧಿಸಿದಂತೆ ಅಯಾ ಧರ್ಮದ ಕಾನೂನುಗಳು ಅನ್ವಯಿಸಿದರೂ, ಕ್ರಿಮಿನಲ್ ಪ್ರಕ್ರಿಯಾ ಸಂಹಿತೆ ದೇಶದ ಸಮಸ್ತ ನಾಗರಿಕರಿಗೂ ಏಕಪ್ರಕಾರವಾಗಿ ಅನ್ವಯವಾಗುವಂಥ ಕಾನೂನು. ಆದರೆ ಇಲ್ಲಿ ಕುರಾನ್ ಅನ್ನು ಉಲ್ಲೇಖಿಸಿದುದು ಮುಸ್ಲಿಂ ಮೂಲಭೂತ ವಾದಿಗಳ ಆಕ್ರೋಶಕ್ಕೆ ಕಾರಣವಾಯಿತು. ಇಸ್ಲಾಂ ಧರ್ಮದ ವೈಯಕ್ತಿಕ ಕಾನೂನಿನ್ವಯ ಪತಿ ಪತ್ನಿಗೆ 'ತಲಾಕ್ 'ಕೊಟ್ಟ ನಂತರ ಮೂರು ತಿಂಗಳ ಕಾಲ ಮಾತ್ರ ('ಇದ್ದತ್ 'ಅವಧಿ) ಜೀವನಾಂಶ ನೀಡಲು ಬದ್ಧನಾಗಿರುತ್ತಾನೆ. ಇದನ್ನು ಮತ್ತು ವಿವಾಹ ಕಾಲದಲ್ಲಿ ಅವಳಿಂದ ಪಡೆದ ಧನವನ್ನು('ಮೆಹರ್') ಹಿಂತಿರುಗಿಸಿದ ನಂತರ ಜೀವನಾಂಶವನ್ನು ಕೊಡಬೇಕಿಲ್ಲ ಎಂಬುದು ಅವರ ವಾದ. ಈ ಸಂಬಂಧದಲ್ಲಿ ಮುಸ್ಲಿಂ ಮೂಲಭೂತವಾದಿಗಳ ಒತ್ತಾಯಕ್ಕೆ ಮಣಿದು, ರಾಜೀವಗಾಂಧಿ ಸರ್ಕಾರ ೧೯೮೬ರಲ್ಲಿ 'ಮುಸ್ಲಿಂ ಮಹಿಳೆಯರ ವಿಚ್ಛೇದನಾ ಹಕ್ಕುಗಳ ಸಂರಕ್ಷಣಾ ಅಧಿನಿಯಮ'ವನ್ನು ಜಾರಿಗೆ ತಂದಿತು. ಇದರ ಮೂಲ ಉದ್ದೇಶವೇ ಮುಸ್ಲಿಂ ವಿಚ್ಛೇದಿತ ಮಹಿಳೆಯರ ಹಕ್ಕನ್ನು ಮೊಟಕುಗೊಳಿಸುವುದಾಗಿತ್ತು. ಈ ಅಧಿನಿಯಮ ಜಾರಿಯಾದ ನಂತರ, ಇದರ ಅಡಿಯಲ್ಲಿ ಮೊತ್ತ ಮೊದಲನೆಯ ತೀರ್ಪು ಹೊರಬಿದ್ದದ್ದು ೧೯೮೮ರ ಜನವರಿ ೬ರಂದು. ಫಾಮಿದಾ ಸರ್ದಾರ್ ತನ್ನ ಗಂಡ ಶಾಫಿಯತ್ ಅಹ್ಮದ್

ವಿರುದ್ಧ ಲಕ್ನೋವಿನ ಮುನ್ಸಿಫ್ ಮ್ಯಾಜಿಸ್ಟ್ರೇಟರ್ ನ್ಯಾಯಾಲಯದಲ್ಲಿ ಜೀವನಾಂಶ ಕೋರಿ ಅರ್ಜಿ ಸಲ್ಲಿಸಿದಳು. ಮೇಲೆ ಹೇಳಿದ ಕಾನೂನಿನ ೩ನೇ ಪ್ರಕರಣದಲ್ಲಿ 'ಯಥೋಚಿತವಾದ ಮತ್ತು ನ್ಯಾಯಸಮ್ಮತ ಮೊಬಲಗನ್ನು (A reasonable and maintenance provision) ಜೀವನಾಂಶವಾಗಿ ಮಂಜೂರು ಮಾಡಬಹುದು ಎಂದಿದೆ. ಮುನ್ಸಿಫ್ ಮ್ಯಾಜಿಸ್ಟ್ರೇಟರಾದ ರೇಖಾ ದೀಕ್ಷಿತ್ ಕಾನೂನಿನ ಈ ಉಪಬಂಧವನ್ನು ಬಳಸಿ, ೫೨,೦೦೦ರೂ.ಗಳ 'ಮೆಹರ್ 'ಅನ್ನು, ಮೂರು ತಿಂಗಳ 'ಇದ್ದತ್ ' ಅವಧಿಗೆ ತಿಂಗಳಿಗೆ ಒಂದು ಸಾವಿರ ರೂ.ಗಳಂತೆ ೩೦೦೦ರೂ.ಗಳನ್ನು ಮಂಜೂರು ಮಾಡಿದರು. ಇದರ ಜೊತೆಗೆ ಭಾರತೀಯ ಮಹಿಳೆಯು ಬದುಕುವ ಸರಾಸರಿ ವಯಸ್ಸನ್ನು ೬೦ವರ್ಷಗಳು ಎಂದು ಪರಿಗಣಿಸಿ ೩೦ ವರ್ಷ ಸಂದ ಆಕೆಗೆ, ಉಳಿದ ಮೂವತ್ತು ವರ್ಷಗಳ ಜೀವನ ನಿರ್ವಹಣೆಗಾಗಿ ೩೦,೦೦೦ರೂ.ಗಳನ್ನು ಜೀವನಾಂಶವಾಗಿ ನೀಡಬೇಕೆಂದು ಆದೇಶ ನೀಡಿದರು. ಮುಸ್ಲಿಂ ಮಹಿಳೆಯ ಹಕ್ಕುಗಳನ್ನು ಮೊಟಕುಗೊಳಿಸುತ್ತದೆಂದು ಭಾವಿಸಿದ ಒಂದು ಕಾನೂನು ಜಾರಿಯಲ್ಲಿದ್ದರೂ ನ್ಯಾಯಾಧೀಶರ ವಿವೇಚನೆಯಿಂದ ಹೇಗೆ ಮಹಿಳೆಗೆ ಅನುಕೂಲಕರವಾದ ತೀರ್ಪು ಹೊರಬಿದ್ದಿತು ಎಂಬುದು ಇಲ್ಲಿ ಸ್ಪಷ್ಟವಾಗುತ್ತದೆ. ಕ್ರಿಮಿನಲ್ ಪ್ರಕ್ರಿಯೆ ಸಂಹಿತೆಯ ೧೨೫ನೆಯ ಪ್ರಕರಣದ ಅಡಿಯಲ್ಲಿ ಅವಳು ಪಡೆಯಬಹುದಾಗಿದ್ದ ಗರಿಷ್ಠ ಮೊಬಲಗನ್ನು ತಿಂಗಳಿಗೆ ಕೇವಲ ೫೦೦ರೂ.ಗಳಾಗಿತ್ತು ಎಂಬುದರ ಹಿನ್ನೆಲೆಯಲ್ಲಿ ಈ ಕಾನೂನು ಹಾಗೂ ಇದರಡಿಯಲ್ಲಿ ಹೊರಬಿದ್ದ ಇಂಥ ತೀರ್ಪುಗಳ ಮಹತ್ವ ತಿಳಿಯುತ್ತದೆ.

ನಮ್ಮ ಸಮಾಜ, ನೈತಿಕತೆಗೆ ಸಂಬಂಧಿಸಿದಂತೆ ಎರಡು ರೀತಿಯ ಮಾನದಂಡಗಳನ್ನು ಹೊಂದಿದೆ. ಮಹಿಳೆಗೆ ಸದ್ಗುಣಗಳನ್ನು ಆರೋಪಿಸುವ ಮೂಲಕ ಅವಳ ಕಾರ್ಯವ್ಯಾಪ್ತಿಯನ್ನು ಪತಿ ಮಕ್ಕಳ ಸಂಸಾರಕ್ಕೆ ಸೀಮಿತಗೊಳಿಸಿ, ಅವರ ಯೋಗಕ್ಷೇಮದ ಚಿಂತನೆಯೇ ಅವಳ ಜೀವನ ಧ್ಯೇಯವಾಗಿರಬೇಕು ಎಂದು ನಿರೀಕ್ಷಿಸುತ್ತದೆ. ಮತ್ತು 'ಪತಿ ಸಚ್ಚಾರಿತ್ರ್ಯವುಳ್ಳವನಾಗಿಲ್ಲದಿದ್ದರೂ ಸನ್ನಡತೆಯುಳ್ಳವನಾಗಿರದಿದ್ದರೂ ಅಥವಾ ಸದ್ಗುಣಶೀಲನಾಗಿಲ್ಲದಿದ್ದರೂ ಪತ್ನಿ ಅವನಿಗೆ ವಿಧೇಯಳಾಗಿರಬೇಕು'ಎಂದಿದ್ದಾನೆ ಮನು. ನೈತಿಕತೆಗೆ ಸಂಬಂಧಪಟ್ಟ ಈ ದ್ವಂದ್ವ ಮಾನದಂಡಗಳು ಶತಮಾನಗಳಿಂದಲೂ ನಮ್ಮ ಸಮಾಜದ ಚಿಂತನಾಕ್ರಮದಲ್ಲಿ ಸೇರಿ ಹೋಗಿರುವಂಥವು. ಮಹಿಳೆಯನ್ನು, ಸ್ವತಂತ್ರ ವ್ಯಕ್ತಿತ್ವ ಹಾಗೂ ಆಲೋಚನಾ ಕ್ರಮವುಳ್ಳ ಮತ್ತು ಆಸೆ ಆಕಾಂಕ್ಷೆಗಳುಳ್ಳ ವ್ಯಕ್ತಿಯನ್ನಾಗಿ ನಮ್ಮ ಸಮಾಜ ಎಂದೂ ಪರಿಗಣಿಸಿಯೇ ಇಲ್ಲ. ಅವಳನ್ನು ಗುರುತಿಸುವುದು ಸಹ ಒಬ್ಬರ ಮಗಳನ್ನಾಗಿ ಪತ್ನಿಯನ್ನಾಗಿ ಇಲ್ಲವೆ ತಾಯಿಯನ್ನಾಗಿ ಸಮಾಜ ಹಾಗೂ ಕಾನೂನುಗಳು ಸಹ ಮಹಿಳೆಯ ಮೇಲೆ ಇದನ್ನೇ ಹೇರುತ್ತದೆ. ತನ್ನ ಜೀವನ ಹಾಗೂ ತನ್ನ ದೇಹದ ಮೇಲಿನ ನಿಯಂತ್ರಣವನ್ನು ಸಂಪೂರ್ಣವಾಗಿ ಅವಳೇ ಹೊಂದಿರಬೇಕು ಎಂಬುದು ಮಹಿಳಾವಾದಿಗಳ ಕೂಗು. ಆದರೆ ಅವರ ಈ ವಾದವನ್ನು 'ಮುಕ್ತ ಪ್ರೇಮ'ಕ್ಕೆ ಅಥವಾ 'ಮುಕ್ತ ಲೈಂಗಿಕತೆಗೆ ಬಹಳಷ್ಟು ಬಾರಿ ಅಪಾರ್ಥ ಮಾಡಿಕೊಳ್ಳಲಾಗುತ್ತದೆ.

ಭಾರತ ದಂಡ ಸಂಹಿತೆಯ ೨೦ನೆಯ ಪ್ರಕರಣದಲ್ಲಿ ವಿವಾಹಕ್ಕೆ ಸಂಬಂಧಪಟ್ಟ ಅಪರಾಧಗಳ ಬಗ್ಗೆ ಹೇಳಲಾಗಿದೆ. ಸಂಹಿತೆಯ ೪೯೮ನೇ ಪ್ರಕರಣದಲ್ಲಿ ಅಪರಾಧಿಕ ಉದ್ದೇಶದಿಂದ ವಿವಾಹಿತ ಮಹಿಳೆಯನ್ನು ಪುರುಷನೊಬ್ಬ ಅಮಿಷ ಒಡ್ಡುವುದು ಅಥವಾ ಕರೆದೊಯ್ಯುವುದು ಅಥವಾ ಬಂಧಿಸಿಡುವುದು ಅಪರಾಧ ಎನ್ನಲಾಗಿದೆ. ಇಂತಹ ಪ್ರಕರಣ ವನ್ನು ವ್ಯಾಖ್ಯಾನಿಸುವಾಗ ಸರ್ವೋಚ್ಚನ್ಯಾಯಲಯದ ನ್ಯಾಯಾಧೀಶರು ವಿವೇಚನೆ ತೋರದಿದ್ದರೆ ವಿವಾಹಿತ ಮಹಿಳೆ ತನ್ನ ಪತಿಯಿಂದ ಬೇಸತ್ತು ಅಸಮಾಧಾನದಿಂದ ತಾನೇ ಸ್ವಇಚ್ಛೆಯಿಂದ ತನ್ನ ಮನೆಯನ್ನು ತೊರೆದು ಬೇರೊಬ್ಬ ಪುರುಷನೊಡನೆ ವಾಸಿಸುತ್ತಿದ್ದಾಳೆಂದು ತೋರಿಸಲು ಸ್ಪಷ್ಟವಾದ ಸಾಕ್ಷ್ಯವಿದ್ದರೂ, ಆ ಇತರ ಪುರುಷ ಈ ಪ್ರಕರಣದ ಮೇರೆಗೆ ಅಪರಾಧದ ದೋಷಿಯಾಗುತ್ತಾನೆ. ಭಾರತದ ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರಾಗಿದ್ದ ಸನ್ಮಾನ್ಯ ಶ್ರೀ ಪಿ.ಬಿ. ಗಜೇಂದ್ರಗಡ್ಕರ್ ಅವರು, ತಾವು ನ್ಯಾಯಾಧೀಶ ರಾಗಿದ್ದಾಗ ಈ ಪ್ರಕರಣಗಳ ಬಗ್ಗೆ ಹೇಳಿದ್ದ ಮಾತನ್ನು ಇಲ್ಲಿ ಉದ್ಧರಿಸಬಹುದು. "೪೯೭ನೇ ಪ್ರಕರಣದಂತೆ ೪೯೮ನೇ ಪ್ರಕರಣದ ಉಪಬಂಧಗಳನ್ನು ಸಹ ಪತಿಯ ಹಕ್ಕುಗಳನ್ನು ರಕ್ಷಿಸುವ ಉದ್ದೇಶದಿಂದ ರೂಪಿಸಲಾಗಿದೆಯೇ ಹೊರತು ಪತ್ನಿಯ ಹಕ್ಕುಗಳ ರಕ್ಷಣೆಯ ದೃಷ್ಟಿಯಿಂದಲ್ಲ. ೪೯೮ನೇ ಪ್ರಕರಣದ ಅಡಿಯಲ್ಲಿ ಅಪರಾಧವಾಗುವ ಒಂದು ಕೃತ್ಯದ ಸಾರಾಂಶವೆಂದರೆ,'ಕಾನೂನು ಬಾಹಿರ ಲೈಂಗಿಕ ಸಂಬಂಧ ಹೊಂದುವ ಉದ್ದೇಶದಿಂದ, ತನ್ನ ಪತ್ನಿಯ ಮೇಲೆ ಪತಿಗಿರುವ ಅಭಿರಕ್ಷೆ ಹಾಗೂ ನಿಯಂತ್ರಣದ ಹಕ್ಕಿನಿಂದ ಪತಿಯನ್ನು ವಂಚಿಸುವುದು. ಇಲ್ಲಿ ಅಂಥ ಅಪರಾಧಕ್ಕೆ ಸ್ವತಃ ಪತ್ನಿಯ ಒಪ್ಪಿಗೆಯಿತ್ತು ಎಂಬುದು ಇಲ್ಲಿ ಮುಖ್ಯವಾಗುವುದೇ ಇಲ್ಲ. ಸಮಾಜದ ಆರೋಗ್ಯದ ದೃಷ್ಟಿಯಿಂದ ಈ ಪ್ರಕರಣ ಮುಖ್ಯವಾದುದಾಗುತ್ತದಾದರೂ, ಇದೇ ಮಾನದಂಡ ಪುರುಷನಿಗೆ ಅನ್ವಯವಾಗುವುದಿಲ್ಲ. ಈ ಕಾರಣಕ್ಕಾಗಿ ಇದು ಪ್ರಶ್ನಾರ್ಹವಾಗುತ್ತದೆ.

ಸ್ತ್ರೀ-ಪುರುಷರ ನಡುವೆ ತಾರತಮ್ಯವೆಸಗುವ ಇಂಥ ಅನೇಕ ಉಪಬಂಧಗಳು ನಮ್ಮ ಕಾನೂನುಗಳಲ್ಲಿ ಸೇರಿಹೋಗಿವೆ. ಹೀಗಾಗಿ ಪಿತೃಪ್ರಧಾನ ಸಮಾಜ ವ್ಯವಸ್ಥೆಯನ್ನು ಪ್ರತಿಬಿಂಬಿಸುವ ಕಾನೂನುಗಳ ಮೇರೆಗೆ ನೀಡುವ ತೀರ್ಮಾನಗಳೂ ಸಹ ಆ ಸಮಾಜದ ಹಾಗೂ ಪ್ರತಿ ನ್ಯಾಯಾಧೀಶರ ದೃಷ್ಟಿಕೋನ ಹಾಗೂ ನಂಬಿಕೆಗಳಿಗೆ ಅನುಸಾರವಾಗಿ ಇರುತ್ತವೆ. ಒಂದೇ ಸಮಾಜದಲ್ಲಿ ಬಾಳುವ ಒಂದೇ ರೀತಿಯ ಸಂದರ್ಭಗಳಿಗೆ ಒಳಗಾಗುವ ಸ್ತ್ರೀ-ಪುರುಷರಿಗೆ ಸಂಬಂಧಿಸಿದಂತೆ ಒಂದೇ 'ನ್ಯಾಯ'ದೊರಕಬೇಕು. ಇದು ಸಾಧಿತವಾಗಬೇಕಾದರೆ, ಕಾನೂನು ರಚನಾಕಾರರಿಂದ ಪ್ರಾರಂಭಿಸಿ ಅನುಷ್ಠಾನ ವ್ಯವಸ್ಥೆ ಹಾಗೂ ನ್ಯಾಯಾಧೀಶರವರೆಗೆ ಎಲ್ಲರೂ, ಎಲ್ಲ ಹಂತಗಳಲ್ಲೂ, ಸಮಾಜದ ಒಪ್ಪಂದಕ್ಕೆ ಧಕ್ಕೆ ಮಾಡದಂಥ ವಿವೇಚನಾಯುತವಾದ, ಆಧುನಿಕ ಪ್ರಗತಿಪರ ಮನೋಭಾವವನ್ನು ರೂಢಿಸಿಕೊಳ್ಳುವುದು ಅತ್ಯಗತ್ಯವಾಗುತ್ತದೆ.

# ವಿವಾಹ - ವೈಧವ್ಯ - ವಾಟರ್

*ಶೈಲಜಾ ಹಿರೇಮಠ*

'ವಾಟರ್'ಚಿತ್ರದಿಂದ ಸೃಷ್ಟಿಯಾದ ಬೆಂಕಿ ಹೊರಗಡೆ ಈಗ ತಣ್ಣಗಾಗಿರಬಹುದು. ಆದರೆ ನನ್ನೊಳಗೆ ಅದಿನ್ನೂ ನಿಗಿ ನಿಗಿ ಕೆಂಡವಾಗಿ ಧಗಧಗಿಸುತ್ತಿದೆ. ಬಾಲ್ಯದಲ್ಲಿ ನಾ ಕಂಡ ದೃಶ್ಯ ಪದೇ ಪದೇ ನನ್ನನ್ನು ಕಾಡುತ್ತಿದೆ. ನಾನಾಗ ಮಹಾಲಿಂಗಪುರದಲ್ಲಿ ಆರನೆಯ ತರಗತಿಯಲ್ಲಿ ಓದುತ್ತಿದ್ದೆ. ನನ್ನ ಸಹಪಾಠಿ ಪದ್ಮಾ ವೈದಿಕ ಪರಂಪರೆಗೆ ಸೇರಿದವಳು. ಅವಳ ಮನೆಗೆ ಒಂದೆರಡು ಬಾರಿ ಹೋಗಿದ್ದೆನು. ಎಪ್ಪತ್ತರ ಹರೆಯದ ಬೋಡು ತಲೆಯ ಸಣಕಲು ದೇಹದ ಅಜ್ಜಿಯೊಬ್ಬಳು ಮನೆಯವರೆಲ್ಲರ ಅಗತ್ಯಗಳನ್ನು ಪೂರೈಸುತ್ತ ಪುಟ ಪುಟ ಓಡಾಡುತ್ತಿದ್ದಳು. ಅವಳು ಕುಳಿತು ನಗುವುದನ್ನು, ಹರಟೆ ಹೊಡೆಯುವುದನ್ನು ನಾನು ಕಾಣಲೇ ಇಲ್ಲ. ಮನೆತುಂಬ ಯಂತ್ರದಂತೆ ಓಡಾಡಿಕೊಂಡು ಕೆಲಸ ಮಾಡಿಕೊಂಡಿದ್ದಳು. ಕಣ್ಣಲ್ಲಿ ನೋವನ್ನು ಬಚ್ಚಿಟ್ಟುಕೊಂಡ ಅವಳು ಜೀವಂತ ಹೆಣದಂತೆ ಕಾಣುತ್ತಿದ್ದಳು. ಏ!ಬೋಳಿ ನನ್ನ ಸಾಕ್ಸ ಎಲ್ಲಿದೆ? ಊಟಕ್ಕೆ ನೀಡು ಬಾ ರಂಡೆ, ಏಯ್ ಬೋಳಿ ನನ್ನ ತಲೆದಿಂಬು ಎಲ್ಲಿಟ್ಟಿರುವೆ? ಎಂದು ಪ್ರತಿಯೊಂದಕ್ಕೂ ಕುಟುಂಬದ ಪ್ರತಿಯೊಬ್ಬ ಸದಸ್ಯರೂ ಕೇಳುತ್ತಿದ್ದರು. ಅದೇ ತಾನೆ ಮಾತು ಕಲಿಯುತ್ತಿರುವ ಮಗುವಿನಿಂದ ಹಿಡಿದು ಹಿರಿಯರವರೆಗೆ ಅವಳನ್ನು 'ಬೋಳಿ', 'ರಂಡೆ' ಎಂದೇ ಕರೆಯುತ್ತಿದ್ದರು. ಅವಳು ಅದಕ್ಕೆ ಎಷ್ಟು ನಿರ್ಲಿಪ್ತವಾಗಿ 'ಒಗ್ಗಿಕೊಂಡಿದ್ದಳೆಂದರೆ ಹೆಸರು ಅಥವಾ ಸಂಬಂಧಗಳಿಂದ ಅಜ್ಜಿ, ಅತ್ತೆ ಎಂದು ಕೂಗಿ ಕರೆದರೆ ತಿರುಗಿಯೂ ನೋಡುತ್ತಿರಲಿಲ್ಲ. ಒಡಲಲ್ಲಿ ಅಪಮಾನ, ನೋವಿನ ಕೆಂಡವನ್ನು ಕಟ್ಟಿಕೊಂಡು ಹೊರಗಡೆ ತಣ್ಣಗೆ ಪ್ರತಿಕ್ರಿಯಿಸುತ್ತಿದ್ದ ಅವಳ ವರ್ತನೆ ಆ ಎಳೆವಯಸ್ಸಿನಲ್ಲಿಯೇ ನನ್ನನ್ನು ದಿಕ್ಕು ತಪ್ಪಿಸಿತ್ತು. ನನಗಾಗ ವೈಧವ್ಯದ ಪರಿಕಲ್ಪನೆಯೇ ಇರಲಿಲ್ಲ. ನಾನು ನನ್ನ ಅವ್ವ, ಅಪ್ಪನಿಗೆ ಆ ಅಜ್ಜಿಗೆ ತಲೆಯನ್ನು ಯಾಕೆ ಬೋಳಿಸಿದ್ದಾರೆ? ಮಾತೆತ್ತಿದರೆ ಬೋಳಿ, ರಂಡಿ ಎಂದು ಆಕೆಯನ್ನು ಯಾಕೆ ಬೈಯುತ್ತಾರೆ? ಎಂದು ಪದೇ ಪದೇ ಕಾಡಿ ಕೇಳಿದ್ದೆನು. ನನಗೆ ಅದನ್ನು ಅರ್ಥಮಾಡಿಸಲು ಸಾಕಷ್ಟು ಹೆಣಗಾಡಿದರು. ಕೊನೆಗೆ ಸೋತ ಅವರು ನನ್ನನ್ನೇ ಗದರಿಸಿದರು, ಸುಮ್ಮನಾಗಿಸಿದರು. ಅವರ ಮನೆಗೆ ಹೋಗಕೂಡದು. ಇನ್ನೊಮ್ಮೆ ಅಂಥ ಪ್ರಶ್ನೆಗಳನ್ನು ಕೇಳಿಕೂಡದು ಎಂಬುದು, ಅವರ ಕಟ್ಟಾಜ್ಞೆ. ಈಗಲೂ ಆ ಅಜ್ಜಿ ನನ್ನೊಳಗೆ ಜೀವಂತವಾಗಿದ್ದಾಳೆ. ಅವಳ ತಣ್ಣನೆಯ ನೋಟ ನಿತ್ಯವೂ ನನ್ನನ್ನು ಸುಡುತ್ತದೆ.

ಇಂದು, ದೇಶದಲ್ಲಿ ಫ್ಯಾಸಿಸ್ಟ್ ಶಕ್ತಿಗಳು ರಾಜಕೀಯ ಪಕ್ಷವನ್ನು ಆಳುತ್ತಿವೆ. ಹಿಂದೂ ಸಮಾಜದ ರೂವಾರಿ ಎಂಬಂತೆ ಅವರು ವರ್ತಿಸುತ್ತಿದ್ದಾರೆ. ಮತ್ತು ಹಿಂದೂ ಸಮಾಜ, ಹಿಂದೂ ಸಂಸ್ಕೃತಿಯನ್ನು ತಮಗನುಕೂಲವಾಗುವ ನೆಲೆಯಲ್ಲಿ ನಿರ್ವಚಿಸುತ್ತಿದ್ದಾರೆ. ಇಂಥವರ ಮಧ್ಯದಲ್ಲಿದ್ದುಕೊಂಡು ಸಮಾಜದಲ್ಲಿಯ ಕ್ರೂರವಾಸ್ತವ ಸತ್ಯವನ್ನು ಹೇಗೆ ಎದುರಿಸಬೇಕೆಂಬ ಸವಾಲು ನಮ್ಮೆಲ್ಲರೆದುರಿಗಿದೆ. ಇಂಥ ಸಂದರ್ಭದಲ್ಲಿ ಪ್ರಜ್ಞಾವಂತರೆನಿಸಿಕೊಂಡವರು ಮೌನದಿಂದಿರುವುದು ಆರೋಗ್ಯಕರವಲ್ಲ. ಅಪರಾಧ ಮಾಡುವುದಕ್ಕಿಂತಲೂ, ಅಪರಾಧವನ್ನು ಸಹಿಸುವುದು ಮಹಾಪರಾಧ ಎನ್ನುವುದನ್ನು ಮರೆಯಬಾರದು. ಅದಕ್ಕಾಗಿ ಮೌನ ಮುರಿದು ಮಾತನಾಡಬೇಕು. ವಾಟರ್ ಚಿತ್ರದಲ್ಲಿ ಹಿಂದೂ ಸಂಸ್ಕೃತಿಯನ್ನು, ವಿಧವೆಯರನ್ನು, ವಾರಣಾಸಿಯನ್ನು ಅತ್ಯಂತ ಕಳಪೆಯಾಗಿ ತೋರಿಸಲಾಗಿದೆ, ಅಪಮಾನಿಸಲಾಗಿದೆ ಎಂಬುದು ಈ ಎಲ್ಲ ಕೋಮುವಾದಿ ಶಕ್ತಿಗಳ ಆರೋಪ. ಇವರೆಲ್ಲರೂ ಸೇರಿಕೊಂಡು ೬೫ ವರ್ಷವಯಸ್ಸಿನ ವೃದ್ಧ ವಿಧವೆಯಿಂದ 'Water go back' ಎನ್ನುವ ಫಲಕ ಪ್ರದರ್ಶಿಸಿರುವುದು, ನಾಡಿನ ಅನೇಕ ಪತ್ರಿಕೆಗಳು ಅದಕ್ಕೆ ಪ್ರಚಾರ ನೀಡಿರುವುದು ಈ ಶತಮಾನದ ದೊಡ್ಡ ತಮಾಷೆಯಂತೆ ಕಾಣುತ್ತದೆ.

ಒಂದು ಕಾದಂಬರಿಯೇ ವಾಟರ್ ಚಿತ್ರಕ್ಕೆ ಆಧಾರ. ೧೯೩೦ರಲ್ಲಿ ಪ್ರಚಲಿತದಲ್ಲಿದ್ದ ವಿಧವೆಯರ ಬದುಕಿನ ಚಿತ್ರಣವೇ ಇದರ ಕಥಾವಸ್ತು. ಚಿತ್ರದಲ್ಲಿ ಇದೆ ಎನ್ನಲಾದ ಎರಡು ಸಂಭಾಷಣೆಗಳನ್ನು ಕುರಿತಂತೆ ಸಂಸ್ಕೃತಿ ಸುರಕ್ಷಾ ಸಂಘವು ತೀವ್ರವಾದ ವಿರೋಧವನ್ನು ವ್ಯಕ್ತಪಡಿಸಿದೆ. ಅದರಲ್ಲಿ ಒಂದು ಮಧುಮತಿ ಹೇಳಿದ್ದು, ಮತ್ತೊಂದು ಶಕುಂತಲೆ ಮತ್ತು ಪಂಡಿತನ ನಡುವಿನ ಸಂಭಾಷಣೆ.

**ಮಧುಮತಿ :** ಇಲ್ಲಿ ಸೂಳೆಗೂ ವಿಧವೆಗೂ ವ್ಯತ್ಯಾಸವೇ ಇಲ್ಲ.

**ಶಕುಂತಲೆ :** ಪಂಡಿತರೇ ಹಿಂದೂಧರ್ಮದ ಗ್ರಂಥಗಳನ್ನೆಲ್ಲಾ ಓದಿದ್ದೀರಾ? ಅವುಗಳು ವಿಧವೆಯ ಕುರಿತಂತೆ ಏನು ಮಾತನಾಡುತ್ತವೆ? ಅವರನ್ನು ಕ್ರೂರವಾಗಿ ನಡೆಸಿಕೊಳ್ಳಬೇಕು ಎಂದೇನಾದರೂ ಹೇಳಿದೆಯಾ?

**ಪಂಡಿತ :** ಹಿಂದೂ ಧರ್ಮವು ವಿಧವೆಯರಿಗೆ ಸೂಚಿಸಿರುವುದು ಎರಡು ದಾರಿಗಳನ್ನು ಮಾತ್ರ. ಬದುಕಿದರೆ ಅಲೌಕಿಕವಾಗಿ ಬದುಕಬೇಕು, ಇಲ್ಲದಿದ್ದರೆ ಗಂಡನ ಜೊತೆ ಚಿತೆಯೇರಬೇಕು.

ಇಂತಹ ಹೇಳಿಕೆಗಳು ಹಿಂದೂ ಸಂಸ್ಕೃತಿಗೆ ಧಕ್ಕೆಯನ್ನುಂಟು ಮಾಡುತ್ತವೆ ಎಂಬುದು ಫ್ಯಾಸಿಸ್ಟ್ ಶಕ್ತಿಗಳ ಅಬ್ಬರ. ಹಿಂದೂ ಸಂಸ್ಕೃತಿ ಎನ್ನುವುದು ಇದೆಯೇ? ಹಾಗೂ ಯಾವುದನ್ನು ಹಿಂದೂ ಸಂಸ್ಕೃತಿಯೆಂದು ಕರೆಯಬೇಕು ಎಂಬುದನ್ನು ಮೊದಲು ಸ್ಪಷ್ಟಪಡಿಸಿಕೊಳ್ಳಬೇಕು. ಇಲ್ಲದಿದ್ದರೆ ಇಂತಹ ಅಪಾಯಕಾರಿ ಫ್ಯಾಸಿಸ್ಟ್ ಶಕ್ತಿಗಳು ಕಟ್ಟಿಕೊಟ್ಟದ್ದೇ ಸಂಸ್ಕೃತಿಯಾಗಿ ನಿಲ್ಲುತ್ತದೆ. ವೈದಿಕ ಮೂಲದ ಸಂಗತಿಗಳನ್ನೇ ಭಾರತೀಯ ಸಂಸ್ಕೃತಿ, ಹಿಂದೂ ಸಂಸ್ಕೃತಿ ಎಂದು ಬಿಟ್ಟಿ ಪ್ರಚಾರ ನೀಡುತ್ತಿದ್ದಾರೆ. ಒಂದು ಜನ

ಸಮುದಾಯದ ಸಂಸ್ಕೃತಿ ಇಡೀ ದೇಶದ ಸಂಸ್ಕೃತಿಯಾಗಿ ನಿಲ್ಲಲು ಹೇಗೆ ಸಾಧ್ಯ? ಭಾರತದಲ್ಲಿ ಹಲವಾರು ಧರ್ಮಗಳಿವೆ. ನೂರಾರು ಜಾತಿಗಳಿವೆ. ಹಾಗಿದ್ದರೆ ಇವುಗಳು ಯಾವ ಸಂಸ್ಕೃತಿಯ ಪಟ್ಟಿಗೆ ಸೇರುತ್ತವೆ? ಎಲ್ಲ ಧರ್ಮ, ಜಾತಿಯವರನ್ನು ಕೈಬಿಟ್ಟು ವೈದಿಕ ಸಂಸ್ಕೃತಿಯನ್ನು ಹಿಂದೂ ಸಂಸ್ಕೃತಿಯೆಂದು ಕರೆಯುವುದರ ಔಚಿತ್ಯವನ್ನು, ಅದರ ಹಿಂದಿನ ರಾಜಕಾರಣವನ್ನು ಪ್ರಶ್ನಿಸಬೇಕಿದೆ. ಹಿಂದೂ ಸಂಸ್ಕೃತಿಗೆ ಧಕ್ಕೆಯಾಗುತ್ತದೆ ಎಂದು ಅಬ್ಬರಿಸುವ ಆ ಶಕ್ತಿಗಳು ಮೊದಲು ಸರಿಯಾದ ನೆಲೆಯಲ್ಲಿ ಸಂಸ್ಕೃತಿಯನ್ನು ನಿರ್ವಚಿಸಿಕೊಳ್ಳಲಿ. ಸಂಸ್ಕೃತಿ ಯಾವಾಗಲೂ ಜೀವಪರವಾಗಿರಬೇಕು. ಜೀವ ವಿರೋಧಿಯಾದ ಯಾವ ಸಂಗತಿಗಳೂ ಸಂಸ್ಕೃತಿಯಾಗಿ ನಿಲ್ಲುವುದಿಲ್ಲ. ಅಂಥದ್ದನ್ನು ಸಂಸ್ಕೃತಿಯಾಗಿ ಪರಿಗಣಿಸಲೂ ಬಾರದು. 'ವಾಟರ್ 'ಚಿತ್ರದಲ್ಲಿಯ ಮಧುಮತಿಯ ಮಾತಿಗಾಗಿ ಅವರು ನೊಂದುಕೊಳ್ಳಬೇಕಾಗಿಲ್ಲ. ಅಥವಾ ಅದನ್ನು ಅಪಮಾನವಾಗಿ ಸ್ವೀಕರಿಸಬೇಕಾಗಿಲ್ಲ. ವಾಸ್ತವದಲ್ಲಿ ಭಾರತದಲ್ಲಿಯ ಅನೇಕ ವಿಧವೆಯರು ಅದೇ ಬದುಕನ್ನು ಸಾಗಿಸುತ್ತಿದ್ದಾರೆ. ಹಿಂದೆಯೂ ಅದೇ ರೂಪದಲ್ಲಿ ಬದುಕಿದ್ದರು ಎನ್ನುವುದಕ್ಕೆ ಸಾಹಿತ್ಯಿಕ ಹಾಗೂ ವಿದೇಶಿ ಪ್ರವಾಸಿಗರ ಪತ್ರಗಳ ಉಲ್ಲೇಖಗಳು ಜೀವಂತ ಸಾಕ್ಷಿಯಾಗಿವೆ. ವಿನುಕೊಂಡ ವಲ್ಲಭರಾಯ ವಿರಚಿತ ಕ್ರೀಡಾಭಿರಾಮದಲ್ಲಿ ಉಲ್ಲೇಖಿತವಾದ ವಿಪ್ರನ ವಿಧವೆಯರ ಚಿತ್ರಣ ಗಮನಾರ್ಹವಾದುದು. ೧೪ನೆ ಶತಮಾನದಲ್ಲಿದ್ದ ವಲ್ಲಭರಾಯನು ಅಂದಿನ ಸಾಂಸ್ಕೃತಿಕ ಹಾಗೂ ಸಾಮಾಜಿಕ ವ್ಯವಸ್ಥೆಯ ಜೀವಂತ ಚಿತ್ರಣವನ್ನು ನೀಡಿದ್ದಾನೆ. ಊಟದ ಮನೆಯ ಬಗ್ಗೆ ವಿಚಾರಿಸಿದ ಮಂಚನನಿಗೆ ಬ್ರಾಹ್ಮಣನು 'ನಿಮಗೆ ಆಹಾರ ಬೇಕೊ? ವಿಹಾರ ಬೇಕೊ?'ಎಂದು ಪ್ರಶ್ನಿಸುತ್ತ ವಿಹಾರದ ಕುರಿತು ಈ ಕೆಳಗಿನಂತೆ ವಿವರಣೆ ನೀಡುತ್ತಾನೆ.

''ಸಣ್ಣದೇಹ ದೊಡ್ಡ ಸ್ತನ, ಹೊಳೆಯುವ ಕಣ್ಣು, ಕೂದಲಿಲ್ಲದ ತಲೆ ಆ ವಿಧವಾ ರತ್ನವನ್ನು ಸ್ವೇಚ್ಛೆಯಾಗಿ ಬಿಟ್ಟ ಬ್ರಹ್ಮನಿಗೆ ಜಯಜಯ. ವಿಪ್ರ ವಿಧವೆಯರು ಈ ಭೂಮಂಡಲದಲ್ಲಿ ಎಷ್ಟು ಜನ ಇಲ್ಲ! ಆದರೆ ಆಕೆಯ ವಿಭ್ರಮ! ವಿಲಾಸ! ಕಲಾವರ್ಗ! ಇವೆಲ್ಲ ಹಾಗಿರಲಿ. ಆ ವಿಧವೆಯ ದೇಹಕಾಂತಿಯ ನವಲಕ್ಷಾಧೀಶನ ಹಣ್ಣೆಯಲ್ಲಿರುವ ಚಿನ್ನದ ಪಟಬಂಧನ ಸೌಭಾಗ್ಯಲಕ್ಷ್ಮಿಯನ್ನು ನೋಡಿ ನಗುವಂತಿದೆ'' (ವಿನುಕೊಂಡ ವಲ್ಲಭರಾಯ ವಿರಚಿತ-ಕ್ರೀಡಾಭಿರಾಮ, ತೆಲುಗಿನಿಂದ ಕನ್ನಡಕ್ಕೆ : ಆರ್ವಿಯಸ್.ಸುಂದರಂ.)

ಬ್ರಾಹ್ಮಣನ ಈ ಮಾತಿನ ಅರ್ಥವನ್ನು ಬಿಚ್ಚಿ ಹೇಳಬೇಕಾಗಿಲ್ಲ. ವಿಧವೆಯರಿಗೆ ಲೈಂಗಿಕ ನಿರ್ಬಂಧವೇನಿರಲಿಲ್ಲ. ತಮಗೆ ಬೇಕಾದ ಗಂಡಸರನ್ನು ಕೂಡಿಕೊಳ್ಳುವ ಸ್ವಾತಂತ್ರ್ಯ ಅವರಿಗಿತ್ತು. ಅಂದಿನ ಸಮಾಜದಲ್ಲಿ ಅದು ಅನೈತಿಕ ಸ್ವರೂಪವನ್ನು ಪಡೆದುಕೊಂಡಿರಲಿಲ್ಲ. ಅದೊಂದು ಒಪ್ಪಿತ ಸಾಮಾಜಿಕ ಮೌಲ್ಯವಾಗಿತ್ತು.

ವಲ್ಲಭರಾಯನ ಅದೇ ಕೃತಿಯಲ್ಲಿ ವಿಧವೆಯರ ಲೈಂಗಿಕ ಸ್ವಾತಂತ್ರ್ಯದ ಕುರಿತಂತೆ ಮತ್ತೊಂದು ಉಲ್ಲೇಖ ಸಿಗುತ್ತದೆ. ಅದಕ್ಕೆ ಸಾಂಸ್ಕೃತಿಕ ಸ್ವರೂಪದ ಕವಚವಿದೆ. ಶ್ರೀ ಕಾಕುಳೇಶ್ವರನ ಉತ್ಸವದಲ್ಲಿ ಗರುಡಗಂಭವನ್ನು ಪ್ರತಿಷ್ಠಾಪಿಸುವ ದಿನದಂದು ಹಿಡಿದುಕೊಂಡು

ಪುಷ್ಪಯಾಗದವರೆಗಿನ ಪರ್ವಕಾಲದವರೆಗೆ ವಿಧವೆಯರು ಲೈಂಗಿಕ ಸ್ವಾತಂತ್ರ್ಯವನ್ನು ಹೊಂದಿರುತ್ತಿದ್ದರು. ಈ ಅವಧಿಯಲ್ಲಿ ತಮ್ಮ ಲೈಂಗಿಕ ಅಗತ್ಯವನ್ನು ಪೂರೈಸಿಕೊಳ್ಳುವುದು ಅವರ ಹಕ್ಕೂ ಆಗಿತ್ತು. ಕೃತಿಕಾರ ಈ ಆಚರಣೆಯ ಇಡಿಯಾದ ವರ್ಣನೆಯನ್ನು ಮಂಚನನ ಮೂಲಕ ಹೇಳಿಸುತ್ತಾನೆ.

"ದವನ ಹುಣ್ಣಿಮೆ ದಿನ ಶ್ರೀಕಾಕುಳದಲ್ಲಿರುವ ತೆಲಗುರಾಯನೆಂಬ ಹೆಸರಿನ ದೇವತಾಧೀಶ್ವರನಿಗೆ ಲೋಕ ಹಿತಕ್ಕಾಗಿ ಉತ್ಸವ ಮಾಡಿದರು. ನಾವು ಕಳೆದ ವರ್ಷ ಅಲ್ಲಿಗೆ ಹೋಗಿದ್ದೆವು. ಕಲ್ಪವಲ್ಲಿಯಾದ ಕಾರವೆಲ್ಲಿ ತಾಯಿ ಪ್ರೀತಿಯಿಂದ ಹೆತ್ತ ಮಗು ಅವನು ಆ ತೆಲುಗರಾಯ ಜಾರಚೋರ ಧೂರ್ತ ಚಕ್ರವರ್ತಿ ದೇವವೇಶ್ಯಾಭುಜಂಗ. ಅವನು ಚಿನ್ನದ ಪಾತ್ರೆಯಲ್ಲಿ ಬಿಸಿಹಾಲನ್ನು ಕುಡಿದು ಹುಳಿಯಾದ ತನ್ನ ಅಧರ ಪಲ್ಲವದಿಂದ ವಿಪ್ರಕನ್ಯೆಯರೊಂದಿಗೆ ಸರಸವಾಡುತ್ತಿದ್ದಾನೆ.

ನಾಗದೇವ ಭಟ್ಟಾರಕನ ಮನೆಯಲ್ಲಿ ಹುಟ್ಟಿದ ಶ್ರೀ ಕಾಕುಳೇಶ್ವರನ ಉತ್ಸವವನ್ನು ಆಚರಿಸುವಾಗ ವೇದ ಪುರಾಣ, ಉಪನಿಷತ್ತುಗಳು ಇಷ್ಟವಾಗುವುದಿಲ್ಲ. ಆಗಮಗಳು ಬೇಡವೆನಿಸುತ್ತವೆ. ಗರುಡಗಂಬವನ್ನು ಪ್ರತಿಷ್ಠಾಪಿಸುವ ದಿನ ಮೊದಲುಗೊಂಡು ಪುಷ್ಪಯಾಗದವರೆಗಿನ ಪರ್ವಕಾಲದಲ್ಲಿ ಕೃಷ್ಣಾನದಿ ತೀರದ ಹನ್ನೆರಡು ಕ್ರೋಶ ವ್ಯಾಪಕ ಭೂಮಿಯಲ್ಲೆಲ್ಲ ಭಗವದನು ಮತಿಯಿಂದ ಪರನಾರಿ ಸಂಗ ಮಾಡುವುದು ಪಾಪವಲ್ಲ. ಶ್ರೀ ಕಾಕುಳದ ಜಾತ್ರೆಗೆ ಬರುವ ಕಾಮಾಂಧರಾದ ವೆಲನಾಡಿನ ತರುಣ ವಿಧವೆಯರನ್ನು ತೃಪ್ತಿಗೊಳಿಸಲು ಉಗ್ರಕಾಮಶಕ್ತಿಯುಳ್ಳ ಭೀಮಸೇನನಂಥ ಹಿಡಿಂಬಾಧೀಶ್ವರರು ಬೇಕಷ್ಟೇ. ಅವರನ್ನು ಬೇರೆಯವರಿಂದ ತಣಿಸಲು ಸಾಧ್ಯವಿಲ್ಲ.

ಯುವಕರು ಈ ಜಾತ್ರೆಯಲ್ಲಿ ಯುವತಿಯರಿಗೆ ಮುತ್ತಿಡುವುದು, ಅಪ್ಪಿಕೊಳ್ಳುವುದು, ನದೀತೀರಕ್ಕೆ ಅವರನ್ನು ಎಳೆದುಕೊಂಡು ಹೋಗುವುದು ಸರ್ವೇಸಾಮಾನ್ಯ. ಶ್ರೀ ಕಾಕುಳ ಉತ್ಸವದಲ್ಲಿ ಸೌಂದರ್ಯವತಿಯರಾದ ವಿಧವೆಯರು ಎಷ್ಟೋ ಜನ ಸಿಕ್ಕುವಾಗ ವೇಶ್ಯೆಯರನ್ನು ಹುಡುಕಿಕೊಂಡು ಹೋಗುವುದೇಕೆ? ಅಲ್ಲಿ ಕಾಮನು ಯುವತಿಯನ್ನು ನೋಡಿದ ಸನ್ಯಾಸಿಯ ಮೇಲೆ ದರ್ಭವಲ್ಲವದ ಕತ್ತಿಯನ್ನು ಝುಳಪಿಸುತ್ತಾನೆ. ಮೇದರ ಕನ್ಯೆಯನ್ನು ನೋಡಿದ ರೈತನನ್ನು ಮುಳ್ಳುಗೋಲಿನಿಂದ ಚುಚ್ಚುತ್ತಾನೆ. ಅಕ್ಕಸಾಲಿಗನನ್ನು ನೋಡಿದ ತರುಣಿಯ ಮೇಲೆ ಪುಷ್ಪಾಗ್ನಿ ಬಾಣ ಬಿಡುತ್ತಾನೆ. ಹೀಗೆ ಒಂದೊಂದು ಜಾತಿಗೆ ತಕ್ಕಂತೆ ಜಾತ್ರೆಯ ಎಲ್ಲಾ ದಿನಗಳಲ್ಲೂ ಮನ್ಮಥನು ಸರಿಯಾದ ಶಶ್ತ್ರಾಸ್ತ್ರಗಳನ್ನು ಪ್ರಯೋಗಿಸುತ್ತಾನೆ ಎಂದು ಹೇಳಿ ಆ ಕಡೆ ಬರುತ್ತಿದ್ದ ವಿಧವಾ ಸಮೂಹವನ್ನು ಆಶೀರ್ವದಿಸಲು ಮುಂದೆ ಹೋಗಿ

ಅಂದವಾಗಿ ಸಣ್ಣಸೀರೆ ಉಟ್ಟು ತಿರುಗಾಡುವ ಮಾಚಕಮ್ಮನಿಗೆ ದೀರ್ಘಾಯರಸ್ತು! ಮತ್ತೆ-ಮತ್ತೆ ದೇವಾಲಯಕ್ಕೆ ಹೋಗುವ ಕುಲಟಿಗೆ ಸಂಕಲ್ಪಸಿದ್ಧಿರಸ್ತು! ನಿತ್ಯವೂ ವ್ಯಭಿಚಾರ

ನಿಷ್ಠೆಯಿಂದಿರುವ ವಿಧವೆಗೆ ಪುತ್ರಾಭಿವೃದ್ಧಿ ಪ್ರಾಪ್ತಿರಸ್ತು! ತುಲಸಿಮಾಲೆಯನ್ನು ಧರಿಸಿರುವವಳಿಗೆ ಆರೋಗ್ಯ ವಿಭವಮಸ್ತು! ವಿಧವೆಗೆ ಸಂಪತ್ಸಮೃದ್ಧಿರಸ್ತು! ತಿರುಗಾಡುವ ಹೆಣ್ಣಿಗೆ ನಿತ್ಯ ಸೌಭಾಗ್ಯಮಸ್ತು.....!

ಪ್ರವಾಸಿಕಂಡ ಇಂಡಿಯಾದಲ್ಲಿ ಭಿನ್ನ ರೀತಿಯ ಅನೇಕ ಉಲ್ಲೇಖಗಳು ದೊರೆಯುತ್ತವೆ. ದುಆರ್ತೆ ಬಾರ್ಬೋಸಾನು-" ಸಹಗಮನ ಮಾಡದ ಹೆಂಗಸರನ್ನು ಬಹಳ ಅಗೌರವದಿಂದ ಕಾಣುತ್ತಾರೆ. ಅವರ ತಲೆಯನ್ನು ಬೋಳಿಸಿ ಮನೆತನಕ್ಕೆ ಅಮಂಗಳ, ಅಗೌರವವೆಂದು ಹೊರಗಟ್ಟುತ್ತಾರೆ. ಹೀಗೆ ಮನೆಯಿಂದ ಅಟ್ಟಲ್ಪಟ್ಟ ವಿಧವೆಯರು ದಿಕ್ಕಿಲ್ಲದೆ ಅಲೆಯುತ್ತಾರೆ. ಅತಿ ಚಿಕ್ಕ ವಯಸ್ಸಿನ ವಿಧವೆಯರ ಬಗ್ಗೆ ದಯಾದಾಕ್ಷಿಣ್ಯ ತೋರಿಸಿದ ಪಕ್ಷದಲ್ಲಿ, ಅವರನ್ನು ದೇವಸ್ಥಾನಗಳಿಗೆ ಕಳುಹಿಸಿ ಅಲ್ಲಿ ದೇವಸ್ಥಾನಕ್ಕಾಗಿ ಹಣಗಳಿಸಲು ದೇವದಾಸಿಯರಾಗಿ ಬಿಡುತ್ತಾರೆ."(ಸಂ.ಎಚ್.ಎಲ್.ನಾಗೇಗೌಡ, ಪ್ರವಾಸಿಕಂಡ ಇಂಡಿಯಾ, ಪು:೨೯೬-೯೭).

ಸಾಹಿತ್ಯದಲ್ಲಿ, ವಿದೇಶಿ ಪ್ರವಾಸಿಗರ ಪತ್ರಗಳಲ್ಲಿ ಉಲ್ಲೇಖಿತವಾದ ಇಂತಹ ಸಾಂಸ್ಕೃತಿಕ ಹಾಗೂ ಸಾಮಾಜಿಕ ಸಂಗತಿಗಳನ್ನು ಯಾರೂ ಅಪಮಾನವೆಂದು ಸ್ವೀಕರಿಸಬಾರದು. ಚರಿತ್ರೆಯಲ್ಲಿಯ ಇಂತಹ ಸತ್ಯಗಳನ್ನು ಅರ್ಥಮಾಡಿಕೊಳ್ಳಬೇಕು. ಅರಗಿಸಿಕೊಳ್ಳಬೇಕು. ಅಂತಹ ತಪ್ಪುಗಳು ಮುಂದೆ ಜರುಗದಂತೆ ನೋಡಿಕೊಳ್ಳಬೇಕು. ಯಾವುದೇ ಸಾಂಸ್ಕೃತಿಕ ಸಂಗತಿಗಳ ಅಧ್ಯಯನದ ಸಂದರ್ಭದಲ್ಲಿ ಚರಿತ್ರೆಯ ಪುನರಾವಲೋಕನ ಅತ್ಯಗತ್ಯವಾದುದು. ಮೇಲೆ ನೀಡಿದ ಮೊದಲ ಮತ್ತು ಎರಡನೆಯ ಉಲ್ಲೇಖಗಳು ತೆಲುಗು ನಾಡಿನ ಸಾಮಾಜಿಕ ಹಾಗೂ ಸಾಂಸ್ಕೃತಿಕ ಪರಿಸರದಲ್ಲಿ ಪ್ರಚಲಿತದಲ್ಲಿದ್ದವುಗಳೇ ಆಗಿರಬೇಕು. ಇಲ್ಲದೆ ಹೋಗಿದ್ದರೆ ಕೃತಿಕಾರನಿಗೆ ಧಾರ್ಮಿಕ ಮುಂಚೂಣಿಯಲ್ಲಿದ್ದ ವೈದಿಕರ ಕುರಿತಂತೆ ಈ ರೀತಿಯ ಚಿತ್ರಣ ನೀಡುವುದು ಸಾಧ್ಯವಾಗುತ್ತಿರಲಿಲ್ಲ.೧೬ನೆಯ ಶತಮಾನದಲ್ಲಿ ಕೃಷ್ಣಾನದಿಯ ತೀರದಲ್ಲಿ ಇಂತಹ ಆಚರಣೆಗಳು ಸಮಾಜ ಒಪ್ಪಿತ ಮೌಲ್ಯಗಳೇ ಆಗಿದ್ದವು. ವೈದಿಕ ಸಂಸ್ಕೃತಿಯಿರಬಹುದು, ಅವೈದಿಕ ಸಂಸ್ಕೃತಿಯಿರಬಹುದು. ಅವುಗಳಲ್ಲಿ ಕೃತಕ ಹಾಗೂ ಸಹಜ ಸಂಗತಿಗಳೆರಡೂ ಇರುತ್ತವೆ. ಮೇಲಿನ ಎರಡು ಉಲ್ಲೇಖಗಳು ಸಹಜ ಸಂಸ್ಕೃತಿಯಲ್ಲಿ ಬರುತ್ತವೆ. ಸತಿಸಹಗಮನ ಹಾಗೂ ವೈಧವ್ಯ ಕೃತಕವಾಗಿರುತ್ತವೆ. ನಮ್ಮಲ್ಲಿ ಸಹಜತೆಗಿಂತಲೂ ಕೃತಕ ಶ್ರೇಷ್ಠತೆಗೆ ಹೆಚ್ಚಿನ ಗೌರವವಿದೆ.

ಕೋಮುವಾದಿ ಸಂಘಪರಿವಾರದವರು ಚಿತ್ರಕಥೆಯನ್ನಷ್ಟೇ ಅಲ್ಲ, ಅದರ ಶಿರ್ಷಿಕೆಯನ್ನೂ ವಿರೋಧಿಸುತ್ತಿದ್ದಾರೆ. ಅವರ ಪ್ರಕಾರ ಪವಿತ್ರ ಗಂಗಾನದಿಯ ಹೆಸರನ್ನು ಕುಲಗೆಡಿಸುವ ಉದ್ದೇಶ ಚಿತ್ರದ ಶಿರ್ಷಿಕೆಯಲ್ಲಿದೆ. ಅದಕ್ಕಾಗಿ ಅದನ್ನು ತೀವ್ರವಾಗಿ ವಿರೋಧಿಸುತ್ತಿದ್ದಾರೆ. ಭಾರತೀಯರಲ್ಲಿ ಜಲಸಂಸ್ಕೃತಿ-ಅತ್ಯಂತ ಪ್ರಬಲವಾಗಿದೆ. ನಮ್ಮಲ್ಲಿ ನೀರು ಕೇವಲ ನೀರಲ್ಲ. ಮಾತೃದೇವತೆಯಾದ ಅದು ಹೆಣ್ತನದ, ತಾಯ್ತನದ, ಫಲವಂತಿಕೆಯ ಸಂಕೇತ. ಒಟ್ಟಾರೆ ಅದು ಜೀವನದ ಸಂಕೇತ. ಆರ್ಯರಿಗೆ ಅಗ್ನಿ ಶ್ರೇಷ್ಠವಾದರೆ, ದ್ರಾವಿಡರಿಗೆ ನೀರು

ಶ್ರೇಷ್ಠ. ಇವರು ಹೆಣ್ಣನ್ನು ಅತ್ಯಂತಿಕ ಶಕ್ತಿಯೆಂದು ನಂಬುತ್ತಾರೆ. ''ವಿಧವೆ ನೀರು ಹೊತ್ತುಕೊಂಡು ಎದುರಿಗೆ ಬಂದರೆ ಅಶುಭ, ಮುತ್ತೈದೆ ಬಂದರೆ ಶುಭ'' ಎನ್ನುವ ನಂಬಿಕೆ ನಮ್ಮಲ್ಲಿ ಪ್ರಚಲಿತದಲ್ಲಿದೆ. ಅದಕ್ಕಾಗಿ, ಅಶುಭದ ಸಂಕೇತವಾದ ವಿಧವೆಯರ ಕುರಿತಿರುವ ಚಲನಚಿತ್ರಕ್ಕೆ 'ವಾಟರ್' ಎಂಬ ಶೀರ್ಷಿಕೆ ಏಕೆ ಎಂಬುದು ಅವರ ಪ್ರಶ್ನೆ. ಭಾರತೀಯ ಸಮಾಜದಲ್ಲಿ ನೀರನ್ನು ಯಾರು ಮುಟ್ಟುತ್ತಾರೋ ಅವರ ಮೇಲೆ, ಅದರ ಮೇಲೆ ನೀರಿನ ಗುಣಾವಗುಣಗಳು, ಲಕ್ಷಣಗಳು ನಿರ್ಧರಿತವಾಗುತ್ತವೆ.

ಅರ್ಥ, ಫೈರ್ ಚಲನಚಿತ್ರಗಳು ಬಿಡುಗಡೆಗೊಂಡ ನಂತರ ವಿವಾದವನ್ನೆಬ್ಬಿಸಿದರೆ, 'ವಾಟರ್ ' ಚಿತ್ರೀಕರಣದ ಸಂಧರ್ಭದಲ್ಲಿಯೇ ವಿರೋಧವನ್ನೆದುರಿಸುತ್ತಿದೆ. ಚಿತ್ರದ ಸುತ್ತ ಎರಡು ಪ್ರಮುಖ ಪ್ರಮೇಯಗಳು ಹುಟ್ಟಿಕೊಂಡಿವೆ. 'ಚಿತ್ರಕಥೆ ಹಿಂದೂ ಸಂಸ್ಕೃತಿಗೆ ಧಕ್ಕೆಯನ್ನುಂಟು ಮಾಡುತ್ತದೆ' ಎನ್ನುವದೊಂದು. ಮತ್ತೊಂದು 'ನಮ್ಮ ಸಂಸ್ಕೃತಿಯಲ್ಲಿಯ ತಪ್ಪನ್ನು ಒಪ್ಪಿಕೊಳ್ಳುವದರಿಂದ ನಮ್ಮ ಘನತೆ ಹೆಚ್ಚಾಗುತ್ತದೆ' ಈ ಪ್ರಮೇಯಗಳು ಸಿನಿಮಾದಲ್ಲಿದೆಯೋ, ಸಿನಿಮಾ ತೆಗೆಯುವವರ ಮನಸ್ಸಿನಲ್ಲಿದೆಯೋ ಎಂಬುದನ್ನು ಮೊದಲು ಅರ್ಥಮಾಡಿಕೊಳ್ಳಬೇಕು. ಬಹಳ ಬಾರಿ ಅವರೇ ಕಟ್ಟಿದ ಪ್ರಮೇಯಕ್ಕೆ, ಅವರೇ ವಿರೋಧವನ್ನು ಸೃಷ್ಟಿಸಿಕೊಳ್ಳುತ್ತಿರುತ್ತಾರೆ. ಇದು ಪ್ರಚಾರ ಮಾಧ್ಯಮದ 'ತಂತ್ರ'. ಅದಕ್ಕಾಗಿ ದೀಪಾ ಮೆಹ್ತಾಳನ್ನು ಮುಗ್ಧವಾಗಿ ನಾವು ನಂಬುವಂತಿಲ್ಲ. ಅವಳ ಉದ್ದೇಶ ಒಳ್ಳೆಯದಿರಬಹುದು. ಆದರೆ ಆಕೆಯ ಮನೋಭಾವವನ್ನು ನಂಬುವಂತಿಲ್ಲ.

ಉತ್ತರ ಪ್ರದೇಶದ ಸರಕಾರ ಹಾಗೂ ಜನತೆಯಿಂದ ಚಿತ್ರೀಕರಣಕ್ಕೆ ವಿರೋಧ ಎದುರಿಸುತ್ತಿರುವ ದೀಪಾ ಮೆಹ್ತಾ, ನರ್ಮದ ನದಿ ತೀರದಲ್ಲಿ, ಹೂಗ್ಲಿ ನದಿ ದಂಡೆಯಲ್ಲಿ ವಾಟರ್ ಚಿತ್ರೀಕರಣಕ್ಕೆ ಆಯಾ ರಾಜ್ಯದ ಮುಖ್ಯ ಮಂತ್ರಿಗಳಿಂದ ಆಹ್ವಾನವನ್ನು ಪಡೆದುಕೊಂಡಿದ್ದಾಳೆ. ಬಿಹಾರ ಸರಕಾರವೂ ಕೂಡ ಹಸಿರು ನಿಶಾನೆಯನ್ನು ಬೀಸಿ ಚಿತ್ರೀಕರಣಕ್ಕೆ ಸ್ವಾಗತಿಸಿದೆ. ಚಿತ್ರೀಕರಣಕ್ಕೆ ಆಹ್ವಾನ ನೀಡಿದ ಮೂರೂ ಪಕ್ಷಗಳು ಬಿಜೆಪಿಯೇತರ ಸರಕಾರಗಳು ಎಂಬುದನ್ನು ಮರೆಯಬಾರದು. ದೀಪಾ ಮೆಹ್ತಾಳನ್ನೊಳಗೊಂಡಂತೆ ಇವರಾರೂ ವಿಧವಾ ಸಮಸ್ಯೆಯ ಕುರಿತು ತಲೆಕೆಡಿಸಿಕೊಂಡಿಲ್ಲ. ಅದು ಅವರಿಗೆ ತೀವ್ರವಾಗಿ ಕಾಡಿಯೂ ಇಲ್ಲ. ನಮ್ಮ ಪತ್ರಿಕೆಗಳು ಚಿತ್ರದ ನಿರ್ದೇಶಕಿಗೆ ನಟಿಯರಿಗೆ, ರಾಜಕೀಯ ನಾಯಕರಿಗೆ ಹಾಗೂ ಕೋಮುವಾದಿ ಶಕ್ತಿಗಳಿಗೆ ಬಿಟ್ಟಿ ಪ್ರಚಾರ ವನ್ನು ನೀಡಿದವು. ನಿಜವಾದ ವಿಧವೆಯ ಆಕ್ರಂದನವನ್ನು ಯಾರಿಗೂ ಕೇಳಿಸಿದಂತೆ ಮುಚ್ಚಿ ಹಾಕಿದವು.

ಭಾರತದಲ್ಲಿ ಹೆಣ್ಣಿನ ಮೇಲೆ ಎರಡು ನಿಟ್ಟಿನಲ್ಲಿ ಶೋಷಣೆ ನಡೆದಿದೆ. ೧.ಬಹುಪತ್ನಿತ್ವ, ೨. ಮಹಾ ಮಾಸ್ತಿತ್ವ. ಮೊದಲನೆಯದರಲ್ಲಿ ಹೆಣ್ಣನ್ನು ತಾನಿರುವವರೆಗೂ ಭೋಗದ ವಸ್ತುವನ್ನಾಗಿ ಮಾಡಿಕೊಳ್ಳುವನು. ಅದು ಬಹು ಆಗುವವರೆಗೂ ಮಾಡಿಕೊಳ್ಳುವನು. ಎರಡನೆಯದರಲ್ಲಿ ಒಂದು ವೇಳೆ ತಾನು ಸತ್ತರೆ ತನ್ನ ಜೊತೆಗೆ ಅವರನ್ನು ನಾಶಮಾಡುವ

ಪ್ರವೃತ್ತಿ ಕಂಡುಬರುತ್ತದೆ. ವೈಧವ್ಯ ಹೊತ್ತುಕೊಂಡು ಈ ಸಮಾಜದಲ್ಲಿ ಮೌನದಿಂದ ಬದುಕುವುದು ಅಷ್ಟು ಸುಲಭವಲ್ಲ.

ವೈದಿಕ ಮೂಲದಿಂದಲೇ ವೈಧವ್ಯದ ಪರಿಕಲ್ಪನೆ ಮೂಡಿದೆ. ಮಾತೃಪ್ರಧಾನ ಘಟ್ಟದಲ್ಲಿ ವಿವಾಹ, ವೈಧವ್ಯ ಎರಡೂ ರೂಪಗಳು ಅಸ್ತಿತ್ವದಲ್ಲಿರಲಿಲ್ಲ. ವೈದಿಕ ಸಂಸ್ಕೃತಿ ಪ್ರಬಲವಾಗಿ ಶ್ರೇಷ್ಠತೆಯ ಹಣೆ ಪಟ್ಟಿಕೊಂಡು ಮೆರೆಯತೊಡಗಿದಾಗ ಮಾತೃಪ್ರಧಾನ ಘಟ್ಟದ ಎಲ್ಲ ಆಚರಣೆಗಳು ಕಣ್ಮರೆಯಾದವು. ಭಾರತದಲ್ಲಿನ ಅನೇಕ ಜಾತಿ ಧರ್ಮಗಳಿಗೆ, ವೈದಿಕ ಸಂಪ್ರದಾಯದ ಪ್ರಭಾವವಲಯದಿಂದ ಬಿಡಿಸಿಕೊಳ್ಳಲಾಗಲಿಲ್ಲ. ಇದರ ಪರಿಣಾಮದಿಂದಲೇ ಭಾರತದಲ್ಲಿ ವೈಧವ್ಯ ಎನ್ನುವುದು ತೀವ್ರ ತರ ಸಮಸ್ಯೆಯಾಗಿ ಕಾಡಿದೆ. ಹೀಗಾಗಿ ಈ ಸಮಸ್ಯೆಯ ಕುರಿತಂತೆ ಅನೇಕ ಚಳುವಳಿಗಳು ನಡೆದವು. ರಾಜಾರಾಮ್ ಮೋಹನರಾಯ, ದಯಾನಂದ ಸರಸ್ವತಿ, ಈಶ್ವರಚಂದ್ರ ವಿದ್ಯಾಸಾಗರ ಮೊದಲಾದವರೆಲ್ಲ ವಿಧವಾ ಸಮಸ್ಯೆಗೆ ತೀವ್ರವಾಗಿ ಹೋರಾಟ ನಡೆಸಿದರು. ವಿಧವಾ ವಿವಾಹದ ಚಳುವಳಿಯ ನೇತಾರರೆಲ್ಲರೂ ಬ್ರಾಹ್ಮಣ ಸಮಾಜಕ್ಕೆ ಸೇರಿದವರು ಎಂಬುದು ಗಮನಿಸಬೇಕಾದ ಸಂಗತಿ. ತಮ್ಮ ಜನಾಂಗದಲ್ಲಿಯ ವಿಧವಾ ಸಮಸ್ಯೆಯ ತೀವ್ರತೆಯನ್ನು ಮನಗಂಡಿದ್ದ ರಿಂದಲೇ, ಅದನ್ನೇ ತಮ್ಮ ಹೋರಾಟದ ಅಂತಿಮ ಧ್ಯೇಯವಾಗಿಸಿಕೊಂಡರು. ಆದರೂ ಅವುಗಳು ಸಮಾಜದಿಂದ ಕಣ್ಮರೆಯಾಗಿಲ್ಲ. ಧಾರ್ಮಿಕ ಪರಿಧಿಯೊಳಗೆ ಸ್ತ್ರೀಕೇಂದ್ರವಾಗಿಟ್ಟು ಕೊಂಡು ಹೆಣೆದ ಇಂತಹ Sadist ಆಚರಣೆಗಳು ಅಷ್ಟು ಸುಲಭವಾಗಿ ಸಮಾಜದಿಂದ ಕಣ್ಮರೆಯಾಗುವುದಿಲ್ಲ. ಅವುಗಳನ್ನು ಇಲ್ಲವಾಗಿಸಲು ಪ್ರಯತ್ನಿಸಿದಷ್ಟು, ಅವು ಪ್ರಬಲವಾಗಿ ತಮ್ಮ ಅಸ್ತಿತ್ವವನ್ನು ಉಳಸಿಕೊಳ್ಳಲು ಪ್ರಯತ್ನಿಸುತ್ತವೆ.

ವೈಧವ್ಯದ ವಿಧಿ ಆಚರಣೆಗಳು ಬ್ರಾಹ್ಮಣರಲ್ಲಿ ಉಗ್ರ ಕ್ರೂರವಾಗಿದ್ದರೆ, ಬ್ರಾಹ್ಮಣೇತರ ರಲ್ಲಿ ಸೌಮ್ಯ ಕ್ರೂರವಾಗಿವೆ. ಹೀಗಾಗಿ ವಿಧವೆಯರ ನೋವನ್ನು ಎದುರಿಗಿಟ್ಟುಕೊಂಡು ಯಾವುದು ಸಹ್ಯ ಯಾವುದು ಸಹ್ಯವಲ್ಲ ಎಂದು ತಕ್ಕಡಿಯಲ್ಲಿಟ್ಟು ನೋಡುವುದು ಅಷ್ಟು ಉಚಿತವಲ್ಲ. ವೈದಿಕ ಸಂಸ್ಕೃತಿ ಹಾಗೂ ಅದರ ಪ್ರಭಾವ ವಲಯಕೊಳ್ಳಗಾದ ವೈದಿಕೇತರ ಸಂಸ್ಕೃತಿಗಳು ವಿಧವೆಯರ ಕುರಿತಂತೆ ಮಾನವೀಯ ನೆಲೆಗಳಿಂದಾಚೆ ನಿಂತು ಮಾತನಾಡಿವೆ. ತಲೆಯನ್ನು ಬೋಳಿಸಿಕೊಳ್ಳುವುದು, ರವಿಕೆ ಹಾಕಿಕೊಳ್ಳದಿರುವುದು, ಒಂದ್ಹೊತ್ತು ಮಾತ್ರ ಊಟ ಮಾಡುವುದು ವಿಪ್ರ ವಿಧವೆಯರ ಲಕ್ಷಣಗಳು. ಇವುಗಳು, ಸಾಮಾಜಿಕ ಅಪರಾಧವೆಸಗಿದ ವ್ಯಕ್ತಿಗೆ ನೀಡುವ ಕಠಿಣ ಶಿಕ್ಷೆಗಳಂತಿವೆ. ವೈದಿಕೇತರ ಬಹುಪಾಲು ಜಾತಿ ಧರ್ಮಗಳಲ್ಲಿ ಈ ಯಾವ ಆಚರಣೆಗಳಿಲ್ಲದಿದ್ದರೂ, ವಿಧವೆಯನ್ನು ಗೌರವದಿಂದ ಕಂಡಿಲ್ಲ. ಮರುಮದುವೆಗೆ ಅವಕಾಶವನ್ನು ನೀಡಿಲ್ಲ. ಹೀಗಾಗಿ ಇವರಿಬ್ಬರಲ್ಲಿ ಯಾರ ನೋವು ಹೆಚ್ಚು ಎಂದು ಪ್ರತ್ಯೇಕಿಸಿ ನೋಡುವ ಬದಲು, ಅವರನ್ನೆಲ್ಲ ಒಂದೆಡೆ ಇಟ್ಟು ಸಮಸ್ಯೆಯ ಸ್ವರೂಪವನ್ನು ಗ್ರಹಿಸಬೇಕಿದೆ. ಮಹಿಳಾ ಸಮಸ್ಯೆಗಳನ್ನು ಬಿಡಿ-ಬಿಡಿಯಾಗಿ ನೋಡುವ ಬದಲು, ಇಡಿಯಾಗಿ ಗಮನಿಸುವ ಅಗತ್ಯವಿದೆ. ಹೀಗಾದಾಗ ಅವುಗಳಿಗೆ

ಸಮಗ್ರ ಸ್ವರೂಪ ದೊರೆಯುತ್ತದೆ. ಇದರಿಂದಾಗಿ, ಮಹಿಳಾ ಹೋರಾಟಕ್ಕೆ ಹೆಚ್ಚಿನ ಬಲ ಬಂದಂತಾಗುತ್ತದೆ. ಹೀಗಾದರೆ ಸ್ತ್ರೀ ಮೇಲಿನ ಶೋಷಣೆಯ ತೀವ್ರತೆ ಇಳಿಮುಖವಾಗಬಹುದು.

ಅಧ್ಯಯನದ ಅನುಕೂಲಕ್ಕಾಗಿ ಉತ್ತರ ಭಾರತದ ವಿಧವೆಯರು, ದಕ್ಷಿಣ ಭಾರತದ ವಿಧವೆಯರು ಎಂದು ಎರಡು ಬಗೆಗಳಲ್ಲಿ ವಿಂಗಡಿಸಿಕೊಂಡಿದೆ. 'ವಾಟರ್ ' ಚಿತ್ರಕಥೆಯ ಕುರಿತಂತೆ ತೀವ್ರವಾದ ವಿವಾದ ಹಾಗೂ ವಿರೋಧ ಹುಟ್ಟಿಕೊಂಡದ್ದು ಉತ್ತರ ಭಾರತದಲ್ಲಿಯೇ. ಈಗಲೂ ಉತ್ತರಭಾರತ ಆರ್ಯ ಸಂಸ್ಕೃತಿ ಪ್ರಧಾನವಾದುದಾಗಿದೆ. ಅದನ್ನು 'ಕೃಷ್ಣ ಸಂಸ್ಕೃತಿ'ಎಂದು ಗುರುತಿಸಬಹುದು. ರಾಜತ್ವ ಬಂದ ತಕ್ಷಣ ವಿಷ್ಣು ಹುಟ್ಟಿಕೊಂಡನು. ವಿಷ್ಣುವಿನ ಅವತಾರವಾಗಿರುವ ಕೃಷ್ಣನು ಪ್ರಬಲವಾಗಿ ಬೆಳೆದು ನಿಂತನು. ಅವನು ಕನ್ಯೆಯರನ್ನು, ಗಂಡುಳ್ಳ ಬಾಲೆಯರನ್ನು, ವಿಧವೆಯರನ್ನು ಕೆಣಕುತ್ತಾನೆ, ಛೇಡಿಸುತ್ತಾನೆ. ಕೃಷ್ಣಪರಿಕಲ್ಪನೆಯೇ ಹೆಣ್ಣಿನ ಸ್ಥಾನವನ್ನು ಭೋಗದ ಸರಕಿಗೆ ಇಳಿಸಿತು. ವಿಲಾಸ ಜೀವನದ ಜನರು ಅದನ್ನು ವೈಭವೀಕರಿಸಿದರು. ಅದರಿಂದಾಗಿ ಮಹಿಳಾ ಸ್ಥಾನಮಾನಗಳು ಏಕದಂ ಎಂಬಂತೆ ಜರ್‍ರನೆ ಇಳಿದವು. ಹೀಗಾಗಿ ಉತ್ತರ ಭಾರತದಲ್ಲಿ ವಿಧವೆಯರು ಮನೆಯಿದ್ದೂ ಅನಾಥರಾಗುತ್ತಾರೆ. ದೇವಾಲಯಗಳಲ್ಲಿ, ವಿಧವಾ ಆಶ್ರಮಗಳಲ್ಲಿ ಆಶ್ರಯ ಪಡೆಯುತ್ತಾರೆ. ಇದು ಅಲ್ಲಿರುವ ವಾಸ್ತವ ಭೀಕರ ಸತ್ಯ. ದಕ್ಷಿಣ ಭಾರತದಲ್ಲಿ ದ್ರಾವಿಡ ಸಂಸ್ಕೃತಿಯ ಸೊಗಡಿದೆ. ಹೀಗಾಗಿ ಇಲ್ಲಿ 'ವೈಧವ್ಯ' ಎನ್ನುವುದು ಎಷ್ಟೇ ಕ್ರೂರ ಸ್ವರೂಪವನ್ನು ಪಡೆದುಕೊಂಡಿದ್ದರೂ, ವಿಧವೆಯರನ್ನು ಮನೆಯೊಳಗೆ ಇಟ್ಟುಕೊಳ್ಳುವ ಉದಾರತೆಯನ್ನು ಉಳಿಸಿಕೊಂಡಿವೆ. ಆ ದೊಡ್ಡಸ್ತಿಕೆಯ ಮುಸುಕಿನಲ್ಲಿಯೇ ಅವರನ್ನು ತೊತ್ತಿನಂತೆ ದುಡಿಸಿಕೊಳ್ಳುತ್ತದೆ. ಆ ಮಾತು ಬೇರೆ. ಫಣಿಯಮ್ಮನಂತಹ ವಿಧವಾ ಕೇಂದ್ರಿತ ಚಲನಚಿತ್ರಗಳು ಕನ್ನಡದಲ್ಲಿ ಮೂಡಿಬಂದಿದ್ದರೂ, ಅವುಗಳು 'ವಾಟರ್' ನಷ್ಟು ಗಲಾಟೆಯನ್ನೆಬ್ಬಿಸಲಿಲ್ಲ.

ಭಾರತೀಯ ದೃಷ್ಟಿಕೋನದಲ್ಲಿ ವಿಧವೆಯರನ್ನು ಮೊದಲಿನಿಂದಲೂ ಸಹಜವಾಗಿ ನೋಡಿಲ್ಲ. 'ವೈಧವ್ಯ'ಎನ್ನುವುದು ಭೀಕರವಾದುದು, ನರಕಮಯವಾದುದು. ಗಂಡ ಇದ್ದೂ ಯಾತನೆಯನ್ನು ಅನುಭವಿಸುವುದು ಬೇರೆಯಾಗುತ್ತದೆ. ಅದು ಅಷ್ಟು ಭೀಕರವಾಗಿರುವುದಿಲ್ಲ. ವೃದ್ಧಾಪ್ಯದಲ್ಲಿ ವೈದವ್ಯ ಬಂದರೆ ಅದು ಅಷ್ಟು ತೀವ್ರ ಸಮಸ್ಯೆಯಾಗಿ ಕಾಡಲಾರದು. ಕಾರಣ ಅವಳಲ್ಲಿರುವ ದೈಹಿಕ ಹಸಿವು ಇಂಗಿ ಹೋಗಿರುತ್ತದೆ. ಹೊಟ್ಟೆ ಹಸಿವು ಅಷ್ಟಾಗಿ ಕಾಡಿಸದು. ಯೌವ್ವನದಲ್ಲಿ ವೈಧವ್ಯ ಪ್ರಾಪ್ತವಾದರೆ ಸಹ್ಯವಾಗದ ಜೀವನವನ್ನು ಸಾಗಿಸಬೇಕಾಗುತ್ತದೆ. ಹೊಟ್ಟೆ ಹಸಿವು ಹಾಗೂ ದೈಹಿಕ ಹಸಿವು ಅವಳನ್ನು ತೀವ್ರವಾಗಿ ಕಾಡುತ್ತಿರುತ್ತದೆ. ಇದರಲ್ಲಿ ಮೊದಲನೆಯದನ್ನು ತುಂಬಬಹುದು. ಆದರೆ, ಎರಡನೆಯದನ್ನು ತುಂಬಲಾಗುವುದಿಲ್ಲ. ಇವೆರಡರ ಜೊತೆಗೆ ಸಾಮಾಜಿಕ ಅಪಮಾನವು ಅವಳನ್ನು ಆಳವಾಗಿ ಚುಚ್ಚುತ್ತಿರುತ್ತದೆ. ಶರಣರು ಪ್ರಮುಖವಾಗಿ ಮೂರು ಸಂಗತಿಗಳನ್ನು ಪ್ರಸ್ತಾಪಿಸುತ್ತಾರೆ ೧. ಪ್ರಾಣ, ೨.ಅರ್ಥ, ೩. ಅಭಿಮಾನ. ಮೊದಲಿನ ಎರಡು ಸಂಗತಿಗಳನ್ನು

ಕಳೆದುಕೊಂಡರೆ ಏನೂ ಕಳೆದುಕೊಂಡಲಾಗುವುದಿಲ್ಲ. ಇಲ್ಲಿ ಅಭಿಮಾನದ ಪ್ರಶ್ನೆ ಬಹುಮುಖ್ಯವಾಗಿ ನಿಲ್ಲುತ್ತದೆ. ಅಭಿಮಾನ ಹೋದರೆ ಬದುಕೇ ಕ್ಷುಲ್ಲಕವಾಗುತ್ತದೆ. ಅದಕ್ಕಾಗಿಯೇ ಗರತಿ 'ಕರುಣ ಬಂದರೆ ಕಾಯೋ, ಮರಣ ಬಂದರೆ ಒಯ್ಯೊ ! ಕರುಣೆ ಕಲ್ಯಾಣಿ ಬಸವಣ್ಣ! ಕಡೆತನಕ ಕಾಯೋ ಅಭಿಮಾನ''ಎಂದಿರುವಳು.

ವೈಧವ್ಯದ ಕ್ರೂರಮುಖಗಳು ಸಮಾಜದಲ್ಲಿ ಜೀವಂತವಾಗಿದ್ದರೂ ಅವುಗಳು ಈ ಫ್ಯಾಸಿಸ್ಟ್ ಶಕ್ತಿಗಳಿಗೆ ಅಪಮಾನಗೊಳಿಸುವುದಿಲ್ಲ, ಕೆರಳಿಸುವುದಿಲ್ಲ. ಬದಲಾಗಿ ಸಂಸ್ಕೃತಿಯ ವರ್ಚಸ್ಸನ್ನು ಹೆಚ್ಚಿಸುತ್ತವೆ.

ಗಂಡನ ಸಾವಿನ ನಂತರ ಆಕೆಯನ್ನು ವಿಕಾರಗೊಳಿಸಿ ವಿಕರ್ಷಣೆಗೆ ಈಡು ಮಾಡುವುದೇ ವಿಧವಾ ಸಂಪ್ರದಾಯದ ಮೂಲ ಉದ್ದೇಶ. ಕಲ್ಪನೆಗೂ ಕೈಗೆಟುಕದ ಈ ನೀಚ ಆಚರಣೆ ಈ ಫಾಸಿಸ್ಟ್ ಹೃದಯಗಳಿಗೆ ತಾಕಿಲ್ಲ.

ಒಮ್ಮೆ ವೈಧವ್ಯ ಬಂತು ಎಂದರೆ ಅವಳು ಸಾರ್ವಜನಿಕರ ಸರಕಾಗುತ್ತಾಳೆ. ಆಗ ಯಾವನೋ ಒಬ್ಬ ಇಲ್ಲವೆ ಆಯ್ದ ಕೆಲವರು ಅಥವಾ ಹಲವರು ಅವಳ ಮೇಲೆ ಅಧಿಕಾರ ಸ್ಥಾಪಿಸಲು ಪ್ರಯತ್ನಿಸುತ್ತಾರೆ. ಇಂತಹ ಸಂದರ್ಭಗಳಲ್ಲಿ ಅವಳು ಒಬ್ಬನ ಸರಕಾಗಬಹುದು ಅಥವಾ ಆಯ್ದ ಕೆಲವರ ಸರಕಾಗಬಹುದು. ಇಲ್ಲವೆ ಸರ್ವರ ಸರಕಾಗಬಹುದು. ಕ್ರೀಡಾಭಿರಾಮದಲ್ಲಿ ಮೂರು ಬಗೆಗಳ ವಿಧವೆಯರು ನಮಗೆ ದೊರೆಯುತ್ತಾರೆ ಕ್ರೀಡಾಭಿರಾಮದಲ್ಲಿಯ ವಿಧವೆಯರ ಜೀವನ ಮೇಲ್ನೋಟಕ್ಕೆ, ಅವಳ ಲೈಂಗಿಕ ಸ್ವಾತಂತ್ರ್ಯವನ್ನು ಎತ್ತಿ ಹಿಡಿದಂತೆ ಕಾಣಬಹುದು. ಪುರುಷರ ಲೈಂಗಿಕ ದಬ್ಬಾಳಿಕೆಗೆ ಒಳಗಾದ ಕಹಿಸತ್ಯ ಅದರ ಆಂತರ್ಯದಲ್ಲಡಗಿದೆ. ಆದ್ದರಿಂದ ಇಂತಹ ಸಂಪ್ರದಾಯಾಚರಣೆಗಳನ್ನು ಕೈಬಿಟ್ಟು ಅವಳಿಗೆ ಮರುವಿವಾಹ ಅವಕಾಶವನ್ನು ಕಲ್ಪಿಸಿಕೊಡಬೇಕು. ಅಂತಹ ಮದುವೆಗಳನ್ನು ಗೌರವಿಸಬೇಕು. ಹೀಗಾದರೆ ವಿಧವೆಗೆ ಕೌಟುಂಬಿಕ ಹಾಗೂ ಸಾಮಾಜಿಕ ಗೌರವವನ್ನು ನೀಡಿದಂತಾಗುತ್ತದೆ. ನಾನು ಪುರುಷಶಾಹಿ ವ್ಯವಸ್ಥೆ ರೂಪಿಸಿದ ವೈವಾಹಿಕ ಚೌಕಟ್ಟನ್ನು ವೈಭವೀಕರಿಸುತ್ತಿದ್ದೇನೆ, ಅನಿವಾರ್ಯವಾಗಿಸುತ್ತಿದ್ದೇನೆ ಎಂದಲ್ಲ. ಪ್ರತಿಯೊಬ್ಬ ವ್ಯಕ್ತಿಗೂ 'ಒಂದು ವಯಸ್ಸಿನಲ್ಲಿ ಸಂಗಾತಿಯ ಅಗತ್ಯವಿರುತ್ತದೆ. ಅದನ್ನು ಸಮಾಜದಲ್ಲಿ ಸಮ್ಮತವಾಗಿಸಲು 'ವಿವಾಹ' ಒಂದು ನೆಪ ಮಾತ್ರ. ಈ ನಿಟ್ಟಿನಲ್ಲಿ ವೈವಾಹಿಕ ಪರಿಕಲ್ಪನೆಯನ್ನು ಸ್ವೀಕರಿಸಬೇಕು. ಗಂಡು ಹೆಣ್ಣುಗಳ ನಡುವೆ ಶ್ರೇಣಿಕರಣ ಇಲ್ಲದ ಮದುವೆಗಳು ಆರೋಗ್ಯಕರ ಸಮಾಜಕ್ಕೆ ಬುನಾದಿಯಾಗಬಲ್ಲವು.

ವಾಟರ್ ಚಿತ್ರಕಥೆಯನ್ನಾಗಲಿ, ಅದನ್ನು ನಿರ್ದೇಶಿಸುತ್ತಿರುವ ದೀಪಾ ಮೆಹ್ತಾ ಬಗೆಗಾಲಿ, ವಿರೋಧಿಸುತ್ತಿರುವ ಫ್ಯಾಸಿಸ್ಟ ಶಕ್ತಿಗಳ ಕುರಿತಾಗಲಿ, ಅದಕ್ಕೆ ಹಸಿರು ನಿಶಾನೆ ತೋರಿಸುವ ರಾಜಕೀಯ ಪಕ್ಷಗಳ ಬಗೆಗಾಲಿ ಚರ್ಚಿಸುವುದರಿಂದ ಯಾವುದೇ ರೀತಿಯ ಸಾಮಾಜಿಕ ಹಾಗೂ ಶೈಕ್ಷಣಿಕ ಲಾಭ ದೊರೆಯದು. ಇಲ್ಲಿ ಬಹುಮುಖ್ಯವಾಗಿ

ಚರ್ಚೆಗೊಳಪಡಿಸ ಬೇಕಾಗಿರುವುದು ವಿಧವೆಯರ ಬದುಕು ಹಾಗೂ ಭಾವನೆಗಳನ್ನು. ನಮ್ಮ ಅಧ್ಯಯನಗಳು ಇಂತಹ ಸಾಮಾಜಿಕ ವಸ್ತುಸ್ಥಿತಿಯ ಜೊತೆಗೆ ಹೇಗೆ ಸಮೀಕರಣಗೊಳ್ಳ ಬೇಕೆಂಬ ಸವಾಲು ನಮ್ಮೆದುರಿಗಿದೆ. ಮಹಿಳೆಯರು ಅಧ್ಯಯನದ ವಸ್ತುವಾಗುವ ಬದಲು, ಅವರಲ್ಲಿಯೇ ಸ್ವಯಂ ಜಾಗೃತಿ ಮೂಡಬೇಕಿದೆ. ಅವರೇ ತಮ್ಮ ಸಮಸ್ಯೆಗಳಿಗೆ ಪರಹಾರಗಳನ್ನು ಹುಡುಕಿಕೊಳ್ಳಬೇಕಿದೆ. ಒಂದು ವೇಳೆ ಮಹಿಳೆ ಸಮಸ್ಯೆಗೆ ಪರಿಹಾರವನ್ನು ಕಂಡುಕೊಂಡರೂ ಅದು ಈ ಪುರುಷಶಾಹಿ ಸಮಾಜದಲ್ಲಿ ಅಷ್ಟು ಸುಲಭವಾಗಿ ಚಲಾವಣೆ ಗೊಳ್ಳುತ್ತದೆ ಎಂದು ಹೇಳಲಿಕ್ಕಾಗದು. ಅದರರ್ಥ ಆ ನಿಟ್ಟಿನಲ್ಲಿ ಪ್ರಯತ್ನಪಡುವುದು ವ್ಯರ್ಥ ಎಂದು ಹೇಳುತ್ತಿಲ್ಲ. ಅದರ ಫಲಿತಾಂಶ ಬಹಳ ತಡವಾಗಿ ದೊರೆಯುತ್ತದೆ. ಅಲ್ಲಿಯವರೆಗೂ ಸಹನೆಯಿಂದ ಆಶಾದಾಯಕ ಮನೋಭಾವದಿಂದ ಹೋರಾಟ ಮುಂದುವರಿಸ ಬೇಕಿದೆ.

**ಆಧಾರ ಗ್ರಂಥಗಳು**

೧. ಆರ್ಬ್ವಿಯಸ್ ಸುಂದರಂ (ಅನು), *ವಿನುಕೊಂಡ ವಲ್ಲಭರಾಯ ವಿರಚಿತ,* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೨. ನಾಗೇಗೌಡ ಎಚ್.ಎಲ್. (ಸಂ), *ಪ್ರವಾಸಿ ಕಂಡ ಇಂಡಿಯಾ, ಸಂಪುಟ ೨,* ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೬೬

# ಭಾರತೀಯ ಸ್ತ್ರೀವಾದದ ಆದಿ ಚಿಂತಕಿ

## ತಾರಾಬಾಯಿ ಶಿಂಧೆ(೧೮೫೦-೧೯೧೦)

*ನಿರೂಪಣೆ : ಎಚ್. ಎಸ್. ಶ್ರೀಮತಿ*

ನಾವು ಈವರೆಗೆ ಪುರುಷ ನಿರ್ಮಿತವಾದ ಚರಿತ್ರೆಯ ಮಾದರಿಗಳನ್ನಷ್ಟೇ ನೋಡುತ್ತಾ, ಇದನ್ನೇ ಪ್ರಧಾನ ಧಾರೆಯೆಂದೂ, ಇಲ್ಲಿ ಪ್ರಚುರ ಪಡಿಸಲಾದ ಸಂಗತಿಗಳೇ ವಾಸ್ತವಗಳೆಂದೂ, ಇವೇ ಪರಮ ಸತ್ಯಗಳೆಂದೂ ಒಪ್ಪಿ ಬಿಟ್ಟಿದ್ದೇವೆ. ಸಾಹಿತ್ಯ ಚರಿತ್ರೆಯ ಮಾತಿಗೂ ಇದೇ ಅನ್ವಯವಾಗಿರುವುದು. ಗಂಭೀರ ಚಿಂತನೆ, ಸೃಜನಶೀಲತೆಗಳು ಪುರುಷನಿಗಷ್ಟೇ ದಕ್ಕಿರುವ ಸಾಮರ್ಥ್ಯಗಳೆಂಬಂತೆ ಈ ಸಾಹಿತ್ಯ ಚರಿತ್ರೆಗಳು ಕತೆ ಕಟ್ಟಿವೆ. ಮಹಿಳೆಗೆ ಇಂಥದೊಂದು ಸಾಮರ್ಥ್ಯ ಎಂದೂ ದಕ್ಕಿಲ್ಲ ಎಂದವು ಹೇಳುತ್ತವೆ. ದೊರೆವ ಮಾಹಿತಿಗಳನ್ನು ನಿರ್ಲಕ್ಷ್ಯದಿಂದ ತಮ್ಮ ಮೂಗಿನ ನೇರಕ್ಕೆ ಮೌಲ್ಯಮಾಪನ ಮಾಡಿ ಶ್ರೇಷ್ಠತೆಯ ದರ್ಜೆಗಳನ್ನು ನಿಷ್ಕರ್ಷಿಸಿಬಿಡುವ ನ್ಯಾಯಧೀಶರಾಗಿ ಈ ಚರಿತ್ರೆಕಾರರು ವರ್ತಿಸಿದ್ದಾರೆ. ಇದು ಹೀಗಾದದ್ದು ಹೇಗೆ, ಏಕೆ ಎಂಬ ಚರ್ಚೆಗಳನ್ನು ನಾವಿಂದು ಬೆಳಸಬೇಕಿದೆ. ಜೊತೆಗೆ ನಮ್ಮ ಅಸ್ಮಿತೆಯನ್ನು ಶೋಧಿಸಿಕೊಳ್ಳಲು ನೆರವಾಗುವ ಅಗತ್ಯದ ಮಹಿಳಾ ಚರಿತ್ರೆಗಳನ್ನು ಪುನಾರಚಿಸಿಕೊಳ್ಳಬೇಕಾಗಿದೆ. ಈ ಕೆಲಸವೇನೂ ಸುಲಭವಾದದ್ದಲ್ಲ. ಪ್ರಾಚೀನ ಕಾಲದಿಂದಲೂ ಅವ್ಯಾಹತವಾದ ಧಾಳಿಗಳಲ್ಲಿ ನಾಶವಾಗಿ ಹೋಗಿರುವ, ಅಷ್ಟಿಷ್ಟು ಉಳಿದಿದ್ದರೂ ಅದೂ ಗುರುತು ಸಿಗಲಾರದಂತೆ ಮೂಲೆಗುಂಪಾಗಿ ಹೋಗಿರುವ ಮಾಹಿತಿಗಳನ್ನೂ, ಆಕರಗಳನ್ನೂ ಶೋಧಿಸುವುದೇ ಒಂದು ದೊಡ್ಡ ಸವಾಲು. ಮರು ಮೌಲ್ಯಮಾಪನ ಮಾಡಿ ನಮ್ಮ ಚರಿತ್ರೆಯನ್ನು ರಚಿಸಿಕೊಳ್ಳುವ ಮಾತು ಆಮೇಲಿನದು.

ಮಹಿಳಾ ಸಾಹಿತ್ಯ ಚರಿತ್ರೆಯನ್ನು ಹೀಗೆ ಪುನಾರಚಿಸುವ ಒಂದು ಸ್ತುತ್ಯ ಪ್ರಯತ್ನವನ್ನು ಸೂಸಿಥಾರೂ ಹಾಗೂ ಕೆ.ಲಲಿತ ಅವರು 'Women writing in India'ದ ಎರಡು ಬೃಹತ್ ಸಂಪುಟಗಳನ್ನು ಸಂಪಾದಿಸುವ ಮೂಲಕ ಮಾಡಿದ್ದಾರೆ. ಕ್ರಿ.ಪೂ.೬೦೦ ರಿಂದ ನಮ್ಮ ಕಾಲದವರೆಗಿನ ಭಾರತೀಯ ಮಹಿಳಾ ಸಾಹಿತ್ಯವನ್ನು ಪ್ರಾತಿನಿಧಿಕವಾಗಿಯಷ್ಟೇ ಸಂಗ್ರಹಿಸಿ ಇಂಗ್ಲಿಷ್ ಅನುವಾದದಲ್ಲಿ ಕೊಟ್ಟಿದ್ದಾರೆ. ತೀರಾ ಶ್ರಮದಾಯಕವೂ, ದೊಡ್ಡ ಸವಾಲಿನದೂ ಆದ ಇಂಥಾ ಯೋಜನೆ ನಮ್ಮ ಸ್ತ್ರೀವಾದಿ ಚಿಂತನೆಗಳನ್ನು ಪುಷ್ಟಿಗೊಳಿಸುವಲ್ಲಿ ಸಮಯಕ್ಕೆ ಒದಗಿ ಬರುವ ಆಧಾರವೆನಿಸಬಲ್ಲುದು. ಭಾರತದ ವಿವಿಧ ಭಾಷೆಗಳಲ್ಲಿನ

ಮಹಿಳಾ ಸಾಹಿತ್ಯದ ಕೆಲವೇ ಮುಖ್ಯ ಮಾದರಿಗಳನ್ನಷ್ಟೇ ನೋಡಿದರೂ ನಮ್ಮ ಮಹಿಳೆಯರ ಭಾವನೆಗಳು, ಕನಸುಗಳು, ಆಶಯಗಳು, ಲೋಕಗ್ರಹಿಕೆ, ಚಿಂತನಾಶಕ್ತಿ, ಅಭಿವ್ಯಕ್ತಿ ಸಾಮರ್ಥ್ಯಗಳ ಸ್ವರೂಪ ದರ್ಶನವಾಗುತ್ತದೆ. ಅದರಲ್ಲೂ ಎಂದಿನಿಂದಲೂ ಮಹಿಳೆಯರ ಬದುಕು ಪುರುಷ ನಿಯಂತ್ರಣದ ಸಮಾಜದಲ್ಲಿ ಉಸಿರಾಡುತ್ತಾ ಶಿಕ್ಷಣದ ಸೌಲಭ್ಯದ ಮಾತಿರಲಿ ಚಲನವಲನಗಳ ಸ್ವಾತಂತ್ರ್ಯವೂ ಇಲ್ಲದ ಸ್ಥಿತಿಯಲ್ಲಿ ಸಾಗಿ ಬಂದಿದೆ ಎಂಬುದನ್ನು ಲಕ್ಷಿಸಬೇಕು. ದೊರಕಿರುವಷ್ಟೇ ಮಹಿಳಾ ಸಾಹಿತ್ಯದ ಮೌಲ್ಯಮಾಪನ, ಶ್ರೇಷ್ಠತೆಯ ತೀರ್ಪು, ಮಹಿಳಾ ಸಾಮರ್ಥ್ಯವನ್ನು ಕುರಿತ ಅಪಹಾಸ್ಯ - ಇಂಥವುಗಳನ್ನು ಹೇಗೆ ಗ್ರಹಿಸಬೇಕೆಂದು ತೀರ್ಮಾನಿಸಬಹುದು.

ಇಂದಿನ ನಮ್ಮ ಸ್ತ್ರೀವಾದಿ ಚಿಂತನೆಗಳನ್ನು ಅನುಕೂಲವಂತರಾದ ಮಹಿಳೆಯರು ಹೊತ್ತು ಹೋಗದ್ದಕ್ಕಾಗಿ ಪಾಶ್ಚಾತ್ಯ ಅನುಕರಣೆಯಲ್ಲಿ ಸೃಷ್ಟಿಸುತ್ತಿರುವ ಅನಗತ್ಯ ಕಲ್ಪನೆಗಳು ಎಂದು ದೂರುವವರಿದ್ದಾರೆ. ಸ್ತ್ರೀವಾದಿ ಚಿಂತನೆಗಳನ್ನು ಮಂಡಿಸಿದ ಆದಿ ಪ್ರವರ್ತಕಿಯರಲ್ಲಿ ಸಿಮಾನ್ ದಬುವಾ ಅವರನ್ನು ಗುರುತಿಸಲಾಗುತ್ತದೆ. ಪುರುಷ ಸಮಾಜ ತನ್ನ ಅನುಕೂಲಕ್ಕೆ ತಕ್ಕಂತೆ ಸ್ತ್ರೀಪುರುಷ ಮಾದರಿಗಳನ್ನು ನಿರ್ಮಿಸಿದೆ ಎಂಬುದನ್ನು ಆಕೆ The Second Sex ಎಂಬ ತನ್ನ ಕೃತಿಯಲ್ಲಿ ವಿಸ್ತಾರವಾಗಿ ಪ್ರತಿಪಾದಿಸಿದ್ದಾಳೆ. ಪಾಶ್ಚಾತ್ಯ ಮಹಿಳೆಯರ ಬದುಕಿನ ಕಷ್ಟಗಳು ಭಾರತೀಯರದಕ್ಕಿಂತ ಭಿನ್ನವೇನೂ ಅಲ್ಲ. ಆದರೆ ಕಾಲಮಾನದಲ್ಲಿ ನಮಗಿಂತ ಸ್ವಲ್ಪ ಮುಂಚಿತವಾಗಿ ದೊರೆತ ಶಿಕ್ಷಣಾವಕಾಶಗಳು ಅವರಿಗೆ ತಮ್ಮ ಚಿಂತನೆಗಳನ್ನು ಕ್ರಮಬದ್ಧವಾಗಿ ಹೇಳುವಲ್ಲಿ ನೆರವನ್ನಿತ್ತಿರಬಹುದು. ಜೊತೆಗೆ ಇಂಗ್ಲಿಷ್ ಭಾಷೆ ಜಾಗತಿಕ ನೆಲೆಯಲ್ಲಿ ವಿಸ್ತರಿಸುತ್ತಾ ಹಬ್ಬಿ ಹರಡಿದ ವಿಧಾನದಿಂದಾಗಿ ಆ ಭಾಷೆಯಲ್ಲಿ ಏನನ್ನೇ ಹೇಳಿದರೂ ಅದು ಜಗತ್ತಿನಲ್ಲಿ ವ್ಯಾಪಿಸುವುದೂ ಸಾಧ್ಯವಾಯಿತು. ಫ್ರೆಂಚ್, ಜರ್ಮನ್ ಅಥವಾ ಇನ್ನಾವುದೇ ಭಾಷೆಯಲ್ಲೇ ಹುಟ್ಟಿದ ಬರಹಗಳು ಇಂಗ್ಲಿಷಿಗೆ ರವಾನೆಗೊಂಡು ಎಲ್ಲೆಲ್ಲೂ ತಲುಪಿದವು. ಇಂಗ್ಲಿಷ್ ವಸಾಹತುವೇ ಆದ ಭಾರತದ ಪ್ರಜೆಗಳೂ ಪ್ರಪಂಚವೆಲ್ಲವನ್ನೂ ಇಂಗ್ಲಿಷಿನಲ್ಲಿ ಗ್ರಹಿಸಿದೆವು. ದೇಶಭಾಷೆಗಳಿಗೆ ಇಂಥಾ ಅನುಕೂಲವೇನೂ ಇಲ್ಲ. ಇಂದಿಗೂ ವ್ಯಾಪಕತೆ ಬೇಕೆಂದರೆ ದೇಶಭಾಷೆಗಳು ಇಂಗ್ಲಿಷಿಗೆ ರವಾನೆಗೊಳ್ಳಲು ಪ್ರಯತ್ನಿಸುವುದೇ ಸುಲಭ ಮಾರ್ಗವೆನಿಸುವ ಸಂದರ್ಭವಿದೆ. ಅಂಥದ್ದರಲ್ಲಿ ಸಿಮಾನ್‌ದ ಬುವಾರಿಗಿಂತ ಒಂದು ನೂರು ವರ್ಷಗಳಷ್ಟು ಹಿಂದೆಯೇ ನಮ್ಮಲ್ಲಿ ಉಗ್ರ ಸ್ತ್ರೀವಾದಿಗಳಿದ್ದರು ಎಂದರೆ ನಮ್ಮ ಈವರೆಗಿನ ಸಾಂಪ್ರದಾಯಿಕ ಸಾಹಿತ್ಯ ಚರಿತ್ರೆಗಳಲ್ಲಿ ನಂಬಲರ್ಹವಾದ ದಾಖಲೆಗಳೇ ಇಲ್ಲವಲ್ಲ. ಆದರೆ ಈ ಸತ್ಯವನ್ನು ನಮ್ಮ ಮಹಿಳಾ ಚಿಂತಕಿಯರು ಸಮರ್ಥ ಆಧಾರಗಳೊಂದಿಗೆ ಇಂದು ಪ್ರತಿಪಾದಿಸುತ್ತಿದ್ದಾರೆ. ಇದಕ್ಕೆ ಒಂದು ನಿದರ್ಶನವಾಗಿ ಮರಾಠಿಯ ತಾರಾಬಾಯಿ ಶಿಂಧೆ(ಕ್ರಿ.ಶ.೧೮೫೦-೧೯೧೦)ಯವರನ್ನು ನೋಡಬಹುದು. ಈಕೆಯನ್ನು ಕುರಿತು Women Writing in Indiaದಲ್ಲಿ ಸ್ವಲ್ಪ ಮಾಹಿತಿ ಇದೆ. ಜೊತೆಗೆ ತಾರಾಬಾಯಿಯವರ 'ಸ್ತ್ರೀ ಪುರುಷ ತುಲನಾ' ಎಂಬ ಪ್ರಬಂಧದ

ಸ್ವಲ್ಪ ಭಾಗವೂ ಇದೆ. ತಾರಾಬಾಯಿ ಶಿಂಧೆಯ ಬದುಕಿನ ವಿವರಗಳು ತಿಳಿದಿರುವುದು ತೀರಾ ಸ್ವಲ್ಪ. ಮೇಲು ಜಾತಿಯಲ್ಲಿ ಜನಿಸಿ, ಸಾಕಷ್ಟು ವಿದ್ಯಾವಂತಳಾಗಿದ್ದ ಆಕೆಯ ಮದುವೆ ತೀರಾ ಚಿಕ್ಕ ವಯಸ್ಸಿಗೇ ಆಯಿತಂತೆ. ಗಂಡನೆನಿಸಿದವನು ಅರ್ಹನಲ್ಲ. ಸ್ವತಂತ್ರ ಪ್ರವೃತ್ತಿಯ, ಧೈರ್ಯದ ಹೆಣ್ಣು ತಾರಾಬಾಯಿಗೆ ಆತನ ಬಗ್ಗೆ ಗೌರವಾದರಗಳು ಉಳಿಯಲಿಲ್ಲ. ಪರಿಣಾಮವಾಗಿ ಆಕೆ ಅದೆಷ್ಟೋ ಕಷ್ಟದ ಸಂದರ್ಭಗಳನ್ನು ಎದುರಿಸಿದ್ದಿರಬೇಕು. ಅದೆಲ್ಲಾ ಕಲ್ಪಿತ ಚರಿತ್ರೆಯೇ. ಆದರೆ ವಿದ್ಯಾವಂತಳೂ, ಅತಿಸೂಕ್ಷ್ಮ ಬುದ್ಧಿವಂತಳೂ ಆದ ಆಕೆ ಸ್ತ್ರೀಪುರುಷ ಸಂಬಂಧಗಳು ಪುರುಷ ನಿರ್ಮಿತ ಸಾಮಾಜಿಕ ಸಿದ್ಧಮಾದರಿ ಹಾಗೂ ಸಂದರ್ಭಗಳಲ್ಲಿಯೇ ಹೇಗೆ ಹೊರಳುತ್ತಿರುತ್ತವೆ ಎಂಬುದನ್ನು ಚೆನ್ನಾಗಿಯೇ ಗ್ರಹಿಸಿದಳು. 'ಪುಣೆ ವೈಭವ್' ಎಂಬ ಸಾಪ್ತಾಹಿಕವೊಂದರಲ್ಲಿ ವಿಜಯಲಕ್ಷ್ಮಿ ಎಂಬಾಕೆಯ ಬಗ್ಗೆ ಧಾಳಿರೂಪದ ವರದಿ ಬಂದಿತ್ತಂತೆ. ವಿಜಯಲಕ್ಷ್ಮಿಗೆ ಗರ್ಭಪಾತವಾಯಿತೇ ಅಥವಾ ಆಕೆ ಮಗುವನ್ನು ಉದ್ದೇಶಪೂರ್ವಕ ಕೊಂದಳೇ ಎಂಬ ವಾದ ಮಾಡಿ ಕೋರ್ಟು ಅವಳಿಗೆ ಮರಣ ದಂಡನೆಯನ್ನು ನೀಡಿತ್ತು. ತೀವ್ರ ಮೂಲಭೂತವಾದಿ 'ಪುಣೆ ವೈಭವ್'ಆಕೆಯನ್ನು ಸಾರ್ವಜನಿಕವಾಗಿ ಕಟಕಟೆಯಲ್ಲಿ ನಿಲ್ಲಿಸಿ, ಇಂದಿನ ಮಹಿಳೆಯರಲ್ಲಿ ನೈತಿಕತೆಯೇ ಸಡಿಲಗೊಳ್ಳುತ್ತಿದೆ ಎಂದು ಘರ್ಜಿಸಿತ್ತು. ಈ ವರದಿಗೆ ತಾರಾಬಾಯಿ ಶಿಂಧೆಯವರು ನಲವತ್ತು ಪುಟಗಳ ಒಂದು ಸಣ್ಣ ಪುಸ್ತಿಕೆಯಾಗುವಷ್ಟು ದೀರ್ಘ ಪ್ರಬಂಧವನ್ನು ಬರೆದು ಪ್ರತಿಕ್ರಿಯಿಸಿದರು. ಈ ದೀರ್ಘ ಪ್ರಬಂಧವನ್ನು ಪೂರ್ಣವಾಗಿ ಇಲ್ಲಿ ಪ್ರಸ್ತಾಪಿಸುವುದು ಕಷ್ಟ. ಆದರೆ ನಮ್ಮ ಸ್ತ್ರೀವಾದಿ ಚಿಂತನೆಗಳಿಗೆ ಸಾಕಷ್ಟು ಹಿಂದಿನ ಚರಿತ್ರೆ ಇರುವುದನ್ನೂ ಆ ಚರಿತ್ರೆ ಸಾಕಷ್ಟು ಪ್ರಖರವಾಗಿರುವುದನ್ನೂ ಮನಗಾಣಿಸಲು ಆ ದೀರ್ಘ ಪ್ರಬಂಧದ ಕೆಲವು ಮುಖ್ಯ ಭಾಗಗಳನ್ನಷ್ಟೇ ಇಲ್ಲಿ ಸಂಕ್ಷಿಪ್ತ ಸಾರರೂಪದಲ್ಲಿ ಕೊಡಲಾಗಿದೆ.

ವಿಜಯಲಕ್ಷ್ಮಿಯ ಪ್ರಸಂಗದ ನೆಪದಲ್ಲಿ, ತನ್ನ ಬದುಕಿನ ಅನುಭವದ ಹಿನ್ನೆಲೆಯಲ್ಲಿ ತಾರಾಬಾಯಿ ಶಿಂಧೆಯವರು ರಚಿಸಿದ ಪ್ರಬಂಧದ ಹೆಸರು 'ಸ್ತ್ರೀಪುರುಷ ತುಲನಾ'. ತಾರಾಬಾಯಿ ತಾನೊಬ್ಬ ಆಶಕ್ತ ಮಂಕು ಹೆಣ್ಣು, ಮರಾಠಾ ಮನೆತನವೊಂದರಲ್ಲಿ ಬಿದ್ದಿರುವ ಬಂಧಿ ಎಂದು ಹೇಳುತ್ತಾ 'ಆದರೆ ಈ ಪುರುಷ ದಬ್ಬಾಳಿಕೆ, ದ್ವಂದ್ವ, ವಿಶ್ವಾಸ ದ್ರೋಹಗಳು ನನ್ನನ್ನು ಒರಟಳನ್ನಾಗಿ, ಮೊಂಡಳನ್ನಾಗಿ ಮಾಡಿಬಿಟ್ಟಿದೆ. ನಾನು ಹೇಳಬೇಕಾದದ್ದನ್ನು ನಯನಾಜೂಕಿನಲ್ಲಿ ಹೇಳುವಷ್ಟು ತಾಳ್ಮೆ ಸಾಧ್ಯವಿಲ್ಲ. ಪೆಡಸು ಭಾಷೆಯಲ್ಲಿ ಘರ್ಜಿಸಲೇ ಬೇಕಿದೆ' ಎನ್ನುತ್ತಾರೆ. ಹೆಂಗಸರು ಒಬ್ಬರಿಗೊಬ್ಬರು ನೆರವಾಗುವ ಸಮುದಾಯವೆನಿಸಬೇಕು ಎಂಬ ಸ್ತ್ರೀವಾದಿ ಚಿಂತನೆಯನ್ನು ಇಂಗ್ಲಿಷಿನಲ್ಲಿ Sister hood ಎಂಬ ಪರಿಭಾಷೆಯಲ್ಲಿ ಹೇಳುತ್ತಾರೆ. ಇದನ್ನು ತಾರಾಬಾಯಿ ಸ್ಪಷ್ಟವಾಗಿ ಪ್ರತಿಪಾದಿಸುತ್ತಾ ವಾಸ್ತವದಲ್ಲಿ ಗಂಡಸರಿಗಿಂತ ಹೆಂಗಸರೇ ಧೈರ್ಯಸ್ತರು ಎನ್ನುತ್ತಾರೆ. 'ದಿನನಿತ್ಯವೂ ನಾವು ಗಂಡಸರ ಕ್ರೌರ್ಯ, ದುಷ್ಟತನ ಹಾಗೂ ಕುಟಿಲತೆಗಳ ಭಯಂಕರ ಸಂದರ್ಭಗಳಲ್ಲಿ ಬೀಳುತ್ತಲೇ ಇರುತ್ತೇವೆ. ನಾವುಗಳಾರೂ ಈ ಬಗ್ಗೆ ಲಕ್ಷ್ಯ ಕೊಡಲು ಕೂಡ ಹೋಗುವುದಿಲ್ಲ.

ಆದರೂ ಸಮಾಜ ಮಾತ್ರ ಹೆಂಗಸರ ಮೇಲೆಯೇ ಸದಾ ಗೂಬೆಗಳನ್ನು ಕೂರಿಸುತ್ತದೆ' ಎಂಬುದನ್ನು ತಾರಾಬಾಯಿ ಪ್ರಾಚೀನ ಸಾಹಿತ್ಯ ಸಂದರ್ಭಗಳನ್ನು ನಿದರ್ಶನವಾಗಿ ಬಳಸಿ ನಿರೂಪಿಸುತ್ತಾರೆ. ಸ್ತ್ರೀವಾದಿ ಸಾಹಿತ್ಯ ವಿಮರ್ಶೆಯ ಮಾದರಿಯನ್ನು ನಾವಿಲ್ಲಿ ಕಾಣುತ್ತೇವೆ. ದೇವರು, ಧರ್ಮಗಳ ಕಲ್ಪನೆ ಸಮಾಜ ನಿಯಂತ್ರಣದಲ್ಲಿ ಸುಸೂತ್ರವಾಗಿ ಒದಗಿ ಬರುವ ಸಾಧನ. ಅದಕ್ಕೇ ತಾರಾಬಾಯಿ ಮೊದಲಿಗೆ ಈ ದೇವರನ್ನೇ ತರಾಟೆಗೆ ತೆಗೆದುಕೊಳ್ಳುವುದು. ಸರ್ವಶಕ್ತನೂ, ಸಕಲ ಜೀವಗಳನ್ನು ಸಮಾನವಾಗಿ ಸೃಷ್ಟಿಸಿದವನೂ ನೀನೇ ಅಲ್ಲವೇ? ಹಾಗಾದರೆ ಪುರುಷನಿಗೆ ಎಲ್ಲ ಸುಖಗಳು, ಸ್ತ್ರೀಗೆ ದುಃಖಗಳೆಲ್ಲವೂ ಎಂಬಂತೆ ಹಂಚಿದೆ ಏಕೆ?.

ದಿನನಿತ್ಯದ ವ್ಯವಹಾರಗಳಲ್ಲೂ, ಸಾಹಿತ್ಯ ಕೃತಿಗಳಲ್ಲೂ ಹೆಂಗಸೆಂದರೆ ದೋಷಪೂರಿತಳು, ಪಾಪಿ ಎಂದೇ ಹೇಳಲಾಗಿದೆ. ಆದರೆ ಇಲ್ಲಿ ಹೇಳಲಾದ ಎಲ್ಲ ದೋಷಗಳೂ, ಪಾಪಗಳೂ ನಿನ್ನ ಸೃಷ್ಟಿಯ ಆ ಗಂಡಸಿನಲ್ಲೂ ಇದ್ದೇ ಇವೆ.

ತಾರಾಬಾಯಿ ದೇವರನ್ನು ನೆಪವಾಗಿಟ್ಟುಕೊಂಡು ಮಾತನಾಡುತ್ತಾ ಮಾನವ ಸಹಜವಾದ ಎಲ್ಲ ದೋಷಗಳನ್ನು, ಪಾಪಗಳನ್ನು ಒಂದೊಂದಾಗಿ ವಿಂಗಡಿಸಿ ಹೇಳುತ್ತಾಳೆ. ಹೆಂಗಸಿನ ಮಾತಿಗೆ ಬಂದಾಗ ಮಾತ್ರ ಸಮಾಜ ಈ ದೋಷಗಳನ್ನೂ ಪಾಪಗಳನ್ನೂ ಅಪರಾಧಗಳೆಂದು ಪರಿಗಣಿಸಿ ಶಿಕ್ಷೆಗಳನ್ನು ನಿರ್ಣಯಿಸುತ್ತದೆ. ಗಂಡಸಿನ ಮಾತಿಗೆ ಬಂದರೆ ಮಾತ್ರ ಇವು ಅಪರಾಧಗಳೆನಿಸುವುದಿಲ್ಲ. ಎಷ್ಟೋ ವೇಳೆ ಈ ದೋಷ ಪಾಪಗಳಿಗೆ ಹೊಗಳಿಕೆ, ಪುರುಸ್ಕಾರಗಳೇ ಸಿಗಬಹುದು.

ಹೆಣ್ಣು ಮಾಯೆ ಎನ್ನುವರು. ಪುರುಷನು ಸೃಷ್ಟಿಸಿ ಬಳಸುವ ಮಾಯೆಮಾಟಗಳ ಶಕ್ತಿಯ ಮುಂದೆ ಅವಳೆಷ್ಟರವಳು?

ಹೆಣ್ಣು ಸಂಶಯ ಸ್ವಭಾವದವಳೆನ್ನುವರು. ಇರಬಹುದು. ಶಿಕ್ಷಣದ ಅಭಾವ, ಅವಲಂಬನೆಯ ಬದುಕಿನ ಸ್ಥಿತಿಗಳಲ್ಲಿ ಆಕೆ ವೈಯಕ್ತಿಕ ಸಂಬಂಧಗಳ ವಿಚಾರದಲ್ಲಿ ಸಂಶಯ ಪಿಶಾಚಿಯೇ ಆಗಿರಬಹುದು. ಆದರೆ ಗಂಡಸಿನ ಸಂಶಯ ಇದೊಂದಕ್ಕೆ ಸೀಮಿತವಲ್ಲ. ತನ್ನ ಸುತ್ತಲಿನ ಎಲ್ಲವನ್ನೂ ಅವನು ಸದಾ ಸಂದೇಹದಿಂದಲೇ ನೋಡುವುದು. ಹೆಣ್ಣು, ಹೊನ್ನು, ಮಣ್ಣುಗಳೆಂಬ ಭೇದವಿಲ್ಲದೆ ಎಲ್ಲ ಸಂದರ್ಭಗಳನ್ನು ಸಂದೇಹಿಸುತ್ತ, ತನ್ನ ನಿಯಂತ್ರಣದಲ್ಲಿ ಎಲ್ಲವೂ ಇರಬೇಕೆಂದು ಬಯಸಿ ಮೋಸ, ವಂಚನೆ, ಕಪಟತನಗಳಿಂದ ಕೂಡಿದ ಷಡ್ಯಂತ್ರಗಳನ್ನು ಯೋಜಿಸುತ್ತಲೇ ಇರುತ್ತಾನೆ. ಹೆಂಗಸು ಹೀಗೆ ವಿಕೃತವಾಗಿ ಎಂದೂ ವರ್ತಿಸಲಾರಳು.

ಹೆಂಗಸರನ್ನು ಪತಿತೆಯರು, ವಂಚಕಿಯರು ಎನ್ನುತ್ತಾರೆ. ಆದರೆ ಅಪವಿತ್ರ ಕೆಲಸಗಳಲ್ಲಿ ತೊಡಗುವಲ್ಲಿ, ವಿಶ್ವಾಸದ್ರೋಹ ಮಾಡಿ ಬೆನ್ನಿಗೆ ಇರಿಯುವಲ್ಲಿ ಗಂಡಸರು, ಹೆಂಗಸರನ್ನು ಮೀರಿಸಿ ಮೆರೆಯುತ್ತಾರೆಂಬುದು ವಾಸ್ತವದ ಸಂಗತಿ. ಹೀಗಿದ್ದರೂ ಗಂಡಸು ಭಗವಂತನೇ ಆಗಿ ಪುರುಷೋತ್ತಮನೆನಿಸಿ ಬಿಡುತ್ತಾನೆ.

ಆಯ್ತು. ಹೆಣ್ಣೆಂದರೆ ಓದಲು ಬರೆಯಲು ಬಾರದ ದಡ್ಡ ಕೋಣವೇ ಎನ್ನೋಣ. ಅಥವಾ ದಡ್ಡ ಹಸು ಎನ್ನಿ. ಓದಲು, ಬರೆಯಲು ಬಾರದ ಮೂರ್ಖಳೇ ಸರಿ. ಆದರೆ ಆ ದೇವರು ಅವಳ ತಲೆಯಲ್ಲಿ ಅಲ್ಪಸ್ವಲ್ಪಕ್ಕಾದರೂ 'ಬುದ್ಧಿ'ಯನ್ನು ಇರಿಸಿದ್ದಾನೋ, ಅದೂ ಇಲ್ಲವೋ? ಕೆಲವೊಂದು ಸಲ ಹೆಂಗಸರು ತರ್ಕದ ಚಾಕಚಕ್ಯತೆಯನ್ನು ತೋರದೆ ದುಡುಕುತ್ತಾರೋ, ಏನೋ? ಹೀಗಿದ್ದೂ ಗಂಡಸರ ಪ್ರಳಯಾಂತಕ ಬುದ್ಧಿವಂತಿಕೆಗಿಂತ ಇದು ಎಷ್ಟೋ ಅಪೇಕ್ಷಣೀಯ! ನಮ್ಮ ಜೈಲುಗಳನ್ನೊಮ್ಮೆ ಭೇಟಿ ಮಾಡಿದರೆ, ಈ ಮಾತಿಗೆ ಸಾಕ್ಷಿಯನ್ನು ಕಾಣಬಹುದು. ಗಂಡಸರ ಪ್ರಳಯಾಂತಕ ಬುದ್ಧಿಗೆ ಇಲ್ಲಿ ತುಂಬಿದ ಕಳ್ಳಕಾಕರೆಲ್ಲರೂ ನಿದರ್ಶನಗಳೇ. ಲಂಚ, ದಗಾ, ಮೋಸ, ಕೊಲೆ, ಕಳ್ಳತನ, ಕಂಡವರ ಹೆಂಡತಿಯರ ಅಪಹರಣ....ಒಂದೇ, ಎರಡೇ. ಇಷ್ಟೊಂದು ವೈವಿಧ್ಯಮಯ ಪಾಪಗಳನ್ನು ತಮ್ಮ ಅಪಾರ ಬುದ್ಧಿವಂತಿಕೆಯಿಂದ ಮಾಡಿದ ಹೆಂಗಸರು ಈ ಪ್ರಮಾಣದಲ್ಲಂತೂ ಇಲ್ಲ.

ಹೆಂಗಸರು ವ್ಯಭಿಚಾರಿಗಳೆಂಬುದು ಅವರ ಮೇಲಿರುವ ಇನ್ನೊಂದು ತೀವ್ರತರ ಆರೋಪ. ಆಯ್ತು. ಹಾಗೆಂದೇ ಒಪ್ಪೋಣ. ಆದರೆ ಯಾರ ಪ್ರೇರಣೆಯಿಂದ ಅವರು ಈ ಪಾಪದಲ್ಲಿ ತೊಡಗುತ್ತಾರೆ? ಈ ಪಾಪದಲ್ಲಿ ಪಾಲುಗೊಳ್ಳಲು ಮೊದಲಿಗೆ ಮುಂದಾಗುವವನು ಗಂಡಸು ತಾನೇ? ಹೆಂಗಸು ತನ್ನಷ್ಟಕ್ಕೆ ಒಬ್ಬಳೇ ಈ ಲೀಲೆಯಲ್ಲಿ ತೊಡಗುವುದಿಲ್ಲವಷ್ಟೆ? ವಾಸ್ತವದಲ್ಲಿ ಕಟ್ಟಿಕೊಂಡವನು ಒಂದಿಷ್ಟು ಸರಿಯಾಗಿ ಬಾಳಿಸುವವನಾದರೆ ಮತ್ತಿನ್ನಾವ ಕಷ್ಟಗಳಿಗೂ ಹೆಂಗಸು ಹೆದರಲಾರಳು. ಈ ಕುಟುಂಬ ಸೌಖ್ಯಕ್ಕಿಂತ ಹೆಚ್ಚಿಗೇನನ್ನೂ ಆಕೆ ನಿರೀಕ್ಷಿಸುವುದೂ ಇಲ್ಲ. ಆದರೆ ಈ ವಿಚಾರದಲ್ಲಿ ಗಂಡಸಿನ ನಿರೀಕ್ಷೆಗಳೇ ಬೇರೆ. ತನ್ನ ದೇಹಸುಖಕ್ಕಾಗಿ ನೀತಿ ನಿಯಮಗಳನ್ನು, ಧರ್ಮಶಾಸ್ತ್ರಗಳನ್ನು ಪಲ್ಲಟಗೊಳಿಸುತ್ತಾನೆ. ವೈವಿಧ್ಯಕ್ಕಾಗಿ ಪ್ರಯೋಗಗಳನ್ನು ನಡೆಸುತ್ತಾನೆ. ಹೆಂಗಸು ಒಬ್ಬ ಗಂಡಸಿಗೆ ಮೀಸಲಾಗಿರಬೇಕು ಎಂದು ಶಾಸ್ತ್ರ ಹೇಳುತ್ತಲೇ ಸಂತಾನ ಪ್ರಾಪ್ತಿಗಾಗಿ ನಿಯೋಗ ಪದ್ಧತಿಯನ್ನೂ ಹೇಳುತ್ತಾನೆ. ಇದು ಮಾತ್ರ ವ್ಯಭಿಚಾರವಲ್ಲ. ಇದಕ್ಕೆ ಬದಲು ವಿಧವಾ ವಿವಾಹವನ್ನೇಕೆ ಅವನು ಅನುಮೋದಿಸಲಿಲ್ಲ? ವಿಧವಾ ವಿವಾಹಕ್ಕೆ ಆಸ್ಪದವಿದ್ದಿದ್ದರೆ ನಮ್ಮ ದೇಶ ಪರದೇಶಿಗಳ ಸೊತ್ತಾಗುವುದನ್ನು ತಪ್ಪಿಸಬಹುದಿತ್ತು. ನಮ್ಮ ಎಷ್ಟೋ ಜಾಗಿರು, ಇನಾಮು, ವಂಶಪಾರಂಪರ್ಯದ ಆಸ್ತಿಗಳನ್ನು ಕಾಯಿದೆಬದ್ಧ ಹಕ್ಕುದಾರರಿಲ್ಲವೆಂಬ ನೆಪದಲ್ಲಿ ಈ ಸರ್ಕಾರ ಕಿತ್ತುಕೊಳ್ಳುವುದು ಸಾಧ್ಯವಾಗುತ್ತಿರಲಿಲ್ಲ. ಆಕಸ್ಮಾತ್ತಾಗಿ ಗದ್ದುಗೆಯನ್ನು ಕಳೆದುಕೊಂಡ ರಾಜರ ಅಸಹಾಯಕ ರಾಣಿಯರು ಪರಕೀಯ ಗಂಡಸರ ಲೋಭಿ ಕಣ್ಣುಗಳಿಗೆ ಬಿದ್ದು ನಾಶವಾದರು. ಗಂಡಸರ ಈ ಪರಿಯ ವ್ಯಭಿಚಾರದ ಮುಂದೆ ಯಾವ ಹೆಂಗಸಿನ ವ್ಯಭಿಚಾರ ಸಾಟಿಯಾಗಬಲ್ಲದು?

ಹೆಂಗಸರು ಆಸೆಬುರುಕರೆಂಬುದು ಇನ್ನೊಂದು ಗಂಭೀರ ಅಪಾದನೆ. ಆದರೆ ಇನ್ನೊಬ್ಬರ ಎದೆಯ ಮೇಲೆ ಹೆಜ್ಜೆ ಇಟ್ಟು ನಡೆದಾದರೂ ಸರಿ ತಾನಂದುಕೊಂಡದ್ದನ್ನು ಸಂಪಾದಿಸಿಯೇ ಸರಿ ಎಂದು ಭಾವಿಸುವುದು ಗಂಡಸಲ್ಲವೇ? ಎಲ್ಲರಿಂದಲೂ ಸ್ವಾಮಿ, ಸಾಹೇಬರೇ ಅಂತ

ಕರೆಸಿಕೊಳ್ಳಬೇಕು ಎಂಬ ಆಸೆ ಗಂಡಸಿನದು. ತನ್ನ ಈ ಅವಗುಣವನ್ನು ಸ್ತ್ರೀ ಸಮುದಾಯದ ಮೇಲೆ ಆರೋಪಿಸುವುದು ವ್ಯಂಗ್ಯವೇ ಸರಿ.

ಗಂಡಸರು ತಮ್ಮ ಆಸೆ ಬುರುಕತನಕ್ಕೆ ಹೆಂಗಸನ್ನು ಸಾಧನವಾಗಿ ಬಳಸುವುದಿದೆ. ಆಸ್ತಿಪಾಸ್ತಿಯ ಆಸೆಗೆ ತನ್ನ ಹತ್ತು ವರ್ಷದ ಮಗಳನ್ನು ತೊಂಬತ್ತು ವರ್ಷದ ಮುದುಕನಿಗೆ ಧಾರೆಯೆರೆದು ಕೊಟ್ಟುಬಿಡುವ ಅಪ್ಪಂದಿರಿಲ್ಲವೇ? ಅಥವಾ ಮಗಳೆಂದರೆ ತನಗೆ ತುಂಬಾ ಮುದ್ದು ಎನ್ನುತ್ತಾ ಅವಳನ್ನು ಮನೆಯಲ್ಲೇ ಉಳಿಸಿಕೊಳ್ಳಲು ಮನೆ ಅಳಿಯಂದಿರನ್ನು ಹೊಂದಿಸುವ ಅಪ್ಪಂದಿರನ್ನು ನೋಡಿ. ಹಿಂದುಮುಂದಿಲ್ಲದ, ಸ್ವಂತಿಕೆ ಇಲ್ಲ ಹುಡುಗ ಹೀಗೆ ಮನೆ ಅಳಿಯನಾಗಬಹುದು. ಆದರೆ ಇಂಥವನು ಆ ಹುಡುಗಿಯಲ್ಲಿ ಅಭಿಮಾನವನ್ನೇನೂ ತುಂಬಲಾರ.

ವಿದ್ಯಾಬುದ್ಧಿ, ರೂಪಗುಣಗಳಾವುದೂ ಇಲ್ಲದ ಹುಡುಗಿಯನ್ನು ಯಾವ ಹುಡುಗನೂ ಹೆಂಡತಿಯಾಗಿ ಆಯ್ಕೆ ಮಾಡಲಾರ. ಆದರೆ ಇಂಥದೇ ಕಾರಣಕ್ಕೆ ಹುಡುಗ ನನಗೆ ಒಪ್ಪಿಗೆ ಇಲ್ಲ ಎಂದು ಹೇಳುವ ಅವಕಾಶ ಹುಡುಗಿಗೇಕಿಲ್ಲ? ಹುಡುಗನಿಗೆ ಕೆಲವೊಮ್ಮೆ ಅವನ ತಂದೆತಾಯಿಯರು ಬಡತನದ ಕಾರಣದಿಂದ, ಅಥವಾ ಹೆಚ್ಚಿನ ಹಣದ ಆಸೆಯಿಂದ ಸಿರಿವಂತರ ಮನೆಯ ಅವಿದ್ಯಾವಂತ ಕುರೂಪಿ ಹೆಣ್ಣನ್ನು ತರುವುದೂ ಇದೆ. ಆರ್ಥಿಕವಾಗಿ ಸ್ವತಂತ್ರನೆನಿಸುವವರೆಗೂ ಹುಡುಗ ಇವಳನ್ನೇ ಹೆಂಡತಿಯೆಂದು ಒಪ್ಪುತ್ತಾನೆ. ಆದರೆ ನೌಕರಿ, ಸಂಬಳ ಎಂದಾಗಿ ಅವನು ಮೇಲೇರಿದನೆಂದರೆ ಈ ಹೆಂಡತಿಯ ಕುರೂಪ, ಅವಿದ್ಯೆ ಎಲ್ಲವೂ ಅವನಿಗೆ ಅಸಹನೀಯವೆನಿಸಿಬಿಡುತ್ತದೆ. ಅವಳ ಸ್ಥಾನ ಈಗ ಅಡಿಗೆಯಾಳಿಗಿಂತ ಕಡೆಯಾಗುತ್ತದೆ. ಅವಳು ಅವನ ಕಾಲಕಸವಾಗಿ ಬಿಡುತ್ತಾಳೆ. ಹೆಂಡತಿ ಬಡತನದಲ್ಲಾಗಲೀ, ಸಿರಿತನದಲ್ಲಾಗಲಿ ಗಂಡನ ಅಧೀನಳೇ. ಗಂಡನಿಗೇನೂ ಇಂಥಾ ಗತಿ ಬರುವುದಿಲ್ಲ. ಬೇಡವಾದ ಹೆಂಡತಿಯನ್ನು ಮೂಲೆಗೊತ್ತರಿಸಿ ಎರಡು, ಮೂರನೆಯ ಹೆಂಡತಿಯರನ್ನು ಆಯ್ದುಕೊಳ್ಳಲು ಅವನು ಸ್ವತಂತ್ರನಲ್ಲವೇ?

ಹೆಂಗಸು ಬಹುರೂಪಿಯೆನಿಸಿದ ವಂಚಕಿ ಎಂಬುದು ಇನ್ನೊಂದು ಆಪಾದನೆ. ಸ್ವಾಮಿ, ಈ ಬಿರುದಾವಳಿಯಂತೂ ಗಂಡಸರಾದ ನಿಮಗೆ ಅನ್ವಯವಾಗುವಷ್ಟು ಖಂಡಿತವಾಗಿಯೂ ಹೆಂಗಸರಿಗೆ ಆಗುವುದಿಲ್ಲ. ಗೋಸಾಯಿ, ಫಕೀರ, ಹರಿದಾಸ, ಬ್ರಹ್ಮಚಾರಿ, ಸಾಧು, ಯೋಗಿ, ಸನ್ಯಾಸಿ...ಏನೇನೆಲ್ಲ ಆಗಬಲ್ಲಿರಯ್ಯಾ! ಬೂದಿ, ನಾಮ, ರುದ್ರಾಕ್ಷಿ, ಜಟೆ, ಕೌಪೀನ, ಕೇಸರಿ ವಸನ....ಓಹೋ, ಏನೆಲ್ಲ ವೇಷಭೂಷಣಗಳಯ್ಯಾ! ಜಗತ್ತನ್ನಷ್ಟೇ ಅಲ್ಲ ಜಗದೀಶ್ವರನನ್ನೂ ಗೆದ್ದು ಬಂದಿದ್ದೇವೆಂದು ಹೇಳುತ್ತಾ ಪರ್ಯಟನ ಮಾಡುವಿರಿ. ಜನರಿಗೆ ಮಂಕುಬೂದಿ ಎರಚಿ ಕಾಲಿನಡಿ ಹಾಕಿಕೊಂಡು ಬಿಡುವಿರಿ. ಎಲ್ಲ ಆಸೆಗಳನ್ನೂ ತೊರೆದ ಸನ್ಯಾಸಿಗಳೆನಿಸಿ ಭಕ್ತರ ಮನೆಯಲ್ಲಿ ಬೀಡುಬಿಟ್ಟು ಅವರಿಂದ ಪಾದಪೂಜೆ ಮಾಡಿಸಿಕೊಂಡು, ನೈವೇದ್ಯವೆಂದು ಇಟ್ಟ ಭಕ್ಷ್ಯಭೋಜ್ಯಗಳನ್ನುಂಡು, ಅಪಾರ ಧನರಾಶಿಯ ಕಾಣಿಕೆಯನ್ನೂ ಪಡೆಯುವಿರಿ. ಭಕ್ತಿ ಮದವನ್ನು ಇನ್ನಷ್ಟು ಬೆಳೆಸಿ ರಾಧಿಕೆಯರನ್ನಾಯ್ದು ರಾಸಲೀಲೆಯಲ್ಲಿ

ಲೀನರಾದರೂ ನಿಮ್ಮ ಮಹತ್ವಕ್ಕೆ ಯಾವ ಧಕ್ಕೆಯೂ ಬರದು. ಒಟ್ಟಿನಲ್ಲಿ ತಲೆಯ ತುಂಬ ದುಷ್ಟತನವನ್ನೇ ತುಂಬಿಕೊಂಡು ಸದಾಕಾಲವೂ ಜನಸಾಮಾನ್ಯರ ದೌರ್ಬಲ್ಯಗಳ ಮೂಲಗಳನ್ನು ಹುಡುಕುತ್ತಾ ಅವರ ಮೇಲೆ ಧಾಳಿ ನಡೆಸುವುದೇ ನಿಮ್ಮ ಮೂಲ ಉದ್ದೇಶ. ಯಾವ ಹೆಂಗಸು ತಾನೇ ಈ ಲೀಲೆಯನ್ನು ಹೀಗೆ ಮೆರೆಯಲು ಸಾಧ್ಯ? ಹೇಳಿ ಸ್ವಾಮಿ.

ಯಾವುದೇ ಸಾಧನೆಗಳನ್ನೂ ಭಂಗಗೊಳಿಸುವ ಮಾಯಾವಿ ಮೋಹಿನಿಯಾಗಿ ಹೆಣ್ಣು ಸೃಷ್ಟಿಯಾಗಿದ್ದಾಳೆ ಎಂಬುದು ಇನ್ನೊಂದು ದೊಡ್ಡ ಆರೋಪ. ಅವಳ ಕಣ್ಣು, ತುಟಿ, ಕಟಿ, ನಿತಂಬ, ತೊಡೆ ಎಂಬ ಎಲ್ಲ ತಲೆಯಿಂದ ಕಾಲಿನವರೆಗಿನ ಅಂಗಾಂಗಗಳೂ ಸುಂದರ, ಅಸ್ವಾದನೀಯ ಎಂದು ಗಂಡು ಜೊಲ್ಲು ಸುರಿಸಿದರೆ ಅದರಲ್ಲಿ ಅವಳ ತಪ್ಪೇನಿದೆ? ಅವಳ ಅಂಗಾಂಗಗಳು ಅವಳ ಸೃಷ್ಟಿಯೇನೂ ಅಲ್ಲ. ವಿದ್ಯಾಬುದ್ಧಿಗಳು ಬೆಳೆದಂತೆಲ್ಲಾ ಸೃಜನಶೀಲ ಸಾಹಿತ್ಯ ನಿರ್ಮಾಣವೂ ಹರಡುತ್ತಿದೆಯಲ್ಲವೇ? ಪ್ರಣಯ, ಹಾಸ್ಯ, ಕರುಣ ರಸಗಳ ಸಿಂಚನವಿಲ್ಲದೆ ಸಾಹಿತ್ಯ ಬೆಳಗುವುದೆಂಬ ಮಾತೇ ಇಲ್ಲವಾಗಿದೆಯಲ್ಲ! ಆದರೆ ಇಂಥದನ್ನೆಲ್ಲಾ ಬರೆಯುವ ಮುನ್ನ ಈ ಸಾಹಿತಿಗಳು ಈ ಕತೆ ಲೌಕಿಕ ಆಧಾರಗಳನ್ನು, ಸಾಧ್ಯಾ ಸಾಧ್ಯತೆಗಳನ್ನೂ ಹೊಂದಿರಬೇಕೆಂಬುದನ್ನಾದರೂ ಯೋಚಿಸಬೇಕು. ಬದಲಿಗೆ ತಮಗೆ ತೋಚಿದಂತೆಲ್ಲಾ ಕತೆಗಳನ್ನು ಬೆಳೆಸಿ ಹೆಣ್ಣು ಸದಾಕಾಲವೂ ಗಂಡಿನ ಚಿತ್ತವನ್ನು ಭಂಗಗೊಳಿಸುವ ಮೋಹಿನಿ ಮಾಯಾವಿಯಾಗಿ ವರ್ತಿಸುತ್ತಾಳೆಂದು ಚಿತ್ರಿಸಿ ಬಿಟ್ಟಾಕ್ಷಣಕ್ಕೆ ಒಪ್ಪುವುದು ಸಾಧ್ಯವಾಗದ ಮಾತು. ತಮ್ಮ ಅಭಿಪ್ರಾಯವನ್ನಷ್ಟೇ ಗಟ್ಟಿಯಾಗಿ ಹಿಡಿದು ಉಳಿದೆಲ್ಲ ತರ್ಕ, ಸಾಂಗತ್ಯ, ಸಾಧ್ಯಾಸಾಧ್ಯತೆ, ಔಚಿತ್ಯಗಳೆಲ್ಲವನ್ನೂ ಗಾಳಿಗೆ ತೂರಿ ರಚಿಸುವ ಸಾಹಿತ್ಯಗಳಲ್ಲಿ ಮಾತ್ರ ಇಂಥಾ ಹೆಣ್ಣುಗಳನ್ನು ಕಾಣಬಹುದು. ನಿಜ ಜೀವನದಲ್ಲಿ ಖಂಡಿತಾ ಅಲ್ಲ. ಇದಕ್ಕೆ ನಮ್ಮ ಪ್ರಖ್ಯಾತ ಸಾಹಿತ್ಯ ಕೃತಿಗಳಿಂದ ಹೇರಳವಾದ ನಿದರ್ಶನಗಳನ್ನು ಕೊಡಬಹುದು. ಒಂದು ಕೃತಿಯಲ್ಲಿ ನಾಯಕಿ ತನ್ನ ಪ್ರೀತಿಯ ತಂದೆ, ಅರಮನೆ ಎಲ್ಲವನ್ನು ತೊರೆದು ಅಪರಿಚಿತನಾದ ನಾಯಕನು ತಂದ ಪುಷ್ಪಕ ವಿಮಾನವನ್ನೇರಿ ಹೊರಟು ಬಿಡುತ್ತಾಳೆ. ಇನ್ನೊಂದರಲ್ಲಿ ನಾಯಕಿಯನ್ನು ರಾಕ್ಷಸನು ಒಯ್ದು ದಟ್ಟ ಅರಣ್ಯದಲ್ಲಿ ಬಂಧಿಸಿಡುತ್ತಾನೆ. ತನ್ನ ಶೀಲಕ್ಕೆ ಭಂಗ ಬಾರದಂತೆ ಅವಳು ಅವನನ್ನು ದೂರವಿಡಬಲ್ಲಳು. ಈ ಅಬಲೆಯನ್ನು ಸಮೀಪಿಸುವ ಶಕ್ತಿ ಆ ರಾಕ್ಷಸನಿಗಂತೂ ಇರುವುದಿಲ್ಲ. ಪತಿವ್ರತೆಯಾದ ಅಹಲ್ಯೆಯನ್ನು ಇಂದ್ರ ಮೋಸದಿಂದ ಕೂಡಬಹುದಾದರೆ, ಸಾಕ್ಷಾತ್ ಶ್ರೀಕೃಷ್ಣನ ಲೀಲೆಗಳಿಗಂತೂ ಲೆಕ್ಕವೇ ಇಲ್ಲ. ಹೆಣ್ಣಿನ ಮೇಲೆ ಪತಿವ್ರತಾ ಧರ್ಮವನ್ನು ಹೇರುವುದೂ ಗಂಡಸೇ, ಅದನ್ನು ಭಂಗಗೊಳಿಸುವುದೂ ಗಂಡಸೇ. ಈ ಮಧ್ಯೆ ಅಪರಾಧ, ಕಾನೂನು, ನ್ಯಾಯ, ತೀರ್ಪುಗಳಂತೂ ಹೆಣ್ಣನ್ನೇ ಗುರಿಯಿಟ್ಟು ಧಾಳಿ ಮಾಡುವುದು. ಹೆಣ್ಣಿನ ಶೀಲವನ್ನು ಕಾಯುವುದೂ, ಕೆಡಿಸುವುದೂ ಗಂಡಸಿನ ಅಧಿಕಾರವೇ ಎಂದ ಮೇಲೆ ಹೆಂಗಸು ಯಾರ ಮೊರೆ ಹೋಗಬೇಕು? ತನ್ನನ್ನು ಕಾಯ್ದುಕೊಳ್ಳುವುದು ಎಂದರೆ ಅರ್ಥವೇನು? ಇಂಥ ಕತೆಗಳು ಪುಸ್ತಕದ ಬದನೆಕಾಯಿಗಳಷ್ಟೇ. ಹೆಂಗಸಿನ ನೋವು

ಯಾರಿಗೆ ಬೇಕಾಗಿದೆ? ಅವಳು ಬಂಡೆಗೆ ಹಣೆ ಚಚ್ಚಿಕೊಳ್ಳಬೇಕಷ್ಟೇ. ಇಲ್ಲವೇ ಅವನ ಕಾಲಿನಡಿಯ ಧೂಳಾಗಿ ಬಿದ್ದು ಹೊರಳಿದರೆ ಒಂದು ಗತಿ ಕಾಣಲೂಬಹುದೇನೋ? ಈ ಸಾಹಿತ್ಯ ಕೃತಿಗಳ ಘನ ಉದ್ದೇಶವಾದರೂ ಏನು? ಅಲ್ಲಿನ ಬಾಲಿಶ ತರ್ಕವನ್ನು ಗ್ರಹಿಸಿದರೆ ಸಾಕು. ಹೆಣ್ಣಿನ ವಿಚಾರಕ್ಕೆ ಅವು ಎಷ್ಟು ಸುಳ್ಳುಗಳನ್ನು ಪೋಣಿಸುತ್ತಾ ಬಂದಿವೆ ಎಂಬುದು ತಿಳಿಯುತ್ತದೆ.

ಹೆಂಗಸರು ಯಾವ ಪಾಪಗಳನ್ನೂ ಮಾಡಲಾರದ ಅಮಾಯಕರೆಂದೇನೂ ಅಲ್ಲ. ಆದರೆ ಅವರು ಗಂಡಸರಾದ ನಿಮ್ಮನ್ನು ಮೀರಿಸಲಾರರು. ಈಗ ವಿಜಯಲಕ್ಷ್ಮಿಯ ಸಂದರ್ಭವನ್ನೇ ನೋಡೋಣ. ಈಗ ವಿಜಯಲಕ್ಷ್ಮಿ ಕಾಲು ಜಾರಿದಳು ಸರಿ. ಆದರೆ ಅದಕ್ಕೆ ಕಾರಣನಾದ ಗಂಡಸು ಇವಳನ್ನು ಒಲಿಸಿಕೊಂಡವನು ತಾನೇ? ಗಂಡಸು ತನ್ನ ಆಸೆ, ಉದ್ದೇಶ ನೆರವೇರುವವರೆಗೂ ಹೆಣ್ಣಿನ ದಾಸನುದಾಸನಂತೆ ವರ್ತಿಸಲು ಸಿದ್ಧನೇ. ಅವನ ಕೆಲಸ ಮುಗಿಯಿತೆಂದರೆ ಉಳಿದೆಲ್ಲವನ್ನೂ ಅವಳ ತಲೆಯ ಮೇಲೆ ಹಾಕಿ ತಾನು ಸಲೀಸಾಗಿ ಜಾರಿಕೊಂಡು ದೂರ ಸರಿದುಬಿಡುತ್ತಾನೆ. ಸಮಾಜದ ಎದುರು ಅಪರಾಧಿಯಾಗಿ ನಿಲ್ಲುವವಳು ಹೆಂಗಸು ಮಾತ್ರ. ಅವಳೀಗ ಗರ್ಭ ಧರಿಸಿದರೆ ಏನು ಮಾಡಬೇಕು? ಇದಕ್ಕೆ ಕಾರಣನಾದ ಗಂಡಸು 'ನಾನೇನು ಮಾಡಲು ಸಾಧ್ಯ. ಮಾಡಿದ ಪಾಪವನ್ನು ಅನುಭೋಗಿಸು' ಎಂದು ಬಿಟ್ಟರೆ ಅವಳಿಗೆ ಉಳಿಯುವ ದಾರಿಯಾದರೂ ಯಾವುದು? ಮಗುವನ್ನು ಹೆತ್ತು ಸಾಕುತ್ತೇನೆ ಎನ್ನಬಹುದೇ, ಆತ್ಮಹತ್ಯೆಗೆ ಸಿದ್ಧವಾಗಬಹುದೇ, ಮಗುವನ್ನು ಕೊಂದು ಕೊಲೆಗಾರಳಾಗಿ ಕೋರ್ಟಿನ ಕಟಕಟೆಯಲ್ಲಿ ನಿಂತು ಮರಣ ಶಿಕ್ಷೆಯನ್ನು ಸ್ವಾಗತಿಸಬಹುದೇ?

ನಾವಿರುವ ಈ ಬ್ರಿಟಿಷ್ ಆಡಳಿತದ ಮಾದರಿಯಲ್ಲಿ ನ್ಯಾಯದ ತೀರ್ಪು ಸಾಕ್ಷಿಯ ಆಧಾರವಿಲ್ಲದೆ ಒಂದಿಂಚೂ ಅಲುಗಲಾರದು. ಮೇಲೆ ಹೇಳಿದಂತಹ ಸೂಕ್ಷ್ಮ ಸಂದರ್ಭಗಳಲ್ಲಿ ಸಾಕ್ಷಿಗಳನ್ನೆಲ್ಲಿಂದ ತರುವುದು? ಸರ್ಕಾರ ಇಲ್ಲಿ ತಪ್ಪಿತಸ್ಥವಲ್ಲವೇ? ಲಂಚ ಕೊಡುವವನಷ್ಟೇ ಲಂಚ ತೆಗೆದುಕೊಳ್ಳುವವನೂ ಅಪರಾಧಿ ಎಂಬುದನ್ನದು ಹೇಳುತ್ತದೆ. ಈ ಸಂದರ್ಭದಲ್ಲಿ ಈ ಹೆಣ್ಣು ಶಿಕ್ಷಾರ್ಹಳೇ ಹೌದಾದರೆ ಆ ಗಂಡಸಿಗೆ ಅವಳ ಎರಡರಷ್ಟು ದಂಡನೆ ಆಗಬೇಕಲ್ಲವೆ? ಇಂಥ ಗಂಡಸರ ಬಾಯ ಮೇಲೆ ಕಾದಕಬ್ಬಿಣದಿಂದ ಬರೆ ಹಾಕಬೇಕೆಂದು ನಾನು ಸರ್ಕಾರವನ್ನು ಕೇಳಿಕೊಳ್ಳುತ್ತೇನೆ. ಇನ್ನೆಂದಿಗೂ ಇಂಥಾ ಕೆಲಸಕ್ಕೆ ಕೈಹಾಕುವ ಧೈರ್ಯಬರಬಾರದು, ಹಾಗೆ. ಆ ಹೆಂಗಸಿಗಾದ ಗತಿಯೋಚಿಸಿ. ಮರಣ ದಂಡನೆಯೋ, ಜೈಲೋ, ಜೀವಮಾನವಿದ್ದರೂ ಎಲ್ಲರಿಂದ ಬಹಿಷ್ಕಾರಗೊಂಡು ಗೋಳುಗರೆಯುವ ಗತಿಯೋ, ಅಷ್ಟೇತಾನೇ? ಆತ್ಮಹತ್ಯೆ ಎಷ್ಟೋ ಸುಖದ ಸಂಗತಿ ಎನಿಸದಿರದು. ನೀವು ಗಂಡಸರು ಹಾವಿನ ವಿಷಕ್ಕಿಂತಲೂ ಅಪಾಯಕಾರಿಗಳು. ಹಾವಿನ ಕಡಿತದಲ್ಲಿ ಒಂದೇ ಏಟಿಗೆ ಸಾವಾದರೆ, ನೀವು ಇಳಿಸುವ ವಿಷದಿಂದ ಹೆಣ್ಣಿಗೆ ಕಣಕಣವಾಗಿ ಸಾಯುವ ಗತಿ. ಹೆಣ್ಣಿನಿಂದ ಗಂಡಸಿಗೆ ಇಂಥಾ ಅಪಾಯ ಎಂದಾದರೂ ಆಗಿದೆಯೇ?

ಬುದ್ಧಿವಂತಿಕೆಯ ಗುತ್ತಿಗೆಯನ್ನು ಹಿಡಿದವರಂತೆ ನೀವು ಗಂಡಸರು ವರ್ತಿಸುತ್ತೀರಿ. ಕಬ್ಬಿನ ಗದ್ದೆಯಲ್ಲಿ ನುಸುಳಿ ಹಾದರೂ ಆ ಎಲೆಗಳು ನಿಮ್ಮನ್ನು ಸವರಿ ಗೀಚಿ ಗಾಯಗೊಳಿಸದಂತೆ ಎಚ್ಚರ ವಹಿಸಬಲ್ಲ ಚಾಣಾಕ್ಷರು ನೀವು ಎಂಬುದೇನೋ ಸರಿಯೇ. ಎಲ್ಲವೂ ನಿಮ್ಮ ಹಿಡಿತದಲ್ಲಿದೆ. ಗೋಷ್ಠಿಗಳನ್ನು ಕೂಡಿಸಿ, ವೇದಿಕೆಗಳನ್ನೇರಿ ಉದ್ದುದ್ದ ಭಾಷಣಗಳನ್ನು ಹೆಣೆಯುವಿರಿ. ಗಳಹುವ ಅವಕಾಶ ಸಿಕ್ಕಿದ್ದೇ ಉಪದೇಶಾಮೃತವನ್ನು ಹರಿಸುವಿರಿ. ನೀವು ಜಾಣ ಕತ್ತೆಗಳಲ್ಲದೆ ಇನ್ನೇನೂ ಅಲ್ಲ. ದೀಪದ ಕೆಳಗೆ ಯಾವಾಗಲೂ ಕತ್ತಲೆಯೇ. ಆ ಮಾತು ನಿಮಗೆ ಚೆನ್ನಾಗಿ ಒಪ್ಪುತ್ತದೆ. ನಿಮ್ಮೊಳಗೆ ತುಂಬಿರುವ ದುಷ್ಟತನದ ಅರಿವು ನಿಮಗೆ ಬರುವುದು ಸಾಧ್ಯ ಎಂದಾಗ ನಿಮ್ಮ ಎದೆ ಒಡೆದೇ ಹೋದೀತು!

# ನಾವಿಲ್ಲ ದೂರು

*ಮಮತಾ ಜಿ. ಸಾಗರ*

ಯಾಕೆ ಬಂದಿರಿ ನೀವು
ನಾವಿಲ್ಲದೂರಿಗೆ
ನಮ್ಮನರಸುತ್ತ ಕೇರಿ ಕೇರಿ.

ಕಣ್ಣಮುಚ್ಚಾಲೆಯನು ಆಡುವಿರಿ ಯಾತಕ್ಕೆ
ಸುಮ್ಮಸುಮ್ಮನೆ ನಮ್ಮ ಹೆಸರು ಹಿಡಿದು.

ನಾವಿಲ್ಲದೂರಲ್ಲಿ
ನೀವೆ ನಿಮ್ಮನ್ನು ಕೂಗಿ
ತಿರುಗಿ ನೋಡುವಿರಲ್ಲ
ನಾವು ಕರೆದಂತೆ!

ನಿಮ್ಮ ಮಾತನೆ ಆಡಿ, ನಮ್ಮ ಮಾತೆನ್ನುವಿರಿ
ನಿಮ್ಮ ಹಾಡಿಗೆ ನೀವೆ ಮೋಡಿ ಹೋಗುವಿರಿ

ಗಿಡದ ಹಸಿರಲ್ಲಿ
ಕೊಳದ ನೀರಲ್ಲಿ
ಎದೆಯ ಉಸಿರಲ್ಲಿ
ಬಾನ ಅಂಗಳದಲ್ಲಿ
ಹುಡುಕುವಿರಿ ನಮ್ಮ ಸುಳಿವು
ಕೂಗಿ ಕರೆಯುವಿರಿ ನಮ್ಮನ್ನು ಮತ್ತೆ ಮತ್ತೆ

ಗಾಳಿಯಲ್ಲಿ ನಿಮ್ಮದನಿ ತೂರಿಬಿಟ್ಟಿರಿ
ಅದು ಬೆಟ್ಟಕ್ಕೆ ಡಿಕ್ಕಿ ಹೊಡೆದು;
ತಿರುಗಿ ಬಂದರೆ ಮತ್ತೆ ನಮ್ಮ ಹಾಡೆನ್ನುವಿರಿ
ನಿಮ್ಮ ಹಾಡಿನಲ್ಲೆಲ್ಲೂ ನಾವು ಇಲ್ಲ.

ನಮ್ಮ ಹೆಸರೇನೆಂದು
ಇನ್ನೂ ತಿಳಿಯದ ನೀವು

ನಿಮ್ಮ ಹೆಸರನ್ನೇ ನಮಗಿಟ್ಟಿರಿ
ನಮ್ಮ ಕಾಣುವಿರಿ ನಿಮ್ಮ ಬಿಂಬದ ಒಳಗೆ
ನಂಬುವಿರಿ ನಿಮ್ಮಾಸೆ ಕಾಣಬಯಸಿದ್ದು.

ನಾವು ಬಂದರೆ ಮರಳಿ
ಮರೆತ ಊರಿನ ಕಡೆಗೆ
ಕಾಣುವುದು ಎಲ್ಲೆಲ್ಲೂ ನಿಮ್ಮ ಛಾಪು

ಈಗ ಇದು ನಿಮ್ಮೂರು(?)
ಊರ ಮುಂಬಾಗಿಲಿಗೇ
ಬರೆದು ಇಟ್ಟಿದ್ದೀರಿ ನಿಮ್ಮ ಹೆಸರು(!)
ಇಲ್ಲಂತೂ ಗಾಳಿಯಲ್ಲೂ, ನೀರಲ್ಲೂ ಹಾಡಲ್ಲೂ
ಎಲ್ಲೆಲ್ಲೂ ನಿಮ್ಮ ಉಸಿರೇ.

ನಿಮ್ಮ ಕನ್ನಡಿಯಲ್ಲಿ ನಮ್ಮ ಬಿಂಬವು ಕೂಡ
ಕಾಣುವುದು ಥೇಟು ನಿಮ್ಮ ಹಾಗೇ.

ನಮ್ಮನ್ನು ಅರಸುತ್ತಾ
ಅರಸು-ಆಟವನಾಡಿ

ಹೂಡಿಬಿಟ್ಟಿರಿ ಇಲ್ಲೂ ನಿಮ್ಮ ಸಾಮ್ರಾಜ್ಯ
ಮರಳಿ ಬಾರೆವು ಇಲ್ಲಿ, ಈ ಊರು ನಮ್ಮದಲ್ಲ;
ನಾವು ನಿಮ್ಮಂತಿಲ್ಲ, ನಿಮಗೇಕೆ ತಿಳಿದಿಲ್ಲ.

# ಪಾರಿಜಾತದ ಪ್ರೀತಿ

*ಮಮತಾ ಜಿ. ಸಾಗರ*

ನಿಮ್ಮ ಕನಸನ್ನು ಬಿಟ್ಟು
ಆಚೆ ಬಾರೆವು ನಾವು
ಹೀಗೆ ತಡೆದರೆ ನೀವು ತಬ್ಬಿ ಹಿಡಿದು,

ನಿಮ್ಮ ಪ್ರೀತಿಯ ನಮಗೆ
ಒಂದಂಗುಲದ ಜಾಗ
ಕನಸಿನಂತಃಪುರದ ತೋಟಧೊಳಗೆ

ಇಲ್ಲಂತು ತನು-ಮನಕೆ
ಏಳು ಮಲ್ಲಿಗೆ ತೂಕ
ಹೂವ ಎಸಳೇ ಭಾರ, ಹೊರಲಾಗದು.

ನಮ್ಮ ನಡು ಬಳ್ಳಿ,
ನಿಮ್ಮ ಬಾಹುಗಳಲ್ಲಿ
ಸಿಂಗರದ ಅರಮನೆಯ ತೋಟದಲ್ಲಿ

ನಿಮ್ಮ ಬೆರಳಿನ ಸ್ಪರ್ಶ
ನೆಟ್ಟಲ್ಲಿ ಮಲ್ಲಿಗೆ ಸುರಿದು
ತಾಗಿದರೆ ಮೈಯೊಳಗೆ ಮಿಂಚು ಹೊಡೆದು,

ಹುಣ್ಣಿಮೆಯ ಚಂದಿರನ ಸುತ್ತ ತಾರೆಯ ಸಂತೆ
ಬೆಳದಿಂಗಳೇ ಧಗೆ!
ಧಗೆ, ನೀವಿರದ ರಾತ್ರಿಗಳು

ಕನಸು ನಿಮ್ಮದು, ಅಲ್ಲಿ
ರಾಗ ನುಡಿಸಲು ನಾವು(?)
ಮುದ್ದಿಸಲು, ಮೋಹಿಸಲು;
ಅರಸು ನೀವು(?)

ಸಿಂಗರದ ಅರಮನೆಯ
ಅಂತಃಪುರದ ಸುಖ
ಅರಸಿ ಕಂಡದ್ದೆಲ್ಲ ಅಂಕುಡೊಂಕು

ನಮಗೂ ಬೀಳುತ್ತವೆ
ರಂಗು ರಂಗಿನ ಕನಸು
ನಮ್ಮ ಮನೆಯಂಗಳದಿ ಪುಟ್ಟ ತೋಟ

ಬೇಲಿ ಕಟ್ಟೆವು ನಾವು
ಹಬ್ಬುವುದು ಹರಡುವುದು
ಹುಚ್ಚು ಕಾಡಿನ ಹಾಗೆ ದೂರ ದೂರ

ನಿಮಗೂ ತಿಳಿದಿದೆ ನಮ್ಮ ಪಾರಿಜಾತದ ಪ್ರೀತಿ
ಬೆಳಕ ಬೆನ್ನಿಗೆ ಇರುವ ಏಳು ಬಣ್ಣ
ನಿಮ್ಮ ಕನಸು ಬಿಟ್ಟು ಆಚೆ ಬಂದಿದ್ದೇವೆ
ತಡೆಯಲಾರಿರಿ ಇನ್ನು ಅಡ್ಡಗಟ್ಟಿ

# ಮಹಿಳಾ ಶ್ರೇಯೋಭಿವೃದ್ಧಿ

*ಕೆ. ಲಕ್ಷ್ಮಣರಾವ್*

ಪ್ರಪಂಚದ ಅತಿದೊಡ್ಡ ಪ್ರಜಾಪ್ರಭುತ್ವ ದೇಶವೆನಿಸಿದ ಭಾರತ ನಿರುದ್ಯೋಗ, ಬಡತನ, ಭ್ರಷ್ಟಾಚಾರದಿಂದ ಬಸವಳಿಯುತ್ತಿರುವುದು ವಿಪರ್ಯಾಸ. ಒಂದು ಹೊತ್ತು ಉಣ್ಣುವ ಸುಮಾರು ೧೫ ಕೋಟಿ ಮಹಿಳೆಯರು ಈ ದೇಶದಲ್ಲಿದ್ದಾರೆಂದರೆ ದುಃಖದ ಸಂಗತಿ. ಈ ಐವತ್ತು ವರ್ಷಗಳ ಆಡಳಿತದಲ್ಲಿ ನಾವು ಸಾಧಿಸಿದ್ದು ಇದೇನಾ?

ಅಲ್ಲದೇ ಹಿಂಸೆಗೆ, ದಬ್ಬಾಳಿಕೆಗೆ ಕಿರುಕುಳಕ್ಕೆ ಗುರಿಯಾಗಿ ಸಾವನ್ನಪ್ಪುವ ಸ್ತ್ರೀಯರ ಘೋರತೆಯನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದೆ. ಇಷ್ಟು ಸಾಕಲ್ಲವೆ ದೇಶದ ಸಾಮಾಜಿಕ, ಆರ್ಥಿಕ ಸ್ಥಿತಿಗತಿ ತಿಳಿಯಲು. ಸ್ವಾತಂತ್ರ್ಯ ಸುವರ್ಣೋತ್ಸವವನ್ನು ಸಂಭ್ರಮದಿಂದ ಆಚರಿಸಿಕೊಂಡ ಭವ್ಯ ಭಾರತದಲ್ಲಿ ಅಸಂಖ್ಯರಿಗೆ ಕನಿಷ್ಟ ಮೂಲಭೂತ ಸೌಕರ್ಯ ಇಲ್ಲದಿರುವುದು ಎಂಥ ಕಠೋರ ಸತ್ಯ. ದೇಶ ಸಾಗುತ್ತಿರುವುದು ಎತ್ತ, ಅದು ಹೊರಟಿರುವ ಮಾರ್ಗ ಯಾವುದು? ಅದರ ಮಾರ್ಗೋಪಾಯಗಳೇನು? ಇದು ಭಾರತೀಯರನ್ನು ಬಹುಕಾಲದಿಂದ ಕಾಡುತ್ತಿರುವ ಪ್ರಶ್ನೆ.

ಸಾಕ್ಷರತೆಯಲ್ಲಿ ನಿರೀಕ್ಷಿಸಿದಷ್ಟು ಪ್ರಗತಿ ಸಾಧಿಸದಿದ್ದರೂ ಮಾರ್ಪಾಡು ಕಂಡುಬರುತ್ತಿದೆ. ಅಕ್ಷರ ಜ್ಞಾನ ಪಡೆದ ಮಹಿಳೆಯರ ಸಂಖ್ಯೆ ಅಧಿಕಗೊಂಡಿದೆ. ಇವೆಲ್ಲವೂ ಪ್ರಗತಿಗೆ ಸಂಕೇತಗಳಾಗಿದ್ದರೂ ಭಾರತ ದೇಶ ಮಹಿಳಾಭಿವೃದ್ಧಿಯಲ್ಲಿ ೧೭೪ ದೇಶಗಳಲ್ಲಿ ೧೩೯ನೇ ಸ್ಥಾನದಲ್ಲಿದೆ. ಅಂದರೆ ೧೩೮ ದೇಶಗಳ ನಂತರದ ಸ್ಥಾನ ಭಾರತದ್ದಾಗಿದೆ.

ಲಿಂಗ ತಾರತಮ್ಯದಲ್ಲೂ ಭಾರತದ ಸ್ಥಿತಿ ತೀರ ಕಳವಳಕಾರವೆಂದೇ ಅಭಿವೃದ್ಧಿ ಕಾರ್ಯಕ್ರಮ ವರದಿ ಸ್ಪಷ್ಟಪಡಿಸುತ್ತದೆ. ಸ್ತ್ರೀಯರನ್ನು ಪುರುಷ ಸಮಾನವಾಗಿ ನೋಡುವ, ಅವರ ಆಸೆ, ಆಕಾಂಕ್ಷೆಗೆ ಸ್ಪಂದಿಸುವ, ಆರೋಗ್ಯದ ಬಗ್ಗೆ ಗಮನಿಸುವ ವಿಷಯಗಳ ಅಧ್ಯಯನದಲ್ಲಿ ೧೬೩ ದೇಶಗಳು ಒಳಪಟ್ಟಿವೆ. ಈ ೧೬೩ ದೇಶಗಳಲ್ಲಿ ಭಾರತದ ಸ್ಥಾನ ೧೨೮ರಲ್ಲಿದೆ.

ಮಹಿಳೆಯರು ಸಾಧಿಸಿದ ಪ್ರಗತಿ ಪರಿಗಣನೆಗೆ ತೆಗೆದುಕೊಂಡ ಮುಖ್ಯವಾದ ೧೦೨ ದೇಶಗಳಲ್ಲಿ ಭಾರತ ೯೫ನೇ ಸ್ಥಾನದಲ್ಲಿದೆ. ಈ ಸ್ಥಾನಗಳ ಸಂಖ್ಯೆಯನ್ನು ಗಮನಿಸಿದರೆ ಭಾರತದ ಮಹಿಳಾ ಅಭಿವೃದ್ಧಿ ಯಾವ ಮಟ್ಟದಲ್ಲಿದೆ ಎನ್ನುವುದು ಗೋಚರಿಸುತ್ತದೆ. ಇದು ನಿಜಕ್ಕೂ ವಿಷಾದನೀಯ ಸಂಗತಿ.

ದೇಶದ ವಯಸ್ಕ ಮಹಿಳೆಯರ ಸಾಕ್ಷರತೆ ಕೇವಲ ಶೇ ೩೭.೭. ದೇಶದ ಜನಸಂಖ್ಯೆಯಲ್ಲಿ ಶೇ ೬೦ರಷ್ಟು ಮಹಿಳೆಯರೇ ಇದ್ದಾರೆ. ಆದರೆ ಅವರ ಅಕ್ಷರ ಜ್ಞಾನ ಪ್ರಮಾಣ ತುಂಬಾ ಕಡಿಮೆ. ಕತ್ತಲು ಖಂಡವೆನಿಸಿದ ಆಫ್ರಿಕನ್ ದೇಶಗಳಲ್ಲಿಯೂ ಈ ಸ್ಥಿತಿ ಇಲ್ಲ.

ಆಫ್ರಿಕಾದ ಹಿಂದುಳಿದ ದೇಶವೆನ್ನಲಾಗುತ್ತಿದ್ದ ಕ್ಯಾಮರೂನ್ ನಲ್ಲಿ ಸ್ತ್ರೀ ಸಾಕ್ಷರತೆ ಶೇ.೫೨.೧ ಇದ್ದರೆ ಘಾನಾದಲ್ಲಿ ಶೇ.೫೩.೬ ಇದೆ. ಅದೇ ಉಗಾಂಡದಲ್ಲಿ ಶೇ.೫೦.೨ರಷ್ಟು ಸ್ತ್ರೀಯರು ಸಾಕ್ಷರತೆ ಹೊಂದಿದ್ದಾರೆನ್ನುವುದು ವಿಶೇಷ. ನೈರ್ಮಲ್ಯ, ಶುದ್ಧ ಕುಡಿಯುವ ನೀರು, ಅಗತ್ಯ ಆಹಾರ ಪ್ರಮಾಣ ಲಭ್ಯತೆ, ಆರೋಗ್ಯ ಮುಂತಾದ ಎಲ್ಲ ವಿಚಾರಗಳಲ್ಲಿ ಪೂರ್ವ ಏಷ್ಯಾ ದೇಶಗಳು ಭಾರತಕ್ಕಿಂತಲೂ ಮುಂದೆ ಇವೆ. ಇದೆಲ್ಲವನ್ನು ನಾವು ಗಣನೆಗೆ ತೆಗೆದುಕೊಂಡಾಗ ನಮ್ಮ ದೇಶ ಇನ್ನೂ ಎಷ್ಟು ಅಭಿವೃದ್ಧಿ ಸಾಧಿಸಬೇಕೆನ್ನುವುದು ತಿಳಿದುಬರುತ್ತದೆ.

ಸಮಾನತೆ, ಸಮಾನ ನ್ಯಾಯ ಎನ್ನುವುದು ಪೊಳ್ಳು ಶಬ್ದಗಳಾಗಿವೆ. ಇಂದಿಗೂ ಸ್ತ್ರೀಯರನ್ನು ಪಶುವಿಗಿಂತ ಹೀನವಾಗಿ ನಡೆಸಿಕೊಳ್ಳುವ ಕೋಟ್ಯಾಂತರ ಜನರಿದ್ದಾರೆ. ಹೆಣ್ಣು ಶಿಶುಗಳ ಹತ್ಯೆ, ಭ್ರೂಣ ಹತ್ಯೆ, ಅತ್ಯಾಚಾರ, ಲೈಂಗಿಕ ಕಿರುಕುಳ, ಕೌಟುಂಬಿಕ ಹಿಂಸೆ ನಿರಾಂತಕವಾಗಿ ಸಾಗುತ್ತಿವೆ. ಪುರುಷರ ಈ ಹಿಂಸೆ, ಕಿರುಕುಳಕ್ಕೆ ನಿತ್ಯವೂ ಗುರಿಯಾಗುತ್ತ ನಿಸ್ಸಹಾಯಕರಾಗಿ ಉಳಿಯುತ್ತಾರೆ. ಬರಲಿರುವ ೨೧ನೇ ಶತಮಾನ ಆರಂಭಕ್ಕೆ ಮುನ್ನ ಪ್ರಪಂಚದಾದ್ಯಂತ ಇರುವ ಲಿಂಗ ತಾರತಮ್ಯಕ್ಕೆ ತೆರೆ ಎಳೆಯಬೇಕೆಂದು ವಿಶ್ವಸಂಸ್ಥೆಯ ಗುರಿ, ಘೋಷಣೆ. ಬೀಜಿಂಗ್‌ನಲ್ಲಿ ನಡೆದ ನಾಲ್ಕನೇ ವಿಶ್ವ ಮಹಿಳಾ ಸಮ್ಮೇಳನದ ತೀರ್ಮಾನಗಳನ್ನು ಭಾರತ ದೇಶ ಸಂಪೂರ್ಣವಾಗಿ ಅಂಗೀಕರಿಸಿದೆ. ಅದಾಗ್ಯೂ ಭಾರತದ ಮಹಿಳೆಯರ ಸ್ಥಿತಿ ಸುಧಾರಿಸಲಿಲ್ಲ. ಸುರಕ್ಷಿತ ಬದುಕು ಒದಗಲಿಲ್ಲ. ಇವರಿಗೆ ವಿದ್ಯೆ ಇಲ್ಲ. ಅನ್ನ ಇಲ್ಲ. ಕೈಗೆ ಕೆಲಸವಿಲ್ಲ. ಕುಟುಂಬದಲ್ಲಿ, ಸಮಾಜದಲ್ಲಿ ಸ್ವಾತಂತ್ರ್ಯವಿಲ್ಲ; ವಾಸ್ತವಿಕವಾಗಿ ಇವರ ಜೀವನಕ್ಕೆ ಅರ್ಥವಿಲ್ಲದಂತಾಗಿದೆ. ಸರಕಾರಗಳು ಸ್ಥಾಪನೆಯಾಗುತ್ತವೆ. ಯೋಜನೆಗಳು ಸಿದ್ಧವಾಗುತ್ತವೆ. ಭರವಸೆ ಘೋಷಣೆ ಪ್ರಕಟಣೆ ಪುಂಖಾನುಪುಂಖವಾಗಿ ಹರಿದುಬರುತ್ತದೆ. ಪ್ರಗತಿ ಮಾತ್ರ ಶೂನ್ಯ. ಭಾರತದಲ್ಲಿ ಸ್ತ್ರೀ ತಾರತಮ್ಯಕ್ಕೆ ಇತ್ತೀಚೆಗೆ ಮೂಲೆಗುಂಪಾದ ಮಹಿಳಾ ಮೀಸಲಾತಿ ಮಸೂದೆಯೇ ಸಾಕ್ಷಿ. ಶಾಸನ ಸಭೆಗಳಲ್ಲಿ ಶೇ.೩೩ರಷ್ಟು ಮೀಸಲಾತಿ ಒದಗಿಸಲು ಪಾರ್ಲಿಮೆಂಟಿನಲ್ಲಿ ಮಂಡನೆಯಾದ ಮಸೂದೆ ಅಂಗೀಕಾರವಾಗುವುದಿರಲಿ, ಚರ್ಚೆಗೂ ಅಸ್ಪದ ನೀಡದೆ ಅದೃಶ್ಯವಾಗಿಸಿದರು.

ಸಂವಿಧಾನದಲ್ಲಿ ಸಮಾನತೆ ಎಂಬ ಅಂಶ ಅಳವಡಿಸಲಾಗಿದೆ. ಸರ್ವರಿಗೂ ಅನ್ನ, ಆರೋಗ್ಯ, ಉದ್ಯೋಗ, ವಸತಿ ಒದಗಿಸಬೇಕಾದದ್ದು ಸಂವಿಧಾನಾತ್ಮಕ ಸರಕಾರದ ಜವಾಬ್ದಾರಿ. ಆದರೆ ಸುವರ್ಣೋತ್ಸವ ಮುಗಿಸಿದರೂ ಸಂವಿಧಾನ ರೀತ್ಯ ಹಕ್ಕುಗಳು ದೊರೆಯದಿರುವುದು ಎಂತಹ ಘೋರ. ಇನ್ನಾದರೂ ವಿಶ್ವಸಂಸ್ಥೆ ಅಭಿವೃದ್ಧಿ ಕಾರ್ಯಕ್ರಮ

ವರದಿಯನ್ನು ಪರಿಗಣನೆಗೆ ತೆಗೆದುಕೊಳ್ಳಬೇಕು. ತಪ್ಪು ದಾರಿ ತುಳಿಯುತ್ತಿರುವ ಅಂಶವನ್ನು ಸರಿಪಡಿಸಲು ಸಂಕಲ್ಪ ಮಾಡಬೇಕು.

ತೊಟ್ಟಿಲು ತೂಗುವ ಕೈಗಳು ಬಂದೂಕು ಹಿಡಿದು ನಿತ್ಯ ಹೋರಾಡುತ್ತಿರುವುದನ್ನು ಹಲವಾರು ದೇಶಗಳಲ್ಲಿ ನಾವು ನೋಡುತ್ತೇವೆ. ಕೆಲವು ರಾಷ್ಟ್ರಗಳಲ್ಲಿ ಮಹಿಳಾ ಸೈನಿಕರ ಪಾತ್ರ ಅತ್ಯಂತ ಮಹತ್ವದ್ದಾಗಿದೆ. ಶ್ರೀಲಂಕ ಶಾಂತಿ ಸೇನೆಯಲ್ಲಿನ ಮಹಿಳಾ ಯೋಧರ ಸಾಹಸ, ಪರಾಕ್ರಮ ವರ್ಣನಾತೀತ. ಈ ರಾಷ್ಟ್ರಗಳಲ್ಲಿನ ಮಹಿಳಾ ಸೈನಿಕರ ದಿಟ್ಟತನ ಭಾರತದಂತಹ ದೇಶಗಳಿಗೆ ಅನುಕರಣೀಯ.

ಗಗನಸಖಿಯಾಗಿ ನೇಮಕಗೊಳ್ಳುತ್ತಿದ್ದ ಮಹಿಳೆಯರಿಗೆ, ವಿಮಾನ ಚಾಲಕರಾಗಲು ಅವಕಾಶ ಒದಗಿರಲಿಲ್ಲ. ನಂತರ ಇದು ಕಾರ್ಯರೂಪಕ್ಕಿಳಿಯಲು ಎರಡು ದಶಕಗಳೇ ಬೇಕಾಯಿತು. ವಿಮಾನದಲ್ಲಿ ಪೈಲಟಾಗಿ ನೇಮಕಗೊಂಡ ಮೊದಲ ಮಹಿಳೆ ಇಂದ್ರಾಣಿಸಿಂಗ್. ಇವರು ಏರ್ ಬಸ್ -ಎ ೩೦೦ನ್ನು ದೆಹಲಿಯಿಂದ ಕಠ್ಮಂಡುವರೆಗೆ ನಡೆಸಿಕೊಂಡು ಹೋಗಿದ್ದರು. ಇವರೊಂದಿಗೆ ಸಹಾಯಕ ಪೈಲಟಾಗಿ ಕಾರ್ಯ ನಿರ್ವಹಿಸಿದ್ದೂ ಮಹಿಳೆಯೇ. ಇತ್ತೀಚಿನ ದಿನಗಳಲ್ಲಿ ಇವರ ಸಂಖ್ಯೆ ವೃದ್ಧಿಯಾಗುತ್ತಾ ನಡೆದಿರುವುದು ಸ್ವಾಗತಾರ್ಹವೆ. ಪ್ರಸ್ತುತ ಇಂಡಿಯನ್ ಏರ್ ಲೈನ್ಸ್ ದಲ್ಲಿ ಹತ್ತೊಂಬತ್ತು ಮಹಿಳೆಯರು ಪೈಲಟಗಳಾಗಿದ್ದಾರೆ. ಇದರೊಂದಿಗೆ ವೈದ್ಯಕೀಯ ಪತ್ರಿಕೋದ್ಯಮ, ಇಂಜನಿಯರಿಂಗ್, ಸಂಶೋಧನಾ ಕ್ಷೇತ್ರಗಳಲ್ಲಿ ಮಹಿಳೆಯರು ಪುರುಷರೊಂದಿಗೆ ಸ್ಪರ್ಧೆಗಿಳಿದಿರುವುದು ತಿಳಿದ ಸಂಗತಿಯೆ.

ಕೇಂದ್ರ ಮೀಸಲು ಪೋಲೀಸ್ ಪಡೆಯಲ್ಲಿ ಮೊದಲ ಬಾರಿ 'ಮಹಿಳಾ ಪಡೆ'ಯೊಂದು ಆರಂಭಗೊಂಡಿತು. ಇದಾದ ಮೇಲೆ ಮಿಲಿಟರಿ ನರ್ಸಿಂಗ್ ಸೇವೆಯಲ್ಲಿ ಮಹಿಳೆಯರನ್ನು ತೊಡಗಿಸಲಾಯಿತು. ತದನಂತರ ರಕ್ಷಣಾ ಪಡೆಯಲ್ಲಿ ಮಹಿಳೆಯರು ಪ್ರವೇಶಿಸಿದರು. ಕೇವಲ ವೈದ್ಯರಾಗಿ ಮಾತ್ರ.

ಸೇನೆಯಲ್ಲಿನ ನೇಮಕಕ್ಕೆ ೧೯೫೦ರಲ್ಲಿ ಮಾಡಲಾದ ಕಾನೂನನ್ನು ಇಂದಿಗೂ ಅನುಸರಿಸುತ್ತಾರೆ. ಬದಲಾಗಿರುವ ಪರಿಸರಕ್ಕೆ ತಕ್ಕಂತೆ ಕಾನೂನು ಕಟ್ಟಳೆಗಳು ಮಾರ್ಪಾಟುಗೊಳ್ಳಬೇಕೆಂಬ ಜಾಗತಿಕ ನಿಯಮವಿದ್ದರೂ ಅದನ್ನು ಬದಲಾಯಿಸಲು ಯಾರೂ ಆಲೋಚಿಸಲ್ಲ. ಬ್ರಿಟಿಷರು ಮಾಡಿದ ಹಲವು ಕಾನೂನುಗಳಿಗೆ ನಾವು ಇಂದಿಗೂ ಜೋತು ಬಿದ್ದಿದ್ದೇವೆ. ೧೯೫೦ರ ಸೇನಾ ಕಾನೂನಿನ್ವಯ ಕೇಂದ್ರ ಸರಕಾರ ಪ್ರತ್ಯೇಕ ಅಧಿಸೂಚನೆ ಹೊರಡಿಸುವುದರ ಮೂಲಕ ಮಹಿಳೆಯರನ್ನು ನೇಮಕ ಮಾಡಿಕೊಳ್ಳುತ್ತದೆ. ಇದರ ಹೊರತು, ಸಾರ್ವತ್ರಿಕ ನೇಮಕ ನಿಯಮದಡಿಯಲ್ಲಿ ಮಹಿಳೆಯರಿಗೆ ಸೇವೆ ಸಲ್ಲಿಸಲು ಅವಕಾಶ ನೀಡುವುದಿಲ್ಲ. ಇನ್ನು ೧೯೫೭ರ ಸೇನಾ ಕಾನೂನಿನಂತೆ ಮಹಿಳಾ ವೈದ್ಯರನ್ನಾಗಿ ನೇಮಿಸುವುದುಂಟು. ಒಟ್ಟಿನಲ್ಲಿ ಕೇಂದ್ರ ಸರಕಾರ ಹೊಸ ಅಧಿಸೂಚನೆ ಹೊರಡಿಸಿಯೇ ಮಹಿಳೆಯರನ್ನು ನೇಮಕ ಮಾಡಿಕೊಳ್ಳುವಂತಹ ವ್ಯವಸ್ಥೆ ಇಂದಿಗೂ

ಹೊಂದಿದೆ. ಈ ಹಿನ್ನೆಲೆಯಲ್ಲಿ ರಕ್ಷಣಾ ಪಡೆಯಲ್ಲಿ ಮಹಿಳೆಯರಿಗೆ ಪ್ರವೇಶ ದೊರೆಯದಿರುವುದು ಅವರನ್ನು ಅಸಮಾನತೆಯಿಂದ ನೋಡಿದಂತಾಗುತ್ತದೆಂದು ಆರೋಪಿಸುತ್ತಿದ್ದಾರೆ. ಭಾರತ ಪೋಲಿಸ್ ಸೇವೆಯಂತಹ ಮಹತ್ವದ ಕ್ಷೇತ್ರದಲ್ಲಿ ಮಹಿಳೆಯರು ಸೇವೆ ಸಲ್ಲಿಸುತ್ತಾ ಉತ್ತಮ ಸಾಮರ್ಥ್ಯವನ್ನು ಪ್ರದರ್ಶಿಸಿದ್ದಾರೆ. ಇದಕ್ಕೆ ಕಿರಣ್ ಬೇಡಿ, ಜೀಜಾ ಹರಿಸಿಂಗ್‌ರಂತಹ ಮಹಿಳಾ ಪೋಲಿಸ್ ಅಧಿಕಾರಿಗಳೇ ಉದಾಹರಣೆ. ಅದಾಗ್ಯೂ ತ್ರಿವಿಧ ದಳದಲ್ಲಿ ಮಹಿಳೆಯರಿಗೆ ಪ್ರವೇಶ ನಿರಾಕರಿಸಿರುವುದು ಆಶ್ಚರ್ಯ. ಮಹಿಳೆಯರಿಗೆ ಸೈನ್ಯಕ್ಕೆ ಪ್ರವೇಶ ನೀಡುವಲ್ಲಿ ಉನ್ನತ ಅಧಿಕಾರಿಗಳೇ ಅಡ್ಡಿಯಾಗಿದ್ದಾರೆಂದು ಆರೋಪವುಂಟು. ಸೇನೆಯಲ್ಲಿ ಸ್ತ್ರೀಯರು ಲೈಂಗಿಕ ಕಿರುಕುಳಕ್ಕೆ ಗುರಿಯಾಗುವ ಸಾಧ್ಯತೆಯಿರುವುದರಿಂದ ನೇಮಕಕ್ಕೆ ವಿರೋಧಿಸಲಾಗುತ್ತದೆಂದು ಅಧಿಕಾರಿಗಳ ಸ್ಪಷ್ಟನೆ ಇದೆ. ತಪ್ಪು ಮಾಡಿದ ವ್ಯಕ್ತಿಯನ್ನು ಕೋರ್ಟ್ ಮಾರ್ಷಲ್ ಮಟ್ಟದಲ್ಲಿ ವಿಚಾರಿಸಿ ಕಠಿಣ ಶಿಕ್ಷೆ ನೀಡುತ್ತಾರೆ. ಆದ್ದರಿಂದ ಈ ತರಹದ ಘಟನೆಗಳು ನಡೆಯುವುದು ತುಂಬಾ ಕಡಿಮೆಯೆಂದೆ ಇವರ ಅಭಿಪ್ರಾಯ. ಏನೇ ಆದರೂ ಸರ್ವರಂಗದಲ್ಲಿ ಸ್ತ್ರೀಯರು ಸಮರ್ಥ ಕಾರ್ಯನಿರ್ವಹಿಸುವ ಸಾಮರ್ಥ್ಯ ಹೊಂದಿದ್ದರೂ ಇಲ್ಲಸಲ್ಲದ ನೆಪವೊಡ್ಡಿ ಪ್ರವೇಶಕ್ಕೆ ಅಡ್ಡಿ ಒದಗಿಸುತ್ತಿರುವುದು ದುರದೃಷ್ಟಕರ. ಸೇನೆಯಲ್ಲಿ ಸ್ವಇಚ್ಛೆಯಿಂದ ಸೇರುವ ಹಂಬಲ ಹೊಂದಿದ ಹಲವಾರು ಮಹಿಳೆಯರು ಇಂದಿಗೂ ಅವಕಾಶಕ್ಕಾಗಿ ಕಾಯುತ್ತಿದ್ದಾರೆ.

ಭಾರತದ ಸೈನ್ಯದಲ್ಲಿ ಮಹಿಳೆಯರಿಗೆ ಪ್ರವೇಶಾವಕಾಶ ದೊರೆಯಬೇಕೆಂದು ಬಲವಾದ ಬೇಡಿಕೆ ಸಲ್ಲಿಸುತ್ತಲೇ ಬಂದಿದ್ದಾರೆ. ನಮ್ಮ ಆಡಳಿತ ವ್ಯವಸ್ಥೆ ಮಾತ್ರ ಇದಕ್ಕೆ ಸರಿಯಾದ ಸ್ಪಂದನ ತೋರಿಸುತ್ತಿಲ್ಲ. ಆದರೆ, ಅಪ್ರತಿಮ ಧೈರ್ಯ ಸಾಹಸದೊಂದಿಗೆ ಪುರುಷರಿಗಿಂತ ನಾವು ಕಡಿಮೆ ಇಲ್ಲವೆಂದು ಮಹಿಳೆಯರು ಸಾಬೀತು ಪಡಿಸಿದ್ದು ಇತಿಹಾಸದ ಪುಟಗಳಲ್ಲಿ ಕಾಣುತ್ತೇವೆ.

೨೧ನೇ ಶತಮಾನ ಆರಂಭಗೊಳ್ಳುವ ಮುನ್ನವೇ ಪ್ರಪಂಚದಾದ್ಯಂತ ಲಿಂಗಭೇದಕ್ಕೆ ವಿದಾಯ ಹೇಳಬೇಕೆಂದು ವಿಶ್ವಸಂಸ್ಥೆ ಕರೆ ನೀಡಿದೆ. ಇಷ್ಟು ಕಾಲ ಮನೆಯನ್ನೇ ಸರ್ವಸ್ವವೆಂದು ಭಾವಿಸಿದ್ದ ಸ್ತ್ರೀಯರು, ತಮ್ಮ ಹಕ್ಕುಗಳಿಗಾಗಿ ಸಾರ್ವತ್ರಿಕ ಹೋರಾಟಕ್ಕೆ ಇಳಿಯುವ ಮೊದಲೇ ಸಮಾನ ಉದ್ಯೋಗ ಹಕ್ಕು ಅವಕಾಶಗಳು ಒದಗಿದರೆ ಸಮಾಜಕ್ಕೂ ದೇಶಕ್ಕೂ ಕ್ಷೇಮ.

# ನಾರಿಯೊಳಗಿನ ನಾರಿ

*ನ. ಕೃ. ಲೋಲಾಕ್ಷಿ*

ಸ್ತ್ರೀ ಸಮಾನತೆ, ಮಹಿಳಾವಾದ ಇವೆಲ್ಲಾ ಇಂದು ಹೆಚ್ಚಾಗಿ ಅನುರಣಿತವಾಗುತ್ತಿರುವ ಕ್ರಾಂತಿಕಾರಕ ಮನೋಭಾವದ ಅಭಿವ್ಯಕ್ತಿಗಳು. ಅಂದು ಬಹುಕಾಲದ ತನಕ ನಾಲ್ಕುಗೋಡೆಯ ಮಧ್ಯೆ ಕೂಪಮಂಡೂಕವಾಗಿಯೇ ಸ್ತ್ರೀ ಬೆಳೆದಳು. ಪುರುಷರ ಗುಲಾಮಳಾಗಿ ದೌರ್ಜನ್ಯಕ್ಕೆ ಬಲಿಯಾಗಿದ್ದಳು. ಸೌಂದರ್ಯಕ್ಕಷ್ಟೆ ಮೀಸಲಾಗಿದ್ದು ಶೀಲದ ಸಂಕೇತವಾಗಿದ್ದು, ಪವಿತ್ರತೆಯ ಪ್ರತಿಮೆ ಎನಿಸಿಕೊಳ್ಳುವುದರಲ್ಲೇ ಅವಳಿಗೆ ಸಂತೋಷ. ಮನೆ ಹೊರಗೆ ಒಳಗೆ ಹಗಲು ಇರುಳು ದುಡಿದರೂ ಕೂಡ ಕೂಲಿಯಿಲ್ಲದ ನೌಕರಳು. ಗಂಡನ ಕೃಷ್ಣಲೀಲೆಗಳನ್ನೆಲ್ಲಾ ಸಹಿಸಿಕೊಂಡು ಪತಿಯೇ ಪರದೈವವೆಂದು ನಂಬಿ ಪರಪುರುಷನ ನೆರಳುಕೂಡ ನೋಡಲು ಅಸಹ್ಯಸುತ್ತಿದ್ದ ಈ ಪತಿವ್ರತೆ ಮಕ್ಕಳೇ ದೇವರೆಂದು ನಂಬಿ ಎಲ್ಲರ ದಾಸಿಯಾಗಿದ್ದಳು. ಈ ದಾಸ್ಯದೊಳಗೆ ದಹಿಸಿಹೋಗುತ್ತಿದ್ದ ಮಹಿಳೆ ಇಂದು ಸಂಕೋಲೆಗಳನ್ನೆಲ್ಲಾ ತೊಡೆದು ಕೂಪದಿಂದ-ವಿಶಾಲ ಸಮುದ್ರದೊಳಗೆ ನುಗ್ಗಿದ್ದು ಏತಕ್ಕಾಗಿ? ಅವಳಲ್ಲಿ ಸಾಧಿಸಿದ್ದೇನು? ಸಾಧನೆಯಲ್ಲಿ ಉಳಿಸಿಕೊಂಡಿದ್ದೇನು? ಉಳಿಕೆ ಏನಾದರೂ ಇದ್ದರೆ ಅದರಲ್ಲಿ ಸತ್ಯವಿದೆಯೇ? ಇದ್ದರೆ ಯಾವ ರೀತಿಯ ಎಷ್ಟು ಪ್ರಮಾಣದ್ದು? ಇವೆಲ್ಲ ಇಂದಿನ ಬದುಕಿನಲ್ಲಿ ಎದ್ದುನಿಂತು ಕಾಯುತ್ತಿರುವ ಪ್ರಶ್ನಾಪುಂಜಗಳು.

ಮಹಿಳಾ ಸಂಬಂಧಿ ಸಮಸ್ಯೆಗಳು ಬಹುಹಿಂದಿನಿಂದಲೂ ಇದ್ದವು. ಈಗಲೂ ಇವೆ. ಆದರೆ ಕೆಲವು ಸಮಸ್ಯೆಗಳ ಸ್ವರೂಪ ಅಥವಾ ಆ ಸಮಸ್ಯೆಗಳನ್ನು ನಾವು ಈಗ ಗ್ರಹಿಸುತ್ತಿರುವ ರೀತಿಯಲ್ಲಿ ಬದಲಾವಣೆಯಾಗಿವೆಯಷ್ಟೆ. ಆಗ ಪ್ರತಿಭಟನಾ ಮನಸ್ಸು ಗಳಿರಲಿಲ್ಲ. ಭಯದ ನೆರಳಿನಲ್ಲಿದ್ದ ಬದುಕು, ಪರಾವಲಂಬಿ ಜೀವನ ಪ್ರತಿಭಟಿಸುವಿಕೆಯನ್ನು ಯೋಚಿಸಲು ಅಂಜುತ್ತಿದ್ದವು. ಆದರೆ ಇಂದಿನ ವಿಚಾರವಂತ ಮನಸ್ಸುಗಳು ಆರ್ಥಿಕ ಸ್ವಾವಲಂಬಿತನ ಮನಸ್ಸಿನ ಮೂಲೆಯಲ್ಲಿ ಮಲಗಿದ್ದ ಸ್ತ್ರೀವಾದಿ ಪ್ರಜ್ಞೆಯನ್ನು ಜಾಗೃತಗೊಳಿಸಿವೆ. ಹೆಣ್ಣು-ಗಂಡು ಪರಸ್ಪರ ವಿರುದ್ಧ ವ್ಯಕ್ತಿತ್ವಗಳೆಂಬ ಮೂಲ ಕಲ್ಪನೆಯನ್ನೇ ತೊಡೆದು ಹಾಕಬೇಕಾದ ಅಗತ್ಯವನ್ನು ಸ್ತ್ರೀವಾದ ಗುರುತಿಸುತ್ತಿದೆ. ಒಂದು ಗುಂಪು ಮತ್ತೊಂದು ಗುಂಪಿಗಿಂತ ಶ್ರೇಷ್ಠ ಎಂಬ ಮೂಲ ಶ್ರೇಣೀಕೃತ ವ್ಯವಸ್ಥೆಯನ್ನು ಸ್ತ್ರೀವಾದ ತಿರಸ್ಕರಿಸುತ್ತದೆ. ಹೆಣ್ಣು ಗಂಡುಗಳಿಬ್ಬರೂ ಸಮಾನರು ಎಂಬ ಭಾವನೆಗಾಗಿ ಹೋರಾಡುತ್ತದೆ.

ಒಂದು ಕಡೆ ಪುರುಷನ ಸಮಾನಳು ಎಂದು ಹೋರಾಡುತ್ತಿರುವ ಸಂದರ್ಭದಲ್ಲಿ ಹೆಣ್ಣಿನ ಬಲೆಗೆ ಹೆಣ್ಣೇ ಜೇಡರಹುಳುವಿನಂತೆ ಬಲಿಯಾಗುತ್ತಿರುವ ಘಟನೆಗಳು ಮನಸ್ಸಿಗೆ ಖೇದವನ್ನುಂಟುಮಾಡುತ್ತಿವೆ. ಕಾರಣ ಸ್ತ್ರೀಯರೆಲ್ಲರೂ(ಹೆಂಗಸರಲ್ಲ) ಸ್ತ್ರೀವಾದಿಗಳಲ್ಲ. ಈ ಕಾರಣದಿಂದ ಹೆಂಗಸರನ್ನೆಲ್ಲಾ ಮೂರು ಗುಂಪುಗಳಾಗಿ ವಿಂಗಡಿಸಬಹುದು. ಮೊದಲನೆಯ ಗುಂಪು-ನ್ಯಾಯಕ್ಕಾಗಿ ಸಮಾನತೆಗಾಗಿ ಹೋರಾಡುತ್ತಿರುವ ಪ್ರತಿಭಟಿಸುತ್ತಿರುವ ಸ್ತ್ರೀವಾದಿ ಗುಂಪು. ಸ್ತ್ರೀವಾದಿಗಳು ಗಳಿಸಿದ ಸಮಾನತೆಯ ಸ್ವಾತಂತ್ರ್ಯದಡಿಯಲ್ಲಿ ತಮ್ಮ ಬೇಳೆ ಬೇಯಿಸಿಕೊಳ್ಳುವ ಅವಕಾಶವಾದಿಗಳದ್ದು, ಎರಡನೇ ಗುಂಪು. ಈ ಎರಡನೇ ಗುಂಪಿನ ಅವಕಾಶವಾದಿಗಳು ಬೆಳೆದಂತೆಲ್ಲಾ ಸ್ತ್ರೀವಾದಿಗಳು ಮಥಿಸಿ ತೆಗೆದ ಅಮೃತ ದೇವತೆಗಳಿಗಿಂತ ಬಲಿಷ್ಟರಾದ ರಾಕ್ಷಸರಿಗೇ ದೊರಕಿದಂತೆ ಇವರ ಪಾಲಾಗುತ್ತದೆ. ಈ ಅಸುರರಕಾಟದ ಫಲವನ್ನು ಅನುಭವಿಸುವವರು ಹೆಣ್ಣಿನ ಶೀಲ-ಪಾತಿವ್ರತ್ಯಕ್ಕೆ ಬೆಲೆಕೊಟ್ಟು ಸೀತೆ ಸಾವಿತ್ರಿ ದಮಯಂತಿಯರ ಅನುಯಾಯಿಗಳಾದ ಮೂರನೇ ಗುಂಪಿನ ಹಸುವಿನಂತಹ ಹೆಣ್ಣುಕುಲ.

ಮೂರು ಗುಂಪುಗಳಲ್ಲಿ ಎರಡನೇ ಗುಂಪು ತುಂಬಾ ಅಪಾಯಕಾರಿಯಾದುದು. ಕಾರಣ ಇವರು ಮೇಲುನೋಟಕ್ಕೆ ಸಭ್ಯರಂತೆ ಕಂಡರೂ, ಒಳಗಡೆ ಸುಮ್ಮನೆ ಕೂರದ ದಟ್ಟಿಗಿಳಿಯಂಥವರು. ಇಂಥವರನ್ನು ಕುರಿತೇ ಇರಬೇಕು:

*ಅಂಗಿಮ್ಯಾಲಂಗಿ, ಚಂದೇನೋ ನನರಾಯ*
*ರಂಬಿಮ್ಯಾಲ ಪ್ರತಿರಂಬಿ ಇದ್ದಾರ.....*

ಎಂದು ನಮ್ಮ ಜನಪದ ಹೆಂಗಸರು ತಮ್ಮ ನೊಂದ ಬದುಕಿನ ನೋವಿನೆಳೆಗಳನ್ನು ಪ್ರತಿಮೆಗಳ ಮೂಲಕ ನಮ್ಮ ಮುಂದೆ ಇಟ್ಟಿರುವುದು. ಎಷ್ಟು ಸೂಕ್ಷ್ಮವಾಗಿ, ನವುರಾಗಿ, ತನ್ನ ನೋವು ಹೊರಗೆಡವಿದ್ದಾಳೆಂದರೆ ತನ್ನ ಪತಿಗೂ ಬೈದಂತಿಲ್ಲಾ ಮೇಲಂಗಿಯಾದ ಸವತಿಗೂ ಬೈದಂತಿಲ್ಲಾ. ನಿಜವಾಗಿ ಯೋಚಿಸಿದರೆ ಗುಂಡೇಟಿನಿಂದ ಹೊಡೆಯಬೇಕಾದ ಕೆಲಸಕ್ಕೆ ನಮ್ರತೆಯಿಂದ ಹಸು ಸ್ವಭಾವದ ಈ ಹೆಣ್ಣು ಬೇಡುತ್ತಿದ್ದಾಳೆ.

ಇಲ್ಲಿ ಅಂಗಿಯಾವುದು ಮ್ಯಾಲಂಗಿ ಯಾವುದು ಎಂಬುದು ಮುಖ್ಯ. ತೋರುವವನು ಒಬ್ಬ. ಅವನ ದೇಹ ಮುಚ್ಚಿ ಮಾನ ಮರ್ಯಾದೆ ಉಳಿಸಿ ತಮ್ಮ ಮರ್ಯಾದೆ ಹರಾಜಿಗಿಡುತ್ತಿರುವ ಅಂಗಿಗಳು ಯೋಚಿಸಬೇಕು. ತನ್ನಷ್ಟೆ ಬಟ್ಟೆ, ದರ್ಜಿಯ ಕೆಲಸ, ಕೂಲಿ, ಅದರದೇ ವಿನ್ಯಾಸ, ಮೌಲ್ಯ ಒಳಗಿನ ಅಂಗಿಗೂ ಇದೆ ಎನ್ನುವುದನ್ನು ಇಲ್ಲಿ ಅಂಗಿಮೇಲಿನ ಅಂಗಿ- ಎರಡೂ ಹೆಣ್ಣುಜೀವಗಳೇ ಆದರೆ ಒಳಗಿನ ಅಂಗಿ ಅಂದರೆ ಮೊದಲನೆ ಹೆಂಡತಿ ಧರ್ಮಪತ್ನಿ ಎನಿಸಿಕೊಳ್ಳುವ ಹೆಣ್ಣು ಇರುವಾಗ ಮತ್ತೆ ಎರಡನೇ ಹೆಂಡತಿಯಾಗಬಯಸುವ ಈ ಹೆಣ್ಣುಗಳೇ ನಿಜವಾದ ಹೆಣ್ಣಿನ ಶತೃಗಳು. ಗಂಡುಗಳದ್ದು ತಪ್ಪಿಲ್ಲವೇ? ಎಂಬ ಪ್ರಶ್ನೆ ಇಲ್ಲಿ ಉದ್ಭವಿಸಬಹುದು. ಇಲ್ಲ ಎನ್ನಲಾಗುವುದೇ, ತಪ್ಪೇ. ಆದರೆ ನಾನಿಲ್ಲಿ ಹೇಳ ಹೊರಟಿರುವುದು ಹೆಣ್ಣಿನ ಅಜಾಗರೂಕತೆಯನ್ನು. ಗಂಡಿಗಿಂತ ಕಡಿಮೆಯಲ್ಲ, ನಾನು ಸಮಾನಳು ಸ್ವಾತಂತ್ರ್ಯಬೇಕು ಎಂಬ ಹೋರಾಟ ಮಾಡುತ್ತಲೇ

ತಾನೇ ತನ್ನೊಂದಿಗಿನ ಹೆಣ್ಣಿಗೆ ಮೋಸ ಮಾಡ ಹೊರಟರೆ ಇವಳು ಹೆಣ್ಣಾಗಿದ್ದು ಫಲವೇನು. ತನ್ನ ಬೆನ್ನಿನಲ್ಲಿ ತಾನೇ ಚೂರಿಹಾಕಿಕೊಂಡಂತಾಗಿದೆ. ದೇವಗಂಧರ್ವರ ರಾಜಮಹಾರಾಜರ ಕಾಲದಿಂದಲೂ ಈ ಬಹು ಪತ್ನಿತ್ವ ಹೆಣ್ಣಿನ ಮುಖ್ಯ ಸಮಸ್ಯೆಯಾಗಿಯೇ ಇದೆ. ಕಟ್ಟಿಕೊಂಡ ಹೆಂಡತಿಯೊಂದಿಗೆ ಇಟ್ಟುಕೊಳ್ಳುವ ಜಾಯಮಾನದ ಪುರುಷರು ದಿನೇ ದಿನೇ ಬೆಳೆಯುತ್ತಲೇ ಇದ್ದಾರೆ. ಆದರೆ ಇಟ್ಟುಕೊಳ್ಳುವುದು ಎಷ್ಟು ದುರ್ವ್ಯವಹಾರವೋ ಹಾಗೆಯೇ ಇರಿಸಿಕೊಳ್ಳುವುದೂ ಮಹಾಪರಾಧವಲ್ಲವೆ? ಈ ಇಡಿಸಿಕೊಳ್ಳುವ ಹೆಣ್ಣುಗಳು ಎಚ್ಚೆತ್ತರೆ ಸಮಸ್ಯೆ ಸುಲಭವಾಗಿ ಪರಿಹಾರವಾಗುತ್ತದೆ. ಎಚ್ಚೆತ್ತುಕೊಳ್ಳುವುದೇ ಕಷ್ಟ.

ಈ ಸಮಸ್ಯೆ ಅನಕ್ಷರಸ್ಥ ಜನತೆಗಿಂತ ವಿದ್ಯಾವಂತ, ಉದ್ಯೋಗಸ್ಥ ಜನತೆಯಲ್ಲೇ ಹೆಚ್ಚಾಗಿ ಕಾಣಿಸುತ್ತದೆ. ದುಡಿಯುವ ಪುರುಷ ಮಹಿಳೆಯರು ಒಂದೆಡೆ ಕೆಲಸ ಮಾಡುವಾಗ ಪರಸ್ಪರ ಆಕರ್ಷಿತರಾಗಿ ಬೆಳೆದ ಸ್ನೇಹಸಂಬಂಧ ಪ್ರೇಮ-ಕಾಮ ಸಂಬಂಧವಾಗಿ ತಿರುವು ಪಡೆದಾಗ ದಾಂಪತ್ಯ ಜೀವನದಲ್ಲಿ ಸಹಜವಾಗಿ ಉಂಟಾಗುತ್ತದೆ. ಇಂಥ ಸಂದರ್ಭದಲ್ಲಿ ಆದರ್ಶ, ಪ್ರಾಮಾಣಿಕ ಮೌಲ್ಯದೊಳಗಿದ್ದು ಹೆಣ್ಣು ಅಥವಾ ಗಂಡು ಮಾನಸಿಕ ತೊಳಲಾಟಕ್ಕೆ ಸಿಲುಕಿ ಕುಟುಂಬ ಸಿಡಿದು ಒಡೆದು ಮಕ್ಕಳು ಅನಾಥರಾಗುವ ಅಥವಾ ತಂದೆ-ತಾಯಿ ಜಗಳದ ನಡುವೆ ಪ್ರೀತಿಯಿಂದ ವಂಚಿತರಾಗಿ ಮಾನಸಿಕ ಅಂಗವಿಕಲರಾಗಿ ಬೆಳೆಯುತ್ತಿರುವುದು ಪ್ರಸ್ತುತ ಸಮಾಜದ ಪರಿಸ್ಥಿತಿ.

ತನಗೆ ಮೊದಲನೇ ಪತ್ನಿಯಿದ್ದು ಮತ್ತೊಬ್ಬಳೊಂದಿಗೆ ಸಂಬಂಧವಿಟ್ಟುಕೊಳ್ಳುವ ಪುರುಷ ಒಂದೆಡೆ ಇದ್ದರೆ, ಮೊದಲನೇ ಪತ್ನಿಯಿರುವಳೆಂದು ತಿಳಿದೂ ತಿಳಿದೂ ಸಂಬಂಧ ಬೆಳೆಸುವ ಅದೇ ಹೆಣ್ಣು ಇನ್ನೊಂದೆಡೆಯಿದ್ದಾಳೆ. ಅದೇ ರೀತಿ ತನ್ನ ಮೊದಲನೇ ಪತಿ ಇದ್ದೂ ಇನ್ನೊಬ್ಬ ಪುರುಷನನ್ನು ಬಯಸುವ ಹೆಣ್ಣು ಕೂಡ ಕಂಡುಬರುತ್ತಾಳೆ. ಈ ಅನೈತಿಕ ಸಂಬಂಧ, ಹೆಣ್ಣು ಗಂಡುಗಳ ನಡುವೆ ಕತ್ತರಿಗೆ ಸಿಲುಕಿದ ಅಡಿಕೆಕಾಯಿಯ ಸ್ಥಿತಿ. ಸುಮಾರು ಹೆಣ್ಣುಗಳದ್ದಾಗಿದೆ. ಬಿಸಿತುಪ್ಪ ಬಾಯಲಿಟ್ಟುಕೊಂಡಂತೆ. ಉಗಿಯಲು ಸಮಾಜದಲ್ಲಿ ಮಾನಮರ್ಯಾದೆಯ ಪ್ರಶ್ನೆ. ಬಾಯಲ್ಲೇ ಇದ್ದರೆ ಜೀವನವನ್ನೇ ಸುಡುವ ಭಯ. ಹೆಣ್ಣಿಗೆ ಹೆಣ್ಣೆ ಶತ್ರುವಾಗುವ ಸಂದರ್ಭಗಳಿವು.

ಈ ಎಲ್ಲಾ ಕಾರಣಗಳಿಂದ ಪ್ರಸ್ತುತ ಸಂದರ್ಭದಲ್ಲಿ ಸ್ತ್ರೀವಾದಿಗಳು ಪುರುಷರಿಗಿಂತ ಸಮಾನತೆ ಕೇಳುವುದಕ್ಕಿಂತ ಮಿಗಿಲಾಗಿ ತಮ್ಮ ಮೌಲ್ಯಗಳು ತಮ್ಮಿಂದಲೇ ನಶಿಸಿ ಹೋಗುತ್ತಿರುವೆಡೆ ಚಿಂತಿಸಬೇಕಾಗಿದೆ. ಸಮಾನತೆ, ಸ್ವಾತಂತ್ರ್ಯ, ಆರ್ಥಿಕ ಸ್ವಾವಲಂಬನೆ ಅರ್ಥಕಳೆದುಕೊಳ್ಳುವುದಕ್ಕಿಂತ ಮುನ್ನ ತನ್ನ ಒಳಹನ್ನು ತಾನು ಅರಿಯಬೇಕು. ಬೇಲಿಯೇ ಎದ್ದು ಹೊಲ ಮೇಯಲು ಬಿಡಬಾರದು. ಗಂಭೀರವಾದ ಅಷ್ಟೆ ಅಪಾಯಕಾರಿಯಾದ ಈ ಸಮಸ್ಯೆ ಹಿಡಿತಕ್ಕೆ ಸಿಗದ ಅಂತರಾಳದ ಬದುಕಿನ ಗರ್ಭಗುಡಿಯ ಸಮಸ್ಯೆ. ಮೂರನೇ ವ್ಯಕ್ತಿಯಿಂದ ಪರಿಹಾರ ಇಲ್ಲದ್ದರಿಂದ ನೈತಿಕ ಚೌಕಟ್ಟಿನೊಳಗೆ ಪ್ರಾಮಾಣಿಕ ಬದುಕನ್ನು ಬಾಳುವತ್ತ ಎಲ್ಲರ ಗಮನ ಹರಿಯಬೇಕಾದುದು ಅಗತ್ಯ ಹಾಗೂ ಅನಿವಾರ್ಯ.

# ಮಹಿಳೆ ಮತ್ತು ಅಭಿವೃದ್ಧಿ

*ಸಿ. ಎಂ. ಸುಲೋಚನಾ*

"ಅಭಿವೃದ್ಧಿ"ಎನ್ನುವುದು ಬಹುವ್ಯಾಪ್ತಿಯ ಒಂದು ಸಂಕೀರ್ಣ ಪ್ರಕ್ರಿಯೆ. ಒಂದು ದೇಶದ ಆರ್ಥಿಕ, ಸಾಮಾಜಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಪ್ರಗತಿಯೇ ಅಲ್ಲದೇ ವೈಜ್ಞಾನಿಕ, ವೈಚಾರಿಕ ವಿಕಾಸವನ್ನು ಅಭಿವೃದ್ಧಿ ಎನ್ನಬಹುದು. ಅದು ನಾಡಿನ ಸರ್ವತೋಮುಖ, ಸಮತೋಲಿತ ಪ್ರಗತಿಯಾಗಿದೆ.

ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ಮಾನವನ ಪಾತ್ರ ವಿಶೇಷವಾದ್ದು. ಮಾನವಿಕ ಸಂಪನ್ಮೂಲವು ದೇಶದ ಪ್ರಗತಿಯ ಅಡಿಪಾಯ. ಮಾನವಿಕ ಸಂಪನ್ಮೂಲ ಎಂದರೆ ಕೇವಲ ದೇಶದ ಜನಸಂಖ್ಯೆ ಅಲ್ಲ. ಅದು ಜನಶಕ್ತಿ ಆಗಿದೆ. ಅಂದರೆ ಗುಣ ಮತ್ತು ಮೌಲ್ಯಭರಿತ ಜನತೆ. ಹಾಗೆಂದರೆ: ಶಿಕ್ಷಣ-ತರಬೇತಿಯುಳ್ಳ, ಆರೋಗ್ಯಕಾಯರೂ, ಉನ್ನತ ಧ್ಯೇಯ ಉಳ್ಳವರು, ಪ್ರಾಮಾಣಿಕರು-ಕಷ್ಟಸಹಿಷ್ಣುಗಳೂ, ದೇಶಪ್ರೇಮಿ-ಉದ್ಯಮ ಸಾಹಸ ಪ್ರವೃತ್ತಿಯುಳ್ಳ ಜನತೆ. ಇವರು ಒಂದು ಸುಧಾರಿತ, ಸುವ್ಯವಸ್ಥಿತ, ಸುಸ್ಥಿರ ನಾಡನ್ನು ಕಟ್ಟಲು ಬೇಕಾಗಿರುವ ಅಮೂಲ್ಯ ಸಂಪತ್ತು. ಸಮಾಜದ ಆಸ್ತಿಯಾಗಿದ್ದಾರೆ.

ಸಮಾಜವು ಕುಟುಂಬಗಳಿಂದ ಕೂಡಿದೆ. ಕುಟುಂಬಗಳು ಅದರ ನಿರ್ವಾಹಕರಾದ ಗೃಹಿಣಿಯರನ್ನವಲಂಬಿಸಿವೆ. "ಹೆಣ್ಣು ಕುಟುಂಬದ ಕಣ್ಣು' ಎಂದಿದ್ದಾರೆ. ಕಣ್ಣು ಎಂದರೆ ಬೆಳಕು, ಜ್ಞಾನ, ಅರಿವು ಎಂದರ್ಥ. ಆದ್ದರಿಂದ ಗೃಹಿಣಿಯರನ್ನು "ಗೃಹಿಣೀ ಗೃಹಮುಚ್ಯತೆ" ಎಂದು ಗೌರವಿಸಲಾಗಿದೆ. ಹೆಣ್ಣಿಗೂ ಗೃಹಕೃತ್ಯಕ್ಕೂ ಅವಿನಾಭಾವ ಸಂಬಂಧ. ಬಾಲ್ಯಾವಸ್ಥೆಯಿಂದಲೇ ಹೆಣ್ಣು ಗೃಹಿಣಿಯ ಲಕ್ಷಣಗಳನ್ನು ವ್ಯಕ್ತಿಪಡಿಸುತ್ತಾಳೆ. ಆದ್ದರಿಂದಲೇ "A little boy is a little boy, but a little girl is a little woman" ಎನ್ನಲಾಗಿದೆ. ಗೃಹಕೃತ್ಯ ಎಂದರೆ, ಕುಟುಂಬದ ಸುವ್ಯವಸ್ಥೆ. ಜೊತೆಗೆ ಸಮಾಜದ ಸ್ವಾಸ್ಥ್ಯಕ್ಕೆ ಸುಗುಣ, ಸುಧೃಡ ಪ್ರಜೆಗಳ ಸಮರ್ಪಣೆ ಎಂಬ ವ್ಯಾಪಕ ನಂಬಿಕೆ ಇದೆ.

ಶೈಶವದಲ್ಲಿ ಮಾನವ, ಸ್ವಭಾವ-ಗುಣಗಳಿಂದ ಮಂಗನಾಗಿರುತ್ತಾನೆ. ಅದೇ ಚತುಷ್ಪಾದ, ಚಾಪಲ್ಯ, ಚಾಂಚಲ್ಯತೆ. ಈ ಮಂಗನನ್ನು ಮಗನನ್ನಾಗಿ ತಿದ್ದುವ ಸಾಹಸ ಮಾತೆಯದು. ಮರಿವಾನರನನ್ನು ನರಮಾನವನ್ನಾಗಿ ರೂಪಿಸುವ ಛಲ ತಾಯಿಗೆ. ಈ ಉದ್ದೇಶದಿಂದ "ಮಗುವನ್ನು ಮುದ್ದಿಸುತ್ತಾ, ಮೃಗವನ್ನು ಪಳಗಿಸುತ್ತಾ" ಶಿಶುವಿಗೆ ಒಂದು ವ್ಯಕ್ತಿತ್ವ

ನೀಡುವ ಅನನ್ಯ ಛಲ ತಾಯಿಗೆ. ಈ ಕಾರ್ಯದಲ್ಲಿ ಆಕೆ ಒಬ್ಬ ನುರಿತ ಶಿಲ್ಪಿಯ ಮಗ್ನತೆ, ಜಾಗ್ರತೆ, ಕೌಶಲ್ಯವನ್ನು ಮೈಗೂಡಿಸಿಕೊಳ್ಳುತ್ತಾಳೆ. ತನ್ನ ಭ್ರೂಣಕ್ಕೆ ಆಕಾರವನ್ನು, ಅದರ ಪ್ರಾಣಕ್ಕೆ ಆಹಾರವನ್ನು ಚಿತ್ತಕ್ಕೆ ಸಂಸ್ಕಾರವನ್ನು, ಚಿಂತನೆಗೆ ವಿಚಾರವನ್ನು ಮಾತೆ ಅದೆನಿತು ಸಂಭ್ರಮ, ಸಂಯಮ, ಮತ್ತು ಸಮಯವರಿತು ತಿಳಿಸುವ, ತಿದ್ದುವ, ಬೆಳೆಸುವ ಸತತ ಯತ್ನದಲ್ಲಿರುತ್ತಾಳೆಂದರೆ; ಉಹ್ಞೂ ಅದು ಯತ್ನವಲ್ಲ, ಯಜ್ಞವೆನಿಸುತ್ತದೆ!

ತನ್ನ ಕುಡಿಗೆ ಆಕಾರ, ಆಹಾರ, ರಕ್ಷಣೆಯನ್ನು ನೀಡುವುದು ಬಹುಶಃ ಮಾತೃತ್ವದ ಮಮತೆಯ ನೈಸರ್ಗಿಕ ಪ್ರವೃತ್ತಿ ಎನಿಸಿದೆ. ಏಕೆಂದರೆ ಮನುಷ್ಯ ಜಾತಿಯೇ ಅಲ್ಲದೇ, ಇತರ ಪಶು, ಪ್ರಾಣಿ, ಪಕ್ಷಿಗಳಾದಿಯಾಗಿ, ಈ ಕಾರ್ಯವನ್ನು ಅತಿ ನಿಷ್ಠೆಯಿಂದ, ಯಾವ ಬೆಲೆ ತೆತ್ತಾದರೂ ಸರಿ ಸರ್ವಹಿಸುತ್ತವೆ.

ಆದರೆ ತನ್ನ ಶಿಶುವಿಗೆ ಸಂಸ್ಕಾರ, ವಿಚಾರ, ವಿವೇಕಾದಿ ಸದ್ಗುಣಗಳನ್ನು ತಿಳಿಸಿ, ಬೆಳೆಸುವುದು, ಸುಸಂಸ್ಕೃತ, ನಾಗರೀಕ ತಾಯಿಯ ಹೆಗ್ಗಳಿಕೆಯಾಗಿದೆ. ಇಂಥಹ ಸುಸಂಸ್ಕೃತ ತಾಯಂದಿರಿಂದಲೇ ಸುಸಂಸ್ಕೃತ ಸಮಾಜ ನಿರ್ಮಾಣವಾಗುತ್ತದೆ. ಇವರಿಂದಲೇ ''ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸಿ''ಎಂಬ ಶ್ಲೋಕ ಹುಟ್ಟಿದೆ.

ಹೀಗೆ ಸದ್ದಿಲ್ಲದೆ ಸಮಾಜವನ್ನು, ಮೌಲ್ಯಗಳನ್ನು, ಬೆಳೆಸುತ್ತ ಬಂದಿರುವ ಸ್ತ್ರೀಯರ ಕುರಿತು ಸಮಾಜವೂ ಸ್ಪಂದಿಸುತ್ತಲೇ ಬಂದಿದೆ. ಮಹಿಳೆಯನ್ನು ಕುರಿತು ಸಮಾಜ ತನ್ನ ಕೌತುಕ, ಕಳಕಳಿಯನ್ನು ವ್ಯಕ್ತಪಡಿಸುತ್ತಲೇ ನಡೆದಿದೆ. 'ಮಹಿಳೆ'ಎಂಬ ನಿತ್ಯ ನೂತನ, ನಿತ್ಯ ಚೇತನಕಾರಿ ಶಕ್ತಿಯ ಸುತ್ತ ವಿಚಾರಗಳು, ವಿವಾದಗಳು ಬೆಳೆಯುತ್ತಲೆ ಇವೆ; 'ಸೂರ್ಯನನ್ನು ಸುತ್ತುವ ಗ್ರಹಗಳ ಹಾಗೆ'.

ಮಹಿಳೆಯನ್ನು ತನ್ನ ಆಸಕ್ತಿಯ ಕೇಂದ್ರವಾಗಿ ಹೊಂದಿರದ ಕವಿಕಲಾವಿದರನ್ನು, ಸಾಧು-ಸತ್ಪುರುಷರನ್ನು, ಸಾಹಿತಿ-ವೇದಾಂತಿಗಳನ್ನು, ವಿಜ್ಞಾನಿ-ರಾಜಕಾರಣಿ, ಅಧಿಕಾರಿ-ವ್ಯಾಪಾರಿ, ಜನರು ಬಹುಶಃ ಹುಡುಕಿದರೂ ದೊರೆಯಲಾರರು. ಅವಳಿಂದ ಸ್ಫೂರ್ತಿಗೊಂಡು ನವರಸಭರಿತ ಕಾವ್ಯಗಳನ್ನು ರಚಿಸಿದವರು ಮಹಾಕವಿಗಳೆನಿಸಿದ್ದಾರೆ. ಹೆಣ್ಣನ್ನು ಬಣ್ಣದ ಕುಂಚದಲ್ಲಿ ಬಣ್ಣಿಸಿ ಅಮರ ಕಲಾಕಾರರೆನಿಸಿದ್ದಾರೆ. ಮೌಲ್ಯಯುತ ಕೃತಿಕಾರರು, ಜ್ಞಾನಪೀಠ, ನೊಬೆಲ್ ಇತ್ಯಾದಿ ಪಾರಿತೋಷಿತರಾಗಿದ್ದರೆ. ಸ್ತ್ರೀಯನ್ನು ಪೂಜಿಸಿ, ಗೌರವಿಸಿ, ಬುದ್ಧ, ಬಸವಾದಿ, ಪರಮಹಂಸ, ಮಹಾತ್ಮರೆನಿಸಿದ್ದಾರೆ, ಅವಳ ಕಷ್ಟಗಳಿಗೆ ಸ್ಪಂದಿಸಿದವರು ಸಮಾಜೋದ್ಧಾರಕರೆನಿಸಿದ್ದಾರೆ.

ಇಷ್ಟಾದರೂ ಮಹಿಳೆಯ ಬದುಕೆಂದೂ ಸರಳರೇಖೆಯಂತೆ ಸುರಳೀತವಾಗಿಲ್ಲ. ಅದು ಹಲವು ಮುಖ, ಮಜಲು, ಗೋಜಲುಗಳಿಂದ ಸಂಕೀರ್ಣವಾಗಿದೆ. ಸ್ತ್ರೀಯು ಸಮಾಜದ ಅಗ್ರಹ-ಅನುಗ್ರಹ, ನಿಂದನೆ-ಅಭಿನಂದನೆ, ಉತ್ಪ್ರೇಕ್ಷೆ-ಉಪೇಕ್ಷೆಗಳ ಸಿಹಿ-ಕಹಿಗಳನ್ನು ಅನುಭವಿಸುತ್ತಲೇ ತುಳಿಯಲ್ಪಟ್ಟು-ಹಳಿಯಲ್ಪಟ್ಟರೂ ಸಹಾ ನಿರಂತರ ಏಳುತ್ತ-ಬೀಳುತ್ತಾ, ಬಾಳಿದ್ದಾಳೆ, ಮಾನವ ಜನಾಂಗವನ್ನು ಉಳಿಸಿದ್ದಾಳೆ, ಬೆಳೆಸುತ್ತಲೆ ಬಂದಿದ್ದಾಳೆ.

ಇತಿಹಾಸ ಹೇಳುವಂತೆ ಅದೆಷ್ಟೋ ಬಾರಿ ಆಕೆ ದುರ್ಗಿಯಂತೆ ದುರ್ಗುಣಗಳನ್ನು ಧ್ವಂಸಮಾಡಿದ್ದಾಳೆ, ಸದ್ಗುಣ, ಸಂಪನ್ನತೆಗಳನ್ನು, ಬಹಳ ಬೆಲೆತೆತ್ತು ಜತನಮಾಡಿದ್ದಾಳೆ. ಅವಳ ಈ ಉನ್ನತ-ಉದಾತ್ತ ಗುಣದಿಂದಾಗಿಯೇ ಬಹುಶಃ,

*ಜೀವಿಗಳ ನೆಲೆಯಾದ ಭೂಮಿಯನ್ನು "ತಾಯಿ"ಎಂದರು*

*ಜೀವಿಗಳ ಸೆಲೆಯಾದ ನದಿಗಳನ್ನು "ಮಾಯಿ"ಎಂದರು*

*ಅಮೃತ ಸದೃಶ ಪುಣ್ಯಕೋಟಿ ಸಂಕುಲವನ್ನು "ಗೋಮಾತೆ"*ಎಂದರು;ಪೂರ್ವಜರು.

ಇಷ್ಟೆಲ್ಲಾ ವಿಶೇಷ, ವಿಶೇಷಣ, ಭೂಷಿತೆಯಾದ "ಸ್ತ್ರೀಕುಲ"ದ ಖಾಸಗಿ ಬದುಕು ಸಂತಸಕರವಾಗಿದೆಯೆ? ಇದಕ್ಕೆ ಉತ್ತರ, ಬಹುಶಃ ನಕಾರಾತ್ಮಕವಾಗಿದೆ. ಅವಳು ಎರಡನೆ ದರ್ಜೆ ಪ್ರಜೆ ಎಂಬುದು ಸಾಬೀತಾಗಿದೆ. ಜಗತ್ತಿನಾದ್ಯಂತ ಮಹಿಳೆಗೆ ದೊರೆಯುತ್ತಿರುವ, ಅಕ್ಷರ, ಆಹಾರ, ಆರೋಗ್ಯ, ಅವಕಾಶ, ಅರಿವು, ಆಯ್ಕೆ, ಸ್ವಾತಂತ್ರ್ಯ, ಆರ್ಥಿಕತೆ, ಆರೈಕೆಗಳು ಇದನ್ನು ಪುಷ್ಟೀಕರಿಸುತ್ತವೆ.

ಸಾಮಾಜಿಕವಾಗಿ ಮಹಿಳೆಯ ಸ್ಥಾನಮಾನ ಮತ್ತು ಸ್ವಾತಂತ್ರ್ಯಗಳು ಕಡಿಮೆ ಮಟ್ಟದವು. ಸ್ತ್ರೀಕುಲ ಒಂದು ಸಂಕಷ್ಟಗಳ ಸರಮಾಲೆಯಿಂದ ಬಂಧಿಸಲ್ಪಟ್ಟಿದ್ದು, ಅವು, ಅವಳತ್ತ ಪ್ರಹರಿಸಲೆಂದು ಕತ್ತಿ ಝುಳಪಿಸುತ್ತಾ ನಿಂತಂತೆ ಭಾಸವಾಗುತ್ತದೆ. ಅವಳ ಕೆಲ ಸಾಮಾನ್ಯ ತೊಂದರೆಗಳೆಂದರೆ; ಭ್ರೂಣಹತ್ಯೆ, ಶಿಶುಹತ್ಯೆ, ಶಾಲೆ ಬಿಡುವುದು, ಹೆಣ್ಣು ಶಿಶು ಕುರಿತ ತಾತ್ಸಾರ, ಬಾಲಾಪರಾಧ, ಬಾಲಕಾರ್ಮಿಕ ಪದ್ಧತಿ, ಭಿಕ್ಷಾಟನೆ, ಬಾಲೆಯರ ಅಪಹರಣ-ಮಾರಾಟ, ಬಾಲ ವೇಶ್ಯಾವಾಟಿಕೆ, ಬಾಲ್ಯವಿವಾಹ, ಅತ್ಯಾಚಾರ ಇತ್ಯಾದಿ.

ಸ್ತ್ರೀಯರಿಗೆ; ಬಡತನ, ವೇತನ ತಾರತಮ್ಯ, ಲೈಂಗಿಕ ಕಿರುಕುಳ, ಕೌಟಂಬಿಕ ಹಿಂಸೆ, ವರದಕ್ಷಿಣೆ ಪಿಡುಗು, ದೇವದಾಸಿ ಪದ್ಧತಿ, ಸಮೂಹ ಮಾಧ್ಯಮಗಳಲ್ಲಿ ದುರ್ಬಳಕೆ, ಧಾರ್ಮಿಕ ಹಿನ್ನೆಲೆಯಲ್ಲಿ ಶೋಷಣೆ, ಸತಿಪದ್ಧತಿ ಇತ್ಯಾದಿ ತೊಂದರೆಗಳಿವೆ.

ಅನೇಕ ಸನ್ನಿವೇಶಗಳಲ್ಲಿ ನಮ್ಮ ಮಮತೆಯ ಮಹಿಳೆ ಅಸ್ಪೃಶ್ಯಳೂ, ಅದೃಶ್ಯಳೂ, ಅಗೋಚರಳೂ ಆಗಿಬಿಡುತ್ತಾಳೆ. ಮಹಿಳಾ ಜಾಗ್ರತಿ ಮತ್ತು ಸುಧಾರಣೆ ಕುರಿತು ಆಗಿಂದಾಗ್ಯೆ ಹಲವಾರು ಕಾರ್ಯಕ್ರಮಗಳು ಗೋಚರಿಸಿದರೂ ಸಹಾ, ಸ್ತ್ರೀಯ ಮೌಢ್ಯ, ಅಸಂಘಟನೆ, ಅರಿವಿನ ಕೊರತೆಯ ಕಾರಣ, ಅವು ಫಲ ನೀಡಿಲ್ಲ. ಅಲ್ಲದೆ ಇದೊಂದು ಜಾಗತಿಕ ಪಿಡುಗಾದ ಕಾರಣ, ವಿಶ್ವಸಂಸ್ಥೆಯು ೧೯೭೫-೭೬ನೇ ವರ್ಷವನ್ನು 'ಮಹಿಳಾ ವರ್ಷ'ವೆಂದೂ, ೧೯೭೫-೮೫ನ್ನು 'ಮಹಿಳಾ ದಶಕ'ವೆಂದೂ ಘೋಷಿಸಿತು. ಇಷ್ಟರಲ್ಲೇ ವಿಶ್ವಮಹಿಳಾ ಸಮಾವೇಶವು ನಾಲ್ಕನೇ ಬಾರಿಗೆ ಬೀಜಿಂಗ್ ನಲ್ಲಿ (ಚೈನಾ) ನಡೆಯಿತು. ಈ ಹಿನ್ನೆಲೆಯಲ್ಲಿ ಮಹಿಳಾ ಪರ ಘೋಷಣೆ, ಕಾರ್ಯಕ್ರಮಗಳು, ಕಾನೂನುಗಳು ವ್ಯಾಪಕವಾಗಿ ಕಂಡುಬಂದಿವೆ.

ಭಾರತವು ಸಂವಿಧಾನಾತ್ಮಕವಾಗಿ ಮಹಿಳೆಗೆ ಸಮಾನತೆ ನೀಡಿದೆ. ಕೇಂದ್ರ ಹಾಗೂ ರಾಜ್ಯಗಳಲ್ಲಿ 'ಮಹಿಳೆ ಮತ್ತು ಮಕ್ಕಳ' ಕಲ್ಯಾಣ ಖಾತೆಗಳಿವೆ. ಭಾರತದಲ್ಲಿ 'ಮಹಿಳಾ

ಅಭಿವೃದ್ಧಿ ನಿಗಮ' ಸ್ಥಾಪನೆಯಾಗಿದೆ. ಗ್ರಾಮೀಣ ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿಗಾಗೇ ಅನೇಕ ವಿಶೇಷ ಕಾರ್ಯಕ್ರಮಗಳಿವೆ. ಇದಲ್ಲದೆ ೧೯೯೨ರಲ್ಲಿ 'ರಾಷ್ಟ್ರೀಯ ಮಹಿಳಾ ಆಯೋಗ'ವನ್ನು ರಚಿಸಲಾಗಿದೆ. ಇಡೀ ವರ್ಷ ಸಂವಿಧಾನ ತಿದ್ದುಪಡಿ(೭೩ ಮತ್ತು ೭೪)ಮೂಲಕ ಮಹಿಳೆಯರಿಗೆ ಸ್ಥಾನಿಕ ಸಮಿತಿಗಳಲ್ಲಿ ಮೀಸಲಾತಿ ನೀಡಿದೆ. ೧೯೯೮(ಡಿಸೆಂಬರ್)ನಲ್ಲಿ 'ಮಹಿಳಾ ಮೀಸಲಾತಿ ಮಸೂದೆ'ಯು ಸಂಸತ್‌ನಲ್ಲೂ ಮಹಿಳೆಯರಿಗೆ ಮೀಸಲಾತಿ ಕೋರಿ ಮಂಡಿಸಲ್ಪಟ್ಟಿದೆ.

ಇಷ್ಟಾದರೂ ಮಹಿಳೆಯ ಸ್ಥಿತಿ ತೃಪ್ತಿಕರವಾಗಿಲ್ಲ. ಅವಳ ವಿಮೋಚನೆ, ಅವಳ ಸ್ವಾವಲಂಬನೆಯಲ್ಲಿದೆ. ಅವಳ ಸ್ವಾವಲಂಬನೆಗೆ ಅರಿವು ಹಾಗೂ ಜಾಗೃತೆಗಳು ಆಧಾರವಾಗಿವೆ. ಇನ್ನು ಹೆಚ್ಚಿನ, ತೀವ್ರತರ ಮಹಿಳಾಪರ ಕಾನೂನು ರಚನೆ ಅಗತ್ಯವಿದೆ.

Jown Locke ಹೇಳುವಂತೆ "Where there are rules, there Prevails Freedom" ಶಾಸನಗಳು, ಶಿಕ್ಷಣ, ಜಾಗ್ರತಿ, ಮಹಿಳಾ ಸಂಘಟನೆಗಳು ಅವಳನ್ನು ಶಕ್ತಿವಂತಳನ್ನು, ಸ್ವಾವಲಂಬಿ, ಸ್ವತಂತ್ರಳನ್ನೂ ಮಾಡಬಲ್ಲವು. ಮಹಿಳಾ ಸುಧಾರಣೆ ತೀರಾ ಅನಿವಾರ್ಯ. ಏಕೆಂದರೆ ಆಕೆ ದೇಶದ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ರಂಗದ ಆಧಾರ ಸ್ತಂಭವಾಗಿದ್ದಾಳೆ.

ಮಹಿಳೆ ಮತ್ತು ಆರ್ಥಿಕ ಕ್ಷೇತ್ರ : ಯಾವುದೇ ದೇಶದ ಆರ್ಥಿಕ ಕ್ಷೇತ್ರದಲ್ಲಿ ಮಹಿಳೆಯದು ಗಮನಾರ್ಹ ಸ್ಥಾನ. ಏಕೆಂದರೆ ಮಹಿಳೆಯರು ದೇಶದ;

೧. ಶೇ.೫೦ರಷ್ಟು ಪ್ರಜಾಶಕ್ತಿ, ದುಡಿಯುವ ಕೈಗಳ ಮತ್ತು ಗ್ರಾಹಕ ಮಾರುಕಟ್ಟೆಯ ವ್ಯಾಪ್ತಿ ಹೊಂದಿದ್ದಾರೆ.

೨. ಗಳಿಕೆ ಹಾಗೂ ಉಳಿತಾಯದ ಮೂಲ. ಭಾರತದ ಶೇ.೨೫ರಷ್ಟು, ವಿಶ್ವದಲ್ಲಿ ಶೇ.೩೩ ರಷ್ಟು ಮಹಿಳೆಯ ದುಡಿಮೆಯ ಆದಾಯವೆನಿಸಿದೆ.

೩. ಅಸಂಘಟಿತ ಕ್ಷೇತ್ರ ಹಾಗೂ ಗ್ರಾಮೀಣ ಚಟುವಟಿಕೆಗಳ ಪ್ರಧಾನ ಶ್ರಮಿಕರೆನಿಸಿದ್ದಾರೆ. ಭಾರತದಲ್ಲಿ ಶೇ.೭೦ ಮಹಿಳೆಯರು ಅಸಂಘಟಿತ ಕ್ಷೇತ್ರದಲ್ಲೂ, ಗ್ರಾಮೀಣ ವಲಯದಲ್ಲಿ ದುಡಿಯುತ್ತಾರೆ. ಕೃಷಿ, ಕಾರ್ಖಾನೆಗಳು, ಕಟ್ಟಡ ನಿರ್ಮಾಣ ಮೊದಲಾದೆಡೆ ದೈಹಿಕ ಶ್ರಮ ನಿರ್ವಹಿಸುತ್ತಾರೆ.

೪. ಶಿಕ್ಷಣ ಕ್ಷೇತ್ರದ ಮುಖ್ಯ ಪಾಲುದಾರರಾಗಿದ್ದಾರೆ. ಭಾರತದ ಶೇ.೩೭ ಮಹಿಳೆಯರು, ವಿಶ್ವದಲ್ಲಿ ಶೇ.೭೦ ಮಹಿಳೆಯರು ಸಾಕ್ಷರ ವರ್ಗಕ್ಕೆ ಸೇರಿದ್ದಾರೆ. ಶಾಲಾ ಕಾಲೇಜು ಕಲಿಕೆ ಹಂತದಲ್ಲಿ ಭಾರತದ ಶೇ.೪೬ರಷ್ಟು ಹಾಗೂ ವಿಶ್ವದಲ್ಲಿ ಶೇ.೫೪ ಪ್ರತಿನಿಧಿಸುತ್ತಾರೆ.

೫. ಶಿಕ್ಷಣ ಹಾಗೂ ತರಬೇತಿ ಹೆಚ್ಚಳದಿಂದಲೂ, ಜೀವನ ವೆಚ್ಚದ ಹೆಚ್ಚಳದ ಕಾರಣದಿಂದಲೂ ಇಂದು ಮಧ್ಯಮ ವರ್ಗದ ಸುಶಿಕ್ಷಿತ ಮಹಿಳೆ ಸಂಘಟಿತ ಕ್ಷೇತ್ರದಲ್ಲಿ ದುಡಿಯುತ್ತಿದ್ದು, ಪ್ರಮುಖವಾಗಿ ಸೇವಾ ವಲಯದಲ್ಲಿ ಕಂಡುಬರುತ್ತಾರೆ. ಭಾರತದಲ್ಲಿ

ಶೇ.೨೦.೫ ಮಹಿಳೆಯರು ಸೇವಾ ಕ್ಷೇತ್ರದಲ್ಲಿ, ವೈದ್ಯೆ, ದಾದಿ, ಶಿಕ್ಷಕಿ, ಕಛೇರಿಗಳಲ್ಲಿ ಮೊದಲಾದ ಸೇವೆಗಳಲ್ಲಿ ದುಡಿದಿದ್ದಾರೆ. ವಿಶ್ವದಲ್ಲಿ ಶೇ.೫೦ಗಿಂತ ಕಡಿಮೆ ಮಹಿಳೆಯರು ಸೇವಾ ವಲಯದಲ್ಲಿ ದುಡಿದಿದ್ದಾರೆ.

೬. ಸರಕಾರದ ಬೆಂಬಲದೊಂದಿಗೆ ಈಗೀಗ ಮಹಿಳೆಯರು ಸ್ವತಂತ್ರ ಉದ್ದಿಮೆ, ವ್ಯವಹಾರ, ಹಣಕಾಸು ಕ್ಷೇತ್ರದಲ್ಲೂ ದುಡಿಮೆಯ ಸಾಹಸ, ತೋರುತ್ತಿದ್ದಾರೆ.

೭. ಜವಾಬ್ದಾರಿಯುತ ಹುದ್ದೆಗಳಲ್ಲಿ ಕನಿಷ್ಠ ಸಂಖ್ಯೆ (ಭಾರತ ಶೇ.೨.೩) ಯಲ್ಲಿದ್ದರೂ ಸಹಾ ಮಹಿಳೆಯರು ತಮ್ಮ ಪರಿಶ್ರಮ, ಪ್ರಾವಿಣ್ಯತೆ, ದಕ್ಷತೆಗಳಿಂದ ಮಾನ್ಯತೆ ಪಡೆದಿದ್ದಾರೆ.

**ಸಂಗೀತ, ಸಾಹಿತ್ಯ, ಸಾಂಸ್ಕೃತಿಕ ವಿಜ್ಞಾನ, ಕ್ರೀಡೆ ಹಾಗೂ ಮಹಿಳೆ**

ವಿವಿಧ ಸಾಂಸ್ಕೃತಿಕ ಕಲೆಗಳಿಗೂ ಮಹಿಳೆಯರಿಗೂ ಪುರಾತನ ನಂಟು. ಅನಾದಿ ಕಾಲದಿಂದಲೂ ಮಹಿಳೆ ಈ ಕ್ಷೇತ್ರಗಳಲ್ಲಿ ತನ್ನ ಕೈಚಳಕ ಪ್ರದರ್ಶಿಸಿದ್ದಾಳೆ. ಉನ್ನತ ವರ್ಗದ ಮಹಿಳೆಯರಿಂದ ವಿವಿಧ ಪ್ರಕಾರದ ಕಲಾಕ್ಷೇತ್ರ ಬೆಳಗಿದೆ. ಸತತ ಪರಿಶ್ರಮ, ಸಾಧನೆಯ ಕುರುಹಾಗಿ ಮಹಿಳಯರು ಸಾಹಿತ್ಯ, ಸಂಗೀತಾದಿ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ದುಡಿದು ಜ್ಞಾನಪೀಠ, ನೊಬೆಲ್ ಪಾರಿತೋಷಕಗಳಂಥ ಶ್ರೇಷ್ಠ ಮಟ್ಟಕ್ಕೆ ತಲುಪಿದ ನಿದರ್ಶನಗಳಿವೆ. ವಿವಿಧ ಅಕಾಡೆಮಿಗಳು ಮಹಿಳೆಯರ ಸಾಧನೆಯನ್ನು ಗೌರವಿಸಿವೆ. ಜಾಗತಿಕ ಮಟ್ಟದಲ್ಲೂ ಮಹಿಳೆ, ವಿಜ್ಞಾನ, ಕ್ರೀಡೆ, ಸಾಂಸ್ಕೃತಿಕ ವಲಯದಲ್ಲಿ ತಮ್ಮ ಶ್ರೇಷ್ಠ ಕೊಡುಗೆಗಳಿಂದ ತಾರಾಪಟ್ಟ ಗಿಟ್ಟಿಸಿದ್ದಾರೆ.

**ರಾಜಕೀಯ ಕ್ಷೇತ್ರ ಮತ್ತು ಮಹಿಳೆ :** "ರಾಜಕೀಯವು ಪುರುಷನ ಭದ್ರ ಕೋಟೆ" ಎಂದರೂ. ಈ ಪುರುಷ ಸಾಮ್ರಾಜ್ಯವನ್ನು ಆಗಾಗ ಮಹಿಳೆಯರು ತಮ್ಮ ಹತೋಟಿಗೆ ತೆಗೆದುಕೊಂಡ ನಿದರ್ಶನಗಳಿವೆ. ಆಡಳಿತ ಚುಕ್ಕಾಣಿ ಹಿಡಿದು ದೇಶವನ್ನು ಸಮರ್ಥವಾಗಿ ಆಳಿದ್ದೂ ಇದೆ. ಹೋರಾಟ, ಯುದ್ಧಗಳಲ್ಲಿ, ಕಿಚ್ಚಿನಿಂದ ಬಿಚ್ಚುಗತ್ತಿ ತಿರುಗಿಸಿದ್ದು ಇದೆ. ತ್ಯಾಗ ಬಲಿದಾನಗಳನ್ನು ಮಾಡಿ, ಮಡಿದ ಅದೆಷ್ಟೋ ವೀರ, ರಾಣಿಯರು, ಹೋರಾಟ ಗಾರ್ತಿಯರ ಪಟ್ಟಿ ಎಲ್ಲರಿಗೂ ತಿಳಿದಿದೆ. ಆದರೆ ಇದೆಲ್ಲಾ ತುರ್ತು, ಅನಿವಾರ್ಯ ಸಂದರ್ಭಗಳಲ್ಲಿ ಮಾತ್ರ. ಉಳಿದಂತೆ, ಮಹಿಳೆ ರಾಜಕೀಯವಾಗಿ ಪುರುಷನ ನೆರಳಾಗಿ, ಸಹಕರಿಸುತ್ತಾ ಬಂದಿದ್ದಾಳೆ. "There is a Woman, behind every man's success" ಎಂಬ ಮಾತಿಗೆ ನಿದರ್ಶನ ರೂಪಿಯಾಗಿದ್ದಾಳೆ.

೨೦ನೆಯ ಶತಮಾನದಲ್ಲಿ ಹೆಸರಾಂತ ಮನೆತನಗಳ ರಾಜಕೀಯ ಮಹತ್ವಾಕಾಂಕ್ಷಿ ಹೆಣ್ಣುಗಳು, ಅಧಿಕಾರದ ಉತ್ತುಂಗವನ್ನೇರಿ ಮೆರೆದಿದ್ದಾರೆ. ಭಾರತದ ಇಂದಿರಾ, ಶ್ರೀಲಂಕಾದ ಸಿರಿಮಾವೋ, ಇಸ್ರೇಲ್‌ನ ಗೊಲ್ಡಾಮಿಯರ್, ಇಂಗ್ಲೆಂಡ್‌ನ ಮಾರ್ಗರೇಟ್, ನಂತರದ ಪೀಳಿಗೆಯಲ್ಲಿ ಬೇನಜೀರ್, ಬೇಗಂ ಖಲಿದಾ ಮೊದಲಾದವರಿದ್ದಾರೆ. ಆದರೆ

ಸಾಮಾನ್ಯ ಕುಟುಂಬದ ಮಹಿಳೆ ಈ ಮಟ್ಟವನ್ನು ರಾಜಕೀಯದಲ್ಲಿ ತಲುಪುವುದು ಅಸಾಧ್ಯವೆನ್ನಬಹುದು. ಏಕೆಂದರೆ, ರಾಜಕೀಯದ ಚದುರಂಗದಾಟದಲ್ಲಿ ಮಹಿಳೆಯ ಪ್ರಾಮಾಣಿಕತೆ, ದಕ್ಷತೆ, ಕಾರ್ಯಕ್ಷಮತೆ, ಬುದ್ಧಿವಂತಿಕೆಗಳಾವುದಕ್ಕೂ ಮಾನ್ಯತೆ ದೊರೆಯದು. ಅದು ಕುಟಿಲತೆ, ಕಠಿಣತೆ, ಕೃತ್ರಿಮತೆಯ ಕ್ಷೇತ್ರ.

ಮಹಿಳೆಯ ಮೆದುವಾದ ಮನಸ್ಸು, ಕೋಮಲ ಕರಗಳಿಗೆ ರಾಜಕೀಯದ ಕ್ರೌರ್ಯ, ಕಠಿಣತೆಗಳು ಒಗ್ಗುವುದಿಲ್ಲೆಂದು, ಉದ್ದೇಶ ಪೂರ್ವಕವಾಗಿ ಆಕೆಯನ್ನು ಈ ಕ್ಷೇತ್ರದಿಂದ ಹೊರಗಿಡುತ್ತಾ ಬಂದಿದೆ, ಈ ವಿಶ್ವ. ಕನಿಷ್ಠ, ಚುನಾವಣೆಗಳಲ್ಲಿ ಮತದಾನದ ಹಕ್ಕನ್ನು ಸಹಾ ಆಕೆ ಈ ಶತಮಾನದಲ್ಲಿ ಬಲು ಹೋರಾಟದ ನಂತರ ಪಡೆದಿದ್ದಾಳೆ. ಅಮೆರಿಕನ್ ಮಹಿಳೆ ೧೯೨೦ರಲ್ಲಿ, ಬ್ರಿಟಿಷ್ ಮಹಿಳೆ ೧೯೨೮ರಲ್ಲಿ, ಭಾರತೀಯ ಮಹಿಳೆ ೧೯೫೦ರಲ್ಲಿ, ಜಪಾನಿ ಮಹಿಳೆ ೧೯೪೭ರಲ್ಲಿ ಮತದಾನದ ಹಕ್ಕು ಪಡೆದಳು. ಇಂದಿಗೂ ವಿಧಾನ ಪರಿಷತ್ ಚುನಾವಣೆಯ "ಶಿಕ್ಷಕರ ಕ್ಷೇತ್ರ ಹಾಗೂ ಪದವೀಧರ ಕ್ಷೇತ್ರ"ಗಳ ಮತದಾತರು, ಕನಿಷ್ಠ ಪದವೀಧರರಾಗಿರದೆ ಮತ ಚಲಾಯಿಸಲಾರರು.

ಇಂಥಹ ರಾಜಕೀಯ ಹಿನ್ನಡೆಯ ಕಾರಣ ಸಂಸತ್ ಸದಸ್ಯತ್ವದಲ್ಲಿ ಮಹಿಳೆಯ ಸಂಖ್ಯೆ ಭಾರತದಲ್ಲಿ ಶೇ.೭, ವಿಶ್ವದಲ್ಲಿ ಶೇ.೧೧ ಮಾತ್ರ ಇರಲು ಕಾರಣವಾಗಿದೆ. ಅತಿಮುಂದುವರೆದ ರಾಷ್ಟ್ರಗಳೆನಿಸಿದ ಅಮೇರಿಕಾ, ಫ್ರಾನ್ಸ್, ಜಪಾನ್‌ಗಳಲ್ಲೂ ಮಹಿಳಾ ಅಧ್ಯಕ್ಷರು ಕಂಡು ಬಂದಿಲ್ಲಾ. ಶ್ರೀಮಂತಿಕೆಯ ಬಂಡಾಯ ಹೊಂದಿರುವ ಬ್ರಿಟನ್ನಿನಲ್ಲೇ ಒಬ್ಬ ಮಹಿಳಾ (ನ್ಯಾಯಾಧೀಶ) ಜಡ್ಡ್ ಕಂಡುಬರಲು ೧೯೭೨ರ ತನಕ ಕಾಯಬೇಕಾಯಿತು ಎಂದರೆ ಭಾರತದಂತ ಹಿಂದುಳಿದ ರಾಷ್ಟ್ರದ ಸ್ತ್ರೀಯರ ಸ್ಥಿತಿಗತಿಗಳು ಆಶ್ಚರ್ಯಕರವೆನಿಸುವುದಿಲ್ಲ.

ಒಟ್ಟಾರೆ ಯಾವುದೇ ಕ್ಷೇತ್ರವಿರಲಿ, ಕೆಲಸವಿರಲಿ, ಚಳುವಳಿ ಇರಲಿ, ಮಹಿಳೆಯ ಪಾಲುಗಾರಿಕೆ ಇಲ್ಲದೆ ಫಲ ಶೂನ್ಯವಾಗಿದೆ. ಸ್ವದೇಶಿ, ಸ್ವಾತಂತ್ರ್ಯ ಚಳುವಳಿಯಿಂದ ಪಾನ ನಿಷೇಧ ಚಳುವಳಿವರೆಗೆ ಮಹಿಳೆಯ ಪಾತ್ರ ಗಮನಾರ್ಹ, ಎಂದಿನಿಂದಲು ಮಹಿಳೆಯರು ಪ್ರಾಮಾಣಿಕತೆಗೆ, ಸಾತ್ವಿಕತೆಗೆ ಹೆಸರಾಗಿದ್ದಾರೆ. ಭಾರತೀಯ ನಾರಿಯರು ತಮ್ಮ ಪ್ರಾಮಾಣಿಕತೆಯೊಂದಿಗೆ ಪಾರಮಾರ್ಥಿಕತೆಯನ್ನು ಮೈಗೂಡಿಸಿಕೊಂಡಿದ್ದಾರೆ. ಭಾರತೀಯ ಪರಂಪರೆಯಲ್ಲಿ, ಆಧ್ಯಾತ್ಮಿಕ, ಪರಮಾರ್ಥಿಕ ಮೌಲ್ಯಗಳು ದಿನದ ಬದುಕಿನಲ್ಲಿ ಹಾಸುಹೊಕ್ಕಾಗಿವೆ. ಕಿರಿಯರಿಂದ ಹಿರಿಯರತನಕ ಸುಲಭವಾಗಿ ಅರಿತು, ಅನುಸರಿಸಬಹುದಾದ ಸರಳ ಜೀವನ ತತ್ವ ಭಾರತೀಯರದು.

# "ಬೀಡಿ ಉದ್ಯಮದಿಂದ ಮಹಿಳೆಯರ ಆರೋಗ್ಯದ ಮೇಲೆ ಆಗುತ್ತಿರುವ ದುಷ್ಪರಿಣಾಮಗಳು"

## (ದಕ್ಷಿಣ ಕನ್ನಡ ಜಿಲ್ಲೆಯ ಒಂದು ಅಧ್ಯಯನ)

*ಎಸ್ . ಎಂ. ಮಂಗಳಾ*

ಪ್ರತಿನಿತ್ಯ ಕುಟುಂಬದ ನಿರ್ವಹಣೆಗಾಗಿ ಮಹಿಳೆಯರು ಹಲವಾರು ರೀತಿಯ ಉದ್ಯೋಗಗಳನ್ನು ಅವಲಂಬಿಸಿ ದುಡಿಯುತ್ತಿರುವುದು, ದುಡಿಮೆಯಿಂದ ಬಂದ ಸಂಪಾದನೆಯನ್ನು ಸಂಪೂರ್ಣ ಕೌಟುಂಬಿಕ ವ್ಯವಹಾರಗಳಿಗೇ ಸಂಪೂರ್ಣ ಬಳಸುವುದು, ತಮ್ಮ ಆರೋಗ್ಯದ ಬಗ್ಗೆ ಕಾಳಜಿ ತೋರಿಸದೆಯೇ ಎಷ್ಟೋ ಮಹಿಳೆಯರು ತಮ್ಮ ಇಡೀ ಜೀವನದ ಕಾಲಾವಧಿಯನ್ನು ಕುಟುಂಬದ ಅಭಿವೃದ್ಧಿಗಾಗಿಯೇ ವ್ಯಯಿಸುತ್ತಿರುವುದು ಎಲ್ಲರಿಗೂ ತಿಳಿದಿರುವ ಸಂಗತಿ. ಅಂತಹ ದುಡಿಮೆಗಳಲ್ಲಿ ಒಂದಾದ "ಬೀಡಿ ಉದ್ಯಮ" ಹೊಗೆ ಸೊಪ್ಪು ಆಧಾರಿತ ಉದ್ಯೋಗವಾಗಿದ್ದು, ಇದು ಮಹಿಳೆಯರ ಹಾಗೂ ಪ್ರಾಪ್ತ ವಯಸ್ಸಿನ ಹಾಗೂ ಅಪ್ರಾಪ್ತ ವಯಸ್ಸಿನ ಹೆಣ್ಣು ಮಕ್ಕಳು ಹೆಚ್ಚಾಗಿ ನಿರತರಾಗಿರುವುದು ಈ ಉದ್ಯೋಗದ ವೈಶಿಷ್ಟ್ಯವಾಗಿದೆ.

ಈ ಉದ್ಯೋಗವು ಮಹಿಳೆಯರ ಆರ್ಥಿಕ ಸ್ವಾವಲಂಬನೆಗೆ ಎಷ್ಟು ಅವಶ್ಯಕವಾಗಿದೆ. ಎರಡನೆಯದಾಗಿ ಆರ್ಥಿಕ ಸ್ವಾವಲಂಬನೆಯನ್ನು ಹೆಚ್ಚಿಸುವ ಮೂಲಕ ಮಹಿಳೆಯರ ಆರೋಗ್ಯದ ಮೇಲೆ ಯಾವ ರೀತಿಯ ಪರಿಣಾಮಗಳುಂಟಾಗಿವೆ, ಮೂರನೆಯದಾಗಿ ವಿದ್ಯಾವಂತ ಮಹಿಳೆಯರಿಗೆ ಉದ್ಯೋಗದ ಪರ್ಯಾಯ(Alternative) ವ್ಯವಸ್ಥೆಯ ಬಗ್ಗೆ ತಿಳಿಯುವುದೇ ಆಗಿದೆ. ಈ ಮೇಲಿನ ಉದ್ದೇಶಗಳನ್ನಿಟ್ಟುಕೊಂಡು ಸುಮಾರು ೨೦೦ ಮಂದಿ ಮಹಿಳೆಯರನ್ನು ಅಧ್ಯಯನ ಮಾಡಲಾಯಿತು(Interview) ಶೇ.೫೦ರಷ್ಟು ಅಕ್ಷರಸ್ಥ ಮಹಿಳೆಯರು ಈ ಉದ್ಯೋಗದಲ್ಲಿ ನೆಲೆಸಿದ್ದಾರೆ. ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲೆಗೆ ಹೋದವರು ಹೆಚ್ಚಿನ ಮಂದಿ. ಶೇ.೨೫ರಷ್ಟು ಪ್ರೌಢಶಿಕ್ಷಣ ಪಡೆದವರಾಗಿದ್ದಾರೆ. ಅವರಲ್ಲಿ ಶೇ.೬೪ರಷ್ಟು ಬಡತನ ರೇಖೆಗಿಂತಲೂ ಕೆಳಗಿನ ಆದಾಯವನ್ನು ಉಳ್ಳವರು ಎಂಬುದಾಗಿ ತಿಳಿಯುತ್ತದೆ. ಈ ಉದ್ಯೋಗಕ್ಕೆ ಅಕ್ಷರ ಜ್ಞಾನದ ಅವಶ್ಯಕತೆಯಿಲ್ಲದಿದ್ದರೂ ಕೌಶಲ್ಯದ ಅವಶ್ಯಕತೆ ಅತ್ಯಂತ ಮುಖ್ಯವಾಗಿರುವುದು ಕಂಡುಬರುತ್ತದೆ. ಈ ಉದ್ಯೋಗ ಹಾಗೂ ಅಕ್ಷರ ಜ್ಞಾನದ ಮಧ್ಯೆ ಹೊಂದಾಣಿಕೆಯಿದ್ದಾಗ್ಯೂ ಅಂತಹ ಕುಟುಂಬಗಳಲ್ಲಿ

ಮಹಿಳೆಯರ ಆರೋಗ್ಯದ ಬಗೆಗಿನ ವಿಚಾರಗಳು ಹಾಗೂ ಕಾಳಜಿಯ ಬಗ್ಗೆ ಗಮನಿಸಿದಾಗ ಬಂದಂತಹ ಮಾಹಿತಿಯ ಆಧಾರದ ಮೇಲೆ ಅಲ್ಲಿನ ಮಹಿಳೆಯರ ಆರ್ಥಿಕ ಸ್ವಾವಲಂಬನೆ, ಸಾಕ್ಷರತೆ, ಆರೋಗ್ಯ ಇವು ಮೂರು ವಿಷಯಗಳು ಮಹಿಳೆಯರ ಸ್ಥಾನಮಾನದ ಮೇಲೆ ಪ್ರಭಾವ ಬೀರುವ ಅಂಶಗಳಾಗಿರುವ ಬಗ್ಗೆ ಒಂದು ಮುಖ್ಯವಾದ ಮಾಹಿತಿ ಈ ಮೂಲಕ ತಿಳಿದುಬರುತ್ತದೆ.

ಈ ಅಧ್ಯಯನದ ಪ್ರಮುಖ ಜಿಲ್ಲೆಯಾದ ದಕ್ಷಿಣ ಕನ್ನಡವು ಕರ್ನಾಟಕ ರಾಜ್ಯದಲ್ಲಿ ಪ್ರಸಿದ್ಧವಾಗಿದೆ. ಇದು ರಾಜ್ಯದಲ್ಲೆ ಹೆಚ್ಚಿನ ಸಾಕ್ಷರತೆಯನ್ನು ಗಳಿಸಿದ್ದು, ಹಾಗೂ ಮಹಿಳೆಯರ Sex ratio ಲಿಂಗ ಪ್ರಮಾಣವು ಇತರೆ ಜಿಲ್ಲೆಗಳಿಗಿಂತ ಉನ್ನತ ಸ್ಥಾನದಲ್ಲಿದೆ. ಇದು ರಾಜ್ಯದ(ಕರ್ನಾಟಕ) ದಕ್ಷಿಣ ಭಾಗದಲ್ಲಿದ್ದು ಸಮುದ್ರ ತೀರ ಪ್ರದೇಶವಾಗಿದ್ದು, ಮೀನುಗಾರಿಕೆಗೂ ಹೆಚ್ಚು ಹೆಸರಾಗಿದೆ. ಈ ಜಿಲ್ಲೆಯಲ್ಲಿನ ಹೆಚ್ಚಿನ ಮಹಿಳೆಯರ ಪ್ರಮುಖ ಉದ್ಯೋಗವೆಂದರೆ ಬೀಡಿ ತಯಾರಿಕೆ. ಇಡೀ ಜಿಲ್ಲೆಯಲ್ಲಿ ೩ ಲಕ್ಷಕ್ಕಿಂತಲೂ ಹೆಚ್ಚಿನ ಮಹಿಳೆಯರು ಈ ದುಡಿಮೆಯಿಂದ ಜೀವನ ನಿರ್ವಹಿಸುತ್ತಾರೆ. ಈ ಉದ್ಯಮಕ್ಕೆ ೨೦-೨೫ ವರ್ಷಗಳ ಇತಿಹಾಸವಿದೆ.

ಸಾಮಾನ್ಯವಾಗಿ ಈ ಬೀಡಿ ತಯಾರಿಕೆಯ ಸುಮಾರು ಹಂತಗಳಲ್ಲಿ ನಡೆಯುತ್ತದೆ. ಎಲೆಕತ್ತರಿಸುವುದರಿಂದ ಹಿಡಿದು, ದಾರಹಾಕುವುದು ಬೀಡಿಗಳ ಅಂಚುಮಡಿಚುವುದು, ನಂತರ ಮತ್ತೆ ಎಣಿಸಿ ಮತ್ತೊಂದು ಕಟ್ಟುಗಳನ್ನಾಗಿ (೨೫ ಬೀಡಿಗಳ ಒಂದು ಕಟ್ಟು) ಮಾಡುವುದು. ಹೀಗೆ ಪ್ರತಿ ಕುಟುಂಬಗಳಲ್ಲೂ ಕೆಲಸವನ್ನೂ ಹಂತ ಹಂತವಾಗಿ ಹಂಚಿಕೊಂಡು ಬೀಡಿ ತಯಾರಿಸುತ್ತಾರೆ. ತಯಾರಾದ ಬೀಡಿಗಳನ್ನು ಆಯಾ ಗ್ರಾಮಗಳಲ್ಲಿ ಬರುವಂತಹ ಕಂಟ್ರಾಕ್ಟರ್ ಅಥವಾ ಏಜೆಂಟುಗಳ ಅಂಗಡಿಗಳಿಗೆ ಕೊಂಡೊಯ್ದು, ಅವರಿಗೆ ವಾಪಸ್ಸು ಮಾಡಿ, ಪುನಃ ಬೀಡಿ ತಯಾರಿಸಲು ಬೇಕಾಗುವ ಕಚ್ಛಾ ವಸ್ತುಗಳನ್ನು ಪಡೆದುಕೊಂಡು, ತಯಾರಿಸಿದ ಬೀಡಿಗಳ ಹಣವನ್ನು ತೆಗೆದುಕೊಂಡು, ಮನೆಗೆ ಬರುತ್ತಾರೆ. ಈ ಕೆಲಸವು ಪ್ರಮುಖವಾಗಿ ಮಹಿಳೆಯರಿಂದಲೇ ನಡೆಯುತ್ತದೆ. ಅದರಲ್ಲೂ ಪ್ರಮುಖವಾಗಿ ಯುವತಿಯರ ಪಾತ್ರ ಅತ್ಯಂತ ಹೆಚ್ಚು ಎಂದೇ ಹೇಳಬೇಕಾಗುತ್ತದೆ.

ಪ್ರತಿಯೊಂದು ಕುಟುಂಬದಲ್ಲೂ ಹೆಣ್ಣು ಮಕ್ಕಳು ಪ್ರಾಪ್ತವಯಸ್ಕರು (Adults) ಶಾಲೆ ಬಿಟ್ಟ ನಂತರ ಮದುವೆಯಾಗಿ ಗಂಡನ ಮನೆಗೆ ಹೋಗುವ ಮುನ್ನ ಈ ದುಡಿಮೆಯಿಂದ ಸಾವಿರಗಟ್ಟಲೆ ಹಣ ಸಂಪಾದಿಸಿ ತಮ್ಮ ಕುಟುಂಬದ ನಿರ್ವಹಣೆಗೆ ತಮ್ಮ ಆದಾಯವನ್ನು ಸಹ ಸರಿದೂಗಿಸುತ್ತಾರೆ. ಜೊತೆಗೆ ಅವರಿಗೆ ಬೇಕಾದ ಒಡವೆ, ಬಟ್ಟೆ, ಮನೆಗೆ ಬೇಕಾದ ಸಾಮಾನುಗಳನ್ನು ಕೊಳ್ಳುತ್ತಾರೆ. ತಾಯಂದಿರು ಸಂಪಾದಿಸಿದ ಹಣವನ್ನು ಸಂಪೂರ್ಣ ಕುಟುಂಬದ ವ್ಯವಹಾರಕ್ಕೆ ಉಪಯೋಗಿಸುತ್ತಾರೆ. ವರದಕ್ಷಿಣೆಕೊಟ್ಟು ಮದುವೆಯಾಗುವ ಸಂಬಂಧಗಳೇ ಹೆಚ್ಚಿರುವುದರಿಂದ ಎಷ್ಟೋ ಹೆಣ್ಣು ಮಕ್ಕಳು ತಮ್ಮ ಮದುವೆಗೂ ಹಣ ಕೂಡಿಟ್ಟವರನ್ನು ಕಾಣಬಹುದು.

ಈ ಜಿಲ್ಲೆಯಲ್ಲಿ ತಯಾರಾದ ಬೀಡಿಗಳು ಸುಮಾರು (೨೫-೩೦) ವಿಧದ ಬೀಡಿಗಳಿದ್ದು, ಇವು ದೇಶದ ನಾನಾ ಭಾಗಗಳಿಗೆ ಕೊಂಡೊಯ್ಯಲ್ಪಡುತ್ತವೆ. ಹಾಗೂ ಇತರ ರಾಜ್ಯಗಳಿಂದ ಈ ಉದ್ಯಮಕ್ಕೆ ಬೇಕಾದ ಕಚ್ಚಾ ವಸ್ತುಗಳನ್ನು ಕೂಡ ಹೊರ ರಾಜ್ಯಗಳಿಗೆ ತರಿಸಿಕೊಳ್ಳುತ್ತಿದೆ. ಇದರಲ್ಲಿ ಮುಖ್ಯ ಪಾತ್ರವಹಿಸುವವರು ಕಾರ್ಖಾನೆಯ ಮಾಲೀಕರು, ಕಂಟ್ರಾಕ್ಟದಾರರು, ಏಜೆಂಟರುಗಳು. ಈ ಮೂರೂ ಹಂತಗಳಲ್ಲಿ ಕಚ್ಚಾ ವಸ್ತುಗಳ ಸರಬರಾಜು ಹಾಗೂ ಉತ್ಪಾದನಾ ವಸ್ತುವನ್ನು ಸಂಗ್ರಹಿಸಿ, ಕಾರ್ಖಾನೆಗಳಿಗೆ ತಲುಪಿಸುವ ಕಾರ್ಯ ಈ ಕಂಟ್ರಾಕ್ಟರ್ ಹಾಗೂ ಏಜೆಂಟರುಗಳ ಮೂಲಕವಾಗಿಯೇ ನಡೆಸಲ್ಪಡುತ್ತದೆ. ಇಡೀ ಜಿಲ್ಲೆಯಲ್ಲಿ ಸಾವಿರಾರು ಮಂದಿ ಕಂಟ್ರಾಕ್ಟರ್ ಹಾಗೂ ಏಜೆಂಟರುಗಳು ಕೆಲಸ ನಿರ್ವಹಿಸುವುದು ಕಂಡುಬರುತ್ತದೆ.

ಈ ಬೀಡಿ ಉದ್ಯಮವು ವರ್ಷದ ಎಲ್ಲಾ ಕಾಲದಲ್ಲೂ ಮಾಡುವಂತಹದು ಹಾಗೂ ಹೊರಗೆ ಹೋಗದೆ ಮನೆಯಲ್ಲೇ ಕುಳಿತು ಮಾಡುವುದರಿಂದ ಪ್ರತಿಯೊಂದು ಬಡ ಕುಟುಂಬವು ಬಡವ ಶ್ರೀಮಂತರೆನ್ನದೆ ಈ ಉದ್ಯೋಗದಲ್ಲಿ ತೊಡಗಿದ್ದಾರೆ. ಅಲ್ಲದೆ ಎಲ್ಲಾ ಜಾತಿ ವರ್ಗದ ಮಹಿಳೆಯರಿಗೂ ಉದ್ಯೋಗ ಒದಗಿಸಿ ಕೊಟ್ಟಿದೆ. ಅವರ ಆರ್ಥಿಕ ಸ್ವಾವಲಂಬನೆಗೆ ಮಾದರಿಯಾಗಿದೆ. ಪ್ರತಿಯೊಬ್ಬ ಹೆಣ್ಣು ಮಗಳು ಮನೆಯಲ್ಲಿ (ಮನೆ ಕೆಲಸದ ಜೊತೆಗೆ, ಅಡಿಗೆ ಮಾಡುವುದು, ಮಕ್ಕಳನ್ನು ಶಾಲೆಗೆ ಕಳುಹಿಸಿ, ನೀರು ಸಂಗ್ರಹ, ಮುಂತಾದದವು)ಕೆಲಸಗಳ ಜೊತೆಗೆ ಉಳಿದ ಬಿಡುವಿನ ವೇಳೆಯನ್ನು ಬೀಡಿ ತಯಾರಿಸಲು ಉಪಯೋಗಿಸುತ್ತಾರೆ. ಸುಮಾರು ದಿನಕ್ಕೆ ೧೦-೧೫ ಗಂಟೆಗಳ ಕಾಲ ಕೆಲಸ. ಇಡೀ ದಿನ ಈ ದುಡಿಮೆಗೆ ಇವರ ಶ್ರಮ ವಿನಿಯೋಗವಾಗುತ್ತದೆ. ಎಷ್ಟೋ ಕುಟುಂಬದಲ್ಲಿನ ಮಹಿಳೆಯರ ಜೀವನವು ಈ ಆದಾಯದಿಂದಲೇ ನಿರ್ವಹಿಸಲ್ಪಡುತ್ತಿದೆ. ಕೆಲವು ಕುಟುಂಬಗಳಲ್ಲಿ ಪುರುಷರು. ಹೊರ ದೇಶಗಳಲ್ಲಿ ಉದ್ಯೋಗ ಅರಸಿ ಹೋದವರು ವಾಪಸ್ಸು ಬರುವುದು ೪-೫ವರ್ಷಗಳಿಗೆ ಒಂದು ಬಾರಿ. ಆ ಸಮಯದಲ್ಲಿ ಇಡೀ ಕುಟುಂಬದ ನಿರ್ವಹಣೆ, ಜವಾಬ್ದಾರಿ ಇವೆಲ್ಲವೂ ಮಹಿಳೆಯರ ಮೇಲೆಯೇ ಅವಲಂಬಿಸಿರುವುದನ್ನು ನಾವು ಇಲ್ಲಿ ಕಾಣಬಹುದಾಗಿದೆ ಬಾಂಬೆ, ದುಬಾಯಿ, ಸಿಂಗಪೂರ, ಇಂತಹ ಹಲವಾರು ದೇಶಗಳಲ್ಲಿ ಪುರುಷರು ಹೋಟೆಲ್ ಗಳಲ್ಲಿ, ವ್ಯಾಪಾರ, ಗ್ಯಾರೇಜ್ ಇತರೆ ಯಾವುದೇ ದುಡಿಮೆಯಿಂದ ಬಂದ ಸಂಪಾದನೆಯನ್ನು ೬ ತಿಂಗಳಿಗೋ, ವರ್ಷಕ್ಕೆ ಒಂದು ಅಥವಾ ಎರಡು ಭಾರಿ ಹಣ ಕಳುಹಿಸುವುದು ಕಂಡುಬರುತ್ತದೆ. ಅಂತಹ ಸಂದರ್ಭಗಳಲ್ಲಿ ಇಲ್ಲಿನ ಮಹಿಳೆಯರ ಈ ಉದ್ಯೋಗ ಅವರ ಆರ್ಥಿಕ ಸ್ವಾವಲಂಬನೆಯ ಜೊತೆಗೆ, ಕೌಟುಂಬಿಕ ಹೊಣೆಗಾರಿಕೆ, ಆ ಮೂಲಕ ಕುಟುಂಬದಲ್ಲಿ ಈಕೆಯೇ ಹೆಚ್ಚಿನ ಅಧಿಕಾರ, ಜವಾಬ್ದಾರಿಗಳನ್ನು ನಿರ್ವಹಿಸುವ ಹೊಣೆ ಮಹಿಳೆಯರ ಮೇಲೆ ಬಿದ್ದಿದೆ.

ಭೌಗೋಳಿಕ ಕಾರಣಗಳಿಂದಾಗಿ, ಮಹಿಳೆಯರು ಬೇರೆ ವಿಧದ ದುಡಿಮೆಯ ಪರ್ಯಾಯ ವ್ಯವಸ್ಥೆಯಿಲ್ಲದ ಸಂದರ್ಭದಲ್ಲಿ ಮಹಿಳೆಯರು ಅನಿವಾರ್ಯವಾಗಿ ಈ ದುಡಿಮೆಯನ್ನೆ

ಅವಲಂಬಿಸಬೇಕಾಗಿದೆ. ವ್ಯವಸಾಯ ಕ್ಷೇತ್ರದಲ್ಲಿ ಕೆಲಸದ ಅವದಿ ವರ್ಷದ ಕೆಲವೇ ತಿಂಗಳಲ್ಲಿ ಮಾತ್ರ ದುಡಿಮೆ ಸಿಗುವುದರಿಂದ ಇತರ ಬಿಡುವಿನ ಕಾಲದಲ್ಲಿ ಮಹಿಳೆಯರು ಉದ್ಯೋಗಕ್ಕೆ ಅರಸಬೇಕಾಗುತ್ತದೆ. ಅಲ್ಲದೆ, ಎಲ್ಲರಿಗು ವ್ಯವಸಾಯ ಕ್ಷೇತ್ರ ಉದ್ಯೋಗವನ್ನು ಒದಗಿಸಲಾರದು ಕೂಡ. ಏಕೆಂದರೆ ಹೆಚ್ಚಿನ ವ್ಯವಸಾಯೋತ್ಪನ್ನಗಳೆಲ್ಲವೂ ಕೂಡ ತೋಟದ ಬೆಳೆಯಾದ್ದರಿಂದ ಉದಾ:ತೆಂಗು, ಅಡಿಕೆ, ಬಾಳೆ, ಹೀಗೆ ಕೆಲವೇ ದಿನಗಳು ಮಾತ್ರ ಇಂತಹ ತೋಟಗಳಲ್ಲಿ ಕೆಲಸವಿರುತ್ತದೆ. ಈ ಕಾರಣದಿಂದಾಗಿ ಇಡೀ ವರ್ಷ ಮಹಿಳೆಯರು ನಿರುದ್ಯೋಗಿಗಳಾಗುವ ಸಂದರ್ಭ ಹೆಚ್ಚಿರುವುದರಿಂದ ಈ ಬೀಡಿ ಉದ್ಯಮ ಅತ್ಯಂತ ಹೆಚ್ಚು ಪ್ರಾಶಸ್ತ್ಯವನ್ನು ಪಡೆದು ಇಂದು ಈ ಜಿಲ್ಲೆಯು ಬೀಡಿ ಉದ್ಯಮಕ್ಕೆ ಪ್ರಸಿದ್ಧಿಯಾಗಿದೆ.

ಈ ಉದ್ಯಮವು ಮಹಿಳೆಯರಿಗೆ ಆರ್ಥಿಕ ಸ್ವಾವಲಂಬನೆಯನ್ನು ಒದಗಿಸುವುದಾದರೂ ಅವರ ಆರೋಗ್ಯದ ಮೇಲೂ ಅಷ್ಟೇ ದುಷ್ಪರಿಣಾಮಗಳನ್ನು ಬೀರಿರುವುದರಲ್ಲಿ ಸಂಶಯವಿಲ್ಲ. ಅತ್ಯಂತ ಹೆಚ್ಚಿನ ಹದಿಹರೆಯದ ಹೆಣ್ಣು ಮಕ್ಕಳು ಈ ದುಡಿಮೆಯಲ್ಲಿ ನಿರತರಾಗಿರುವುದರಿಂದ ಅವರ ಆರೋಗ್ಯದ ಜೊತೆಗೆ ಅವರು ಆಯಸ್ಸನ್ನು ಕೂಡ ಕಡಿಮೆ ಮಾಡಿಕೊಳ್ಳುವುದು ಕೆಲವೊಂದು ವಿಚಾರಗಳಿಂದ ತಿಳಿದಬರುತ್ತದೆ. ಈ ದುಡಿಮೆಗೆ ಮುಖ್ಯ ಕಾರಣ ''ಕುಟುಂಬದಲ್ಲಿನ ಬಡತನ''ದಿಂದಾಗಿ ಎಂದು ತಿಳಿಯುತ್ತದೆ. ಇಂತಹ ಹಲವಾರು ಹೆಣ್ಣು ಮಕ್ಕಳನ್ನು ಖುದ್ದಾಗಿ ಮಾತನಾಡಿಸಿದಾಗ, ಆರೋಗ್ಯದ ಬಗ್ಗೆ ಮಾಹಿತಿ ಸಂಗ್ರಹಿಸುವಾಗ ಬಂದಂತಹ ಉತ್ತರಗಳು ಅವರ ಆರೋಗ್ಯದ ಮೇಲೆ ಯಾವ ರೀತಿಯ ಪರಿಣಾಮ ಬೀರಿವೆ ಎಂಬುದು ಸ್ಪಷ್ಟವಾಗಿ ತಿಳಿಯುತ್ತದೆ.

ಒಂದೇ ಕಡೆ ಕೂತು ಕೆಲಸ ಮಾಡುವುದರಿಂದ, ಒಂದೇ ಕಡೆ ತಮ್ಮ ದೃಷ್ಟಿಯನ್ನು ಕೇಂದ್ರೀಕರಿಸುವುದರಿಂದ ಹಲವಾರು ತೊಂದರೆಗಳಿಗೆ ಬಲಿಯಾಗುತ್ತಿದ್ದಾರೆ. ತಲೆನೋವು(ಸತತವಾಗಿ ಬರುವಂತದ್ದು) ತಲೆತಿರುಗು, ಜ್ವರ ಮೈಕೈ ನೋವು, ಕೀಲುಗಳ ನೋವು, ಆಸ್ತಮಾ ರೋಗ, ಕ್ಷಯ, ಚರ್ಮದ ಮೇಲಿನ ಬಣ್ಣದ ಬದಲಾವಣೆ, ಜಾಂಡೀಸ್, ಖಾಯಿಲೆಗಳು ಮಹಿಳೆಯರನ್ನು ನಿಧಾನವಾಗಿ ಬಲಿ ತೆಗೆದುಕೊಳ್ಳುವುದರ ಜತೆಗೆ ಸಂತಾನೋತ್ಪತ್ತಿ ಆರೋಗ್ಯದ ಮೇಲೆ ಇನ್ನೂ ಹೆಚ್ಚಿನ ದುಷ್ಪರಿಣಾಮ ಉಂಟಾಗುತ್ತಿರುವುದು ತಿಳಿದುಬರುತ್ತದೆ. ನಿಧಾನವಾಗಿ ಈ ಆರೋಗ್ಯದ ದುಷ್ಪರಿಣಾಮಗಳು ಪ್ರಾಣಕ್ಕೂ ಅಪಾಯ ಒದಗಿಸಿ, ಆಸ್ಪತ್ರೆ ಸೇರುವ ಮಹಿಳೆಯರನ್ನು ನಾವು ಕಾಣಬಹುದಾಗಿದೆ.

ಹೀಗಿದ್ದರೂ ಸಹ ಎಷ್ಟೋ ಮಹಿಳೆಯರು ಹೆಣ್ಣು ಮಕ್ಕಳು ಆಸ್ಪತ್ರೆಗಳಿಗಾಗಲೀ, ಡಾಕ್ಟರರ ಹತ್ತಿರವಾಗಲೀ ಹೋಗಿ ತೋರಿಸಿ ಕೊಳ್ಳುವಲ್ಲಿ ಹಿಂಜರಿಯುತ್ತಾರೆ. ಕೆಲವು ಖಾಯಿಲೆಗಳ ಬಗ್ಗೆ ಅರಿವೇ ಇಲ್ಲದಿರುವ ಮಹಿಳೆಯರು ತಮ್ಮ ಆರೋಗ್ಯದ ಬಗ್ಗೆಯೇ ಅಲಕ್ಷಿಸುತ್ತಾರೆ. ಆಸ್ಪತ್ರೆ ಸೇರಿದರೆ ಖರ್ಚಿಗೆ ಹೆಚ್ಚು ಹಣ ಎಲ್ಲಿಂದ ತರುವುದು ಎಂಬುದು ಕೆಲವೊಬ್ಬರ ಉತ್ತರವಾದರೆ, ಖಾಯಿಲೆ ಬಂದು ದುಡಿಮೆ ಬಿಟ್ಟರೆ ನಮ್ಮ ಜೀವನದಲ್ಲಿ

ಕಷ್ಟವಾಗುತ್ತದೆ ಎಂಬುದು ಕೆಲವು ಮಹಿಳೆಯರ ಅಭಿಪ್ರಾಯವಾಗಿರುತ್ತದೆ. ಇಂತಹ ಎಷ್ಟೋ ಬಡ ಮಹಿಳೆಯರನ್ನು ನಾವು ಅಲ್ಲಿ ಕಾಣಬಹುದಾಗಿದೆ. ಮತ್ತೊಂದು ಕಾರಣವೆಂದರೆ ಒಂದು ಗ್ರಾಮದಿಂದ ಮತ್ತೊಂದು ಗ್ರಾಮಕ್ಕೆ ಎಷ್ಟೋ ಅಂತರವಿರುವ ಕಡೆಗಳಲ್ಲಿ ಆಸ್ಪತ್ರೆಗಳ ಕೊರತೆಯು ಮತ್ತೊಂದು ಕಾರಣವಾಗಿರುತ್ತದೆ. ಆಗ ಎಷ್ಟೋ ದೂರ ನಡೆದು ಹೋಗಬೇಕಾದ ಪ್ರಸಂಗ ಬೇರೆಯಿರುವುದರಿಂದ ಅವರು ಆರೋಗ್ಯದ ಬಗ್ಗೆ ಅಷ್ಟೇನೂ ಕಾಳಜಿ ವಹಿಸಿದಂತೆ ಕಾಣುವುದಿಲ್ಲ.

ಇಂತಹ ಸಂದರ್ಭದಲ್ಲಿ ದುಡಿಮೆಗಾರರ ಒಳಿತಿಗಾಗಿ, ಅವರ ಆರೋಗ್ಯ ಸುಧಾರಣೆಗಾಗಿ ಹಲವಾರು ಕಾರ್ಯಕ್ರಮಗಳನ್ನು ಸರ್ಕಾರ ಅಥವಾ ಖಾಸಗಿ ಉದ್ದಿಮೆಯ ಮಾಲೀಕರು ಕೈಗೊಳ್ಳಬೇಕಾಗುತ್ತದೆ. ಕೆಲವೊಂದು ಸುಧಾರಣ ಕಾರ್ಯಕ್ರಮಗಳನ್ನು ಹೇಳುವುದಾದರೆ-

೧. ಆಸ್ಪತ್ರೆಗಳು ಆದಷ್ಟು ಬಡ ಜನರಿಗೆ ತಮ್ಮ ಸೇವೆಗಳನ್ನು ಮೀಸಲಿಡಬೇಕು.

೨. ಆಗಾಗ್ಗೆ ಆರೋಗ್ಯ ತಪಾಸಣಾ ಶಿಬಿರಗಳನ್ನು ಏರ್ಪಡಿಸಿ (ಗ್ರಾಮಗಳಲ್ಲಿ) ಆರೋಗ್ಯದ ಬಗ್ಗೆ ಮಹಿಳೆಯರಿಗೆ ತಿಳುವಳಿಕೆ ನೀಡುವುದು

೩. ಇದುವರೆಗೂ ಬೀಡಿ ಉದ್ಯಮದಲ್ಲಿ ದುಡಿಯುವ ಮಹಿಳೆಯರಿಗೆ ಆಸ್ಪತ್ರೆಗಳಲ್ಲಿ ಮೀಸಲಾತಿ ಇರುವುದಾದರು, ಅದನ್ನು ಅವರು ಸರಿಯಾಗಿ ಉಪಯೋಗಿಸಿಕೊಳ್ಳಲು, ಈ ಉದ್ಯಮದ ಮಾಲೀಕರು ಅವರಿಗೆ ತಿಳುವಳಿಕೆ ನೀಡಬೇಕು.

೪. ಕ್ಷಯರೋಗ, ಕ್ಯಾನ್ಸರ್ ಈ ತರಹದ ಮಾರಕ ರೋಗಗಳ ಬಗ್ಗೆ ಮಹಿಳೆಯರು ತುಂಬಾ ಕಾಳಜಿ ವಹಿಸುವಂತೆ ಎಚ್ಚರಿಕೆ ನೀಡಬೇಕು ಹಾಗೂ ಅವರು ಭವಿಷ್ಯದಲ್ಲಿ ನಿರ್ವಹಿಸಬೇಕಾದ ತಾಯ್ತನದ ಪ್ರಾಮುಖ್ಯತೆ, ಮುಂದೆ ಹುಟ್ಟುವ ಮಕ್ಕಳಿಗೆ ಈ ರೋಗಗಳು ಬಾರದಂತೆ ನೋಡಿಕೊಳ್ಳಲು ಪ್ರಾಪ್ತ ವಯಸ್ಸಿನ ಹೆಣ್ಣು ಮಕ್ಕಳಲ್ಲಿ ಮುನ್ನೆಚ್ಚರಿಕೆ ನೀಡಬೇಕು. ಆದಷ್ಟು ಇಂತಹ ಪ್ರದೇಶಗಳಲ್ಲಿ ಮಹಿಳಾ ಡಾಕ್ಟರರನ್ನು ನೇಮಿಸಿ ಆ ಗ್ರಾಮಗಳಲ್ಲಿ ಕಾರ್ಯನಿರ್ವಹಿಸುವಂತೆ ಸಲಹೆ ನೀಡಬೇಕು.

೫. ಆದಷ್ಟು ಈ ಕೆಲಸ ಮಾಡುವ ಸಂದರ್ಭದಲ್ಲಿ ಗಾಳಿ, ಬೆಳಕು ಚೆನ್ನಾಗಿರುವ ಜಾಗದಲ್ಲಿ ಕೂತು ಕೆಲಸ ನಿರ್ವಹಿಸಿದರೆ ಸ್ವಲ್ಪ ಮಟ್ಟಿಗಾದರು ಆರೋಗ್ಯದ ಮೇಲೆ ಆಗುವ ದುಷ್ಪರಿಣಾಮಗಳನ್ನು ತಡೆಗಟ್ಟಬಹುದು.

ಒಟ್ಟಾರೆ, ಬೀಡಿ ಉದ್ಯಮವು ಒಂದು ರೀತಿಯಲ್ಲಿ ಮಹಿಳೆಯರಿಗೆ ಆರ್ಥಿಕ ಸ್ವಾವಲಂಬನೆಯನ್ನು ನೀಡುವಂತಹ ಉದ್ಯೋಗವಾಗಿದ್ದು, ವರ್ಷದ ಎಲ್ಲಾ ಕಾಲದಲ್ಲೂ ಇರುವ ಜಾಗದಲ್ಲೇ ಸಂಪಾದಿಸಿ ಜೀವನ ನಡೆಸಬಹುದಾದರೂ, ಇದು ಮಹಿಳೆಯರ ಆರೋಗ್ಯದ ಮೇಲೆ ಹೆಚ್ಚಿನ ಪರಿಣಾಮ ಬೀರುವುದರಿಂದ, ಅವರು ಅನೇಕ ಹಾನಿಕಾರಕ ರೋಗಗಳಿಗೆ ಬಲಿಯಾಗುತ್ತಾರೆ. ಇಂತಹ ರೋಗಗಳು ಒಮ್ಮೆ ಬಂದ ನಂತರ ತಲೆಮಾರಿನಿಂದ ಮತ್ತೊಂದು ತಲೆಮಾರಿಗೂ ಬಹಳ ಸುಲಭವಾಗಿ ವರ್ಗಾಯಿಸಲ್ಪಡುತ್ತದೆ. ಆದಷ್ಟು ಈ ತೊಂದರೆಗಳು ದುಷ್ಪರಿಣಾಮಗಳನ್ನು ತಡೆಗಟ್ಟುವ ಮೂಲಕ ಮಹಿಳೆಯರ

ಸಾವಿನ ಪ್ರಮಾಣವನ್ನು ಕಡಿಮೆಗೊಳಿಸಿದ್ದೇ ಆದರೆ ಯಾವುದೇ ಒಂದು ಉದ್ಯೋಗವು ಮಹಿಳೆಯರ ಸರ್ವತೋಮುಖ ಅಭಿವೃದ್ಧಿಗೆ ಸಹಾಯಕವಾಗುವುದರಲ್ಲಿ ಸಂಶಯವಿಲ್ಲ. ಆದ್ದರಿಂದ ಲಕ್ಷಾಂತರ ಮಹಿಳೆಯರು ಈ ದುಡಿಮೆಯಲ್ಲಿ ಅವಲಂಬಿಸಿರುವ ಕಾರಣ ಸರ್ಕಾರವೂ ಕೂಡ ಇಂತಹ ಮಹಿಳಾ ದುಡಿಮೆಗಾರರ ಬಗ್ಗೆ ಕಾಳಜಿವಹಿಸಬೇಕಾಗುತ್ತದೆ. ಅವರಿಗೆ ಅನುಕೂಲಕರ ಪರಿಸರವನ್ನು ನಿರ್ಮಾಣ ಮಾಡಿಕೊಡಬೇಕಾಗುತ್ತದೆ.

# ಈ ಸಂಚಿಕೆಯಲ್ಲಿ

**ಗೀತಾ ಕೃಷ್ಣಮೂರ್ತಿ**
೧೫೬, 'ಅಭಿಲಾಷ'
೪ನೇ ಮುಖ್ಯರಸ್ತೆ, ಪದ್ಮನಾಭನಗರ
ಬೆಂಗಳೂರು ೫೬೦ ೦೭೦

**ಜ್ಯೋತಿ ಶಶಿಕುಮಾರ**
ಶರಧಿ, ೧೧೫ : ೧೦,
೧೫ನೇ ಕ್ರಾಸ್, ವೈಯಾಲಿಕಾವಲ್
ಬೆಂಗಳೂರು ೫೬೦ ೦೦೩

**ಜಿ. ರಾಮಕೃಷ್ಣ**
೭೧೩, ವಿಜಯಾ ಮ್ಯಾನ್‌ಶನ್
ಮೊದಲನೇ ಮುಖ್ಯರಸ್ತೆ
ಆರ್.ಪಿ.ಸಿ.ಲೇಔಟ್
ಬೆಂಗಳೂರು ೫೬೦ ೦೪೦

**ಕಮಲಾ ನಂದೆಪ್ಪ**
ನಂ.೪, ಜಿ.೭, ಬ್ರಿಗೇಡ್ ಪಾರ್ಕ್‌ವ್ಯೂ
ಬಿ.ಪಿ.ವಾಡಿಯಾ ರಸ್ತೆ, ಬಸವನಗುಡಿ
ಬೆಂಗಳೂರು ೫೬೦ ೦೦೪

**ವೆಂ. ವನಜ**
ಎಲ್.೩, ೭ನೇ ತಿರುವು
ವಿಶ್ವವಿದ್ಯಾನಿಲಯ ವಸತಿ ಗೃಹ
ಮಾನಸಗಂಗೋತ್ರಿ
ಮೈಸೂರು ೫೭೦ ೦೦೬

**ಎಂ.ಡಿ. ಉಷಾದೇವಿ**
ಶಿಕ್ಷಣ ವಿಭಾಗ
ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆ
ಅಧ್ಯಯನ ಸಂಸ್ಥೆ, ನಾಗರಬಾವಿ
ಬೆಂಗಳೂರು ೫೬೦ ೦೫೬

**ಮಮತಾ ಜಿ. ಸಾಗರ**
ಜಿ.೨, ಎ, ಸಾಯಿಪ್ರಿಯಾ
ಅಪಾರ್ಟ್‌ಮೆಂಟ್ ೧೨-೨-೭೯೦/೭೩,
ಅಯೋಧ್ಯನಗರ್, ಮೆಹದಿಪಟ್ಟಣಂ
ಹೈದರಾಬಾದ್ ೫೦೦ ೦೨೮

**ಡಾ. ಎಸ್.ಎಂ. ಮಂಗಳಾ**
ಮಹಿಳಾ ಅಧ್ಯಯನ ಕೇಂದ್ರ
ಮಾನಸಗಂಗೋತ್ರಿ
ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು

**ಡಾ. ಎಚ್. ಎಸ್. ಶ್ರೀಮತಿ**
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

**ಡಾ. ಶೈಲಜಾ ಹಿರೇಮಠ**
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

**ಡಾ.ಬಿ. ಶೇಷಾದ್ರಿ**
ರಾಧಿಕಾ, ನೆಹರೂ ಕಾಲೊನಿ
ಬಳ್ಳಾರಿ

**ಸಿ. ಎಂ. ಸುಲೋಚನಾ**
ಉಪನ್ಯಾಸಕರು
ಬೀರೂರು ೫೭೭ ೧೧೬

**ನ. ಕೃ. ಲೋಲಾಕ್ಷಿ**
ಸಂಶೋಧಕಿ
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ
ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು

**ಕೆ. ಲಕ್ಷ್ಮಣರಾವ್**
ಸಹಾಯಕ ಶಿಕ್ಷಕರು
ಪೇಪರ್‌ಟೌನ್ ಹೈಸ್ಕೂಲ್
ಭದ್ರಾವತಿ ೫೭೭ ೩೦೨

ಮಹಿಳೆಯ ಅಸ್ಮಿತೆ, ಅಸ್ತಿತ್ವಗಳನ್ನು ಗುರುತಿಸುವ, ಅವಳ ಬದುಕನ್ನು ಸುಗಮವಾಗಿಸುವ ದಿಸೆಯಲ್ಲಿ ಚಿಂತನೆ ನಡೆಸುವ ಮಾಧ್ಯಮಗಳಿಗಾಗಿ ಹುಡುಕಾಟ ನಡೆಸಬೇಕಿದೆ. ಏಕೆಂದರೆ ಈವರೆಗೂ ಈ ಪುರುಷಪ್ರಧಾನ ಸಮಾಜಕ್ಕೆ ಮಹಿಳೆಯನ್ನು ದುಡಿಸಿಕೊಳ್ಳುವುದು ಹೇಗೆ ಎಂಬುದೇ ಚಿಂತೆಯಾಗಿದೆಯೇ ಹೊರತು ಅವಳ ಅಗತ್ಯಗಳನ್ನು ಗಮನಿಸಬೇಕೆಂದು ಅನಿಸಿದ್ದಿಲ್ಲ. ಇಂದಿನ ಜಾಗ್ರತ ಮಹಿಳೆ ತನ್ನ ವರ್ತಮಾನ, ಭವಿಷ್ಯಗಳನ್ನು ತಿದ್ದಿ ರೂಪಿಸುವ ಸಾಮರ್ಥ್ಯವನ್ನು ಕ್ರಮೇಣ ಪಡೆಯುತ್ತಿದ್ದಾಳೆ. ಈ ಹಂತದಲ್ಲಿ ಗಂಭೀರವಾದ ಚಿಂತನೆ, ಚರ್ಚೆ, ಸಲಹೆ, ಸೂಚನೆಗಳನ್ನು ಕೊಡುತ್ತಾ ಅವಳ ಪ್ರಯತ್ನಕ್ಕೆ ನೆರವಾಗುವ ಪತ್ರಿಕೆಗಳ ಅಗತ್ಯವನ್ನು ಪೂರೈಸುವ ಪ್ರಯತ್ನವಾಗಿ ಈ ಮಹಿಳಾ ಅಧ್ಯಯನ ಪತ್ರಿಕೆ ಕೆಲಸ ಮಾಡುತ್ತಿದೆ. ಇಲ್ಲಿನ ಚಿಂತನೆ, ಚರ್ಚೆಗಳು ತಾತ್ತ್ವಿಕ ನೆಲೆಯ ಶೋಧಗಳಲ್ಲಿರುವ ವಿದ್ವಾಂಸರೂ ಕ್ರಿಯಾಕ್ಷೇತ್ರಗಳಲ್ಲಿರುವ ಕಾರ್ಯಕರ್ತರೂ ಪರಸ್ಪರ ಸಂವಾದ ನಡೆಸಲು ನೆರವಾಗುವಂತಿರಲಿ ಎಂಬ ಆಶಯದವಾಗಿವೆ.